ಮಿಂಚಿನ ಬಳ್ಳಿಯ ಎರಡನೆಯ ಕುಡಿ

# ತರುಣತುರ್ಕಸ್ತಾನ

## ಅರ್ಥಾತ್

# ಕಮಾಲ ಪಾಶಾ



ಬರೆದವರು :

“ ವಿಲಾಸಿ ”

ಚಾಲುಕ್ಯ ವಿಕ್ರಮ ಶಕೆ ೮೬೩

ಚೈ. ಶು. ೧]        ೧ ರೂ.        [೧೯೩೮

ಓಂ

## ಒಂದೆರಡು ಮಾತು

ಮಿಂಚಿನ ಬಳ್ಳಿಯ ಎರಡನೇ ಕುಡಿಯನ್ನು ಕನ್ನಡಿಗರಿಗೆ ಸಕಾಲಕ್ಕೆ ಅರ್ಪಿಸಲು ಆನಂದವಾಗುತ್ತಿದೆ. ಕರ್ನಾಟಕ ದರ್ಶನದಿಂದ ಒಮ್ಮೆಲೆ ಕ್ರಾಂತಿಕಾರಕನಾದ ಕಮಾಲನ ಮಿಂಚು ಹೊಡೆದುದನ್ನು ಕಂಡು ಕೆಲವರು ಚಕಿತರಾಗಿರಬಹುದು. ವಿಚಾರ-ಜಾಗೃತಿಯೇ ನಮ್ಮ ಬಳ್ಳಿಯ ಗುರಿಯು. ಕರ್ನಾಟಕ-ದರ್ಶನದಿಂದ ಅಂತರ್ಮುಖಿಗಳಾದ ನಮಗೆ, ಮುಂದಣ ಮಾರ್ಗದ ಅವಶ್ಯಕತೆಯಿದೆ. **ಕರ್ನಾಟಕದ ಮಂಗಲ ಪ್ರಭಾತದ** ಕಿಲಕಿಲಾಟದ ಈ ಸುಸಮಯದಲ್ಲಿ ಪರತಂತ್ರವಾದ ತುರ್ಕಸ್ಥಾನದಲ್ಲಿ ನವಚೈತನ್ಯವನ್ನು ತುಂಬಿ, ರಾಜ್ಯಕ್ರಾಂತಿ-ಧರ್ಮಕ್ರಾಂತಿಗಳನ್ನುಂಟುಮಾಡಿ, ಸ್ವತಂತ್ರವಾದ ಸ್ವಯಂಪೂರ್ಣವಾದ ತುರ್ಕಸ್ಥಾನ ರಾಷ್ಟ್ರವನ್ನು ನಿರ್ಮಾಣಮಾಡಿದ ಕ್ರಾಂತಿಕಾರಕನಾದ ಕಮಾಲನ ವೀರಚರಿತೆಯು, ಕನ್ನಡ ತರುಣರಿಗೆ **ಸಂಜೀವನಿ**ಯಾಗಬೇಕೆಂಬ ಉದ್ದೇಶದಿಂದ ಈ ಸಾಹಸಕ್ಕೆ ಕೈಯಿಕ್ಕಿದ್ದೇವೆ.

ಈ ದೃಷ್ಟಿಯಿಂದ 'ವಿಲಾಸಿ' ಯವರಿಗೆ ವಿನಂತಿ ಮಾಡಿಕೊಳ್ಳಲು, ಅವರು ಆನಂದದಿಂದ ಬರೆದುಕೊಟ್ಟದ್ದಕ್ಕಾಗಿ ಅವರಿಗೆ ನಾನು ತುಂಬಾ ಋಣಿಯಾಗಿದ್ದೇನೆ. ಅವರ ಲೆಕ್ಕಣಿಕೆಯ ವಿಷಯವಾಗಿಯೂ, ವಿಚಾರಗಳ ವಿಷಯವಾಗಿಯೂ ನಾನು ಬರೆಯುವದು ನನ್ನ ಅಧಿಕಾರಕ್ಷೇತ್ರದ ಹೊರಗಿನದು. ಆದರೆ, ಒಂದು ಮಾತು ಮಾತ್ರ ಹೇಳಬಯಸುತ್ತೇನೆ. **ಕರ್ನಾಟಕವು ಸ್ವತಂತ್ರ ರಾಷ್ಟ್ರವಾಗಬೇಕು, ಕನ್ನಡಿಗರು ಮಾನವರಾಗಬೇಕು, ಕನ್ನಡವನ್ನು ಕಟ್ಟಬೇಕು** ಎಂದು ಹೆಣಗುತ್ತಿರುವ ಕನ್ನಡಿಗರಲ್ಲಿ ಇವರೊಬ್ಬರು ಎಂಬುದನ್ನು ಓದುಗರು ಲಕ್ಷ್ಯದಲ್ಲಿಡಬೇಕು. ಅಂದರೆ, ಗ್ರಂಥದಲ್ಲಿ ಒಂದು ಹೊಸಬೆಳಕನ್ನು ಕಾಣುವಿರಿ.

ಗ್ರಂಥದ ವಿಷಯವಾಗಿ ನಾನೇನು ಹೇಳಬೇಕಾಗಿಲ್ಲ, ಬರೆಹ ಗಾರರೇ ಎಚ್ಚರ ಕೊಟ್ಟಿದ್ದಾರೆ. ಹೇಳಿದ್ದಾರೆ. ಇನ್ನೇನಾದರೂ ಹೇಳುವ ದುಳಿದಿದ್ದರೆ, ವಾಚಕರದು. ಆದರೆ ಕನ್ನಡ ತರುಣರಿಗೆ ಒಂದು ಮಾತು ಹೇಳಲು ಅಂತಃಕರಣವು ಒತ್ತಾಯಪಡಿಸುತ್ತಿದೆ. ಕಮಾಲನ ವೀರ ಜೀವನದ ಅನುಕರಣ ಮಾಡಿರಿ, ಮನನ ಮಾಡಿರಿ. ಕಮಾಲನು ತುರ್ಕಸ್ಥಾನವನ್ನು ಕಟ್ಟಿದಂತೆ, ಕನ್ನಡನಾಡನ್ನು ಕಟ್ಟುವ ಸಾಹಸ ಮಾಡಿರಿ. ಅಂದರೆ, ನಾವು ಮಾಡಿದ ಸಾಹಸದ ಸಾರ್ಥಕತೆಯಾಗುವದು.

ಇನ್ನು ಮಿಂಚಿನ ಬಳ್ಳಿಯ ವಿಷಯವಾಗಿ ಒಂದೆರಡು ಮಾತು ಹೇಳಬಯಸುತ್ತೇನೆ. ಮಿಂಚಿನ ಬಳ್ಳಿಯು ಗ್ರಂಥಮಾಲೆಯು. ಇದೇ ಒಂದು ಪುಸ್ತಕವಲ್ಲ, ಮಾಸಿಕವಲ್ಲ. ವಿಚಾರಕ್ರಾಂತಿಯುಳ್ಳ ೪ ಗ್ರಂಥ ಗಳನ್ನು ವರ್ಷದಲ್ಲಿ ಪ್ರಕಟಿಸುವ ಗ್ರಂಥಮಾಲೆಯು. ಇದರಲ್ಲಿ ಕೇವಲ ಕರ್ನಾಟಕಕ್ಕೆ ಸಂಬಂಧಿಸಿದ ವಿಷಯಗಳೇ ಇರುವವೆಂದು ಭಾವಿಸ ಲಾಗದು. ಜಗತ್ತಿನಲ್ಲಿಯ ಎಲ್ಲ ವಿಚಾರಗಳ ಪ್ರೌಢಗ್ರಂಥಗಳು ಪ್ರಕಟ ವಾಗುವವು. ಆದರೆ, ಪ್ರತಿಯೊಂದು ಗ್ರಂಥವೂ ಕನ್ನಡಿಗರ ಅಂತರಂಗ ವನ್ನು ಕಲಕುವಮಲಕು ಮಾಡದೆ ಬಿಡದು. ಕನ್ನಡಿಗರಲ್ಲಿ ವಿಚಾರಕ್ರಾಂತಿ ಯನ್ನುಂಟುಮಾಡಿ, ವೀರಜೀವಿಗಳನ್ನು ಮಾಡುವದೇ ನಮ್ಮ ಬಯಕೆ.

ಆದುದರಿಂದ ಈ ರಾಷ್ಟ್ರೀಯ ಜಾಗೃತಿಯ ಕಾರ್ಯದಲ್ಲಿ ಕನ್ನಡಿಗ ರೆಲ್ಲರೂ ಕೊಡುಗೈಯಿಂದ ನೆರವಾಗಬೇಕೆಂದು ಬಿನ್ನವಿಸುವ

ತಮ್ಮ

**ಬುರ್ಲಿ ಬಿಂದುಮಾಧವ**

# ಪರಿವಿಡಿ

## ಜೋಕೆ!

ಇಂತಹ ಗ್ರಂಥವನ್ನು ಬರೆಯಲು ನನಗೆ ಅಧಿಕಾರವೆ ಇಲ್ಲ; ಅದಕಾಗಿಯೆ ನಿಮ್ಮೆಲ್ಲರ ಮುಂದೆ ನಾನು ನನ್ನ ಹೆಸರನ್ನು ಮುಚ್ಚಿಟ್ಟದ್ದು. ನಾನು ಕಲಿತದ್ದು ಪಠ್ಯಪುಸ್ತಕಗಳ ಇತಿಹಾಸ, ಜಗತ್ತಿನ ಇತಿಹಾಸವಲ್ಲ; ನಾನು ಅಭ್ಯಾಸಮಾಡುತ್ತಿರುವುದು ಅರ್ಥವನ್ನು ಹೇಗೆ ಗಳಿಸಬೇಕೆಂಬ ಶಾಸ್ತ್ರ, ಅರ್ಥಶಾಸ್ತ್ರವಲ್ಲ; ನನ್ನ ಜ್ಞಾನ ನಿಷ್ಕಾರಣ, ರಾಜಕಾರಣವಲ್ಲ. 'ಕನ್ನಡ ಸಾಹಿತ್ಯದಲ್ಲಿ ಚರಿತ್ರಗ್ರಂಥಗಳಿಲ್ಲ, ನಿಮಗೆ ಬರೆಯುವ ಅಭ್ಯಾಸವಿದೆ, ನನಗಾಗಿ ಪ್ರಯತ್ನ ಮಾಡಬಾರದೆ?' ಎಂದರು ಈ ಬಳ್ಳಿಯ ತೋಟಗಾರರು. ಸ್ನೇಹಕ್ಕಾಗಿ ಆದರ, ಸಾಹಿತ್ಯಕ್ಕಾಗಿ ಅಭಿಮಾನ–ಇವೆರಡೆ ಭಾವನೆಗಳಿಂದ ಪ್ರೇರಿತನಾಗಿ ನಾನೀ ಸಾಹಸಕ್ಕೆ ಕೈಹಾಕಿರುವೆ.

ಈ ಗ್ರಂಥ ಬರೆಯಲು ಸ್ಫೂರ್ತಿದೊರೆಯಲೆಂಬ ಆಶೆಯಿಂದ ನಾನು ಎರಡು ಇಂಗ್ಲಿಶ ಗ್ರಂಥಗಳನ್ನು ಓದಿಕೊಂಡೆ. * ನನ್ನ ಯೋಗ್ಯತೆಗೆ ಅಷ್ಟೆ ಸಾಕೆನಿಸಿತು. ಕಮಾಲ ಪಾಶಾ ಇವರ ವಿಷಯವಾಗಿ, ಆಧುನಿಕ ತುರ್ಕಸ್ತಾನದ ವಿಷಯವಾಗಿ ಇನ್ನೂ ಕೆಲವು ಗ್ರಂಥಗಳನ್ನು ಓದಿಕೊಳ್ಳಬಹುದಾಗಿತ್ತು. ಆದರೆ ನಾವು ಬರೆಯುವವರು ಅರ್ಥಾತ್ ಬಡವರು; ಓದುವ ಭಾಗ್ಯ ನಮಗೆ ದೊರೆಯುವುದು ಸುಲಭವಲ್ಲೆಂದು ಬೇರೆ ಹೇಳಬೇಕೆ?

ಸದ್ಯದ ಗ್ರಂಥವು ನಾನು ಓದಿದ ಗ್ರಂಥಗಳ ಭಾಷಾಂತರವಲ್ಲ; ನಾನು ಓದದೆ ಇದ್ದ ಗ್ರಂಥಗಳ ಭಾಷಾಂತರವಾಗಿದ್ದರೆ ದೋಷ ನನ್ನದಲ್ಲ. ಚರಿತ್ರೆಯ ವಿಷಯಕ್ಕೆ ಅವಶ್ಯವಿದ್ದ ಸಂಗತಿಗಳನ್ನು

---

* (1) Grey Wolf by H. C. Armstrong.
(2) Kemal Ataturk by Hanns Froembgen.

ಆ ಎರಡು ಗ್ರಂಥಗಳಿಂದ ಆಯ್ದುಕೊಂಡಿದ್ದೇನೆ, ಮಹಾಯುದ್ಧದ ಮುಂಚಿನ ಕಾಲಕ್ಕಾಗಿ ಒಂದೆರಡು ಯುರೋಪದ ಇತಿಹಾಸಗ್ರಂಥಗಳನ್ನು ನೋಡಿಕೊಂಡಿದ್ದೇನೆ. ಚರಿತ್ರೆಯಲ್ಲಿಯ ಅನೇಕ ಸಂಗತಿಗಳನ್ನು ಹೊಂದಿಸಿಕೊಂಡಿರುವ ರೀತಿ ಮತ್ತು ಹೊಣೆಗಾರಿಕೆ ನನ್ನದೆ ಆಗಿದೆ. ಅಲ್ಲಲ್ಲಿ ಕೆಲವು ಸ್ವಭಾವಸಮಸ್ಯೆಗಳನ್ನು ಚರ್ಚಿಸಿದ ಭಾಗವೂ ತೀರ ಸ್ವತಂತ್ರವಾಗಿದೆ ಎಂದರೆ ನನ್ನದೇ ಆಗಿದೆ. ಈ ಗ್ರಂಥವನ್ನು ಬರೆಯುವಾಗ ನನ್ನದೊಂದು ವಿಶಿಷ್ಟ ಉದ್ದೇಶವಿದ್ದಿತು. ಅದನ್ನು ಮೊದಲನೆಯ ಪ್ರಕರಣದಲ್ಲಿಯೆ ಸೂಚಿಸಿದ್ದೇನೆ. ಭಾರತದೇಶಕ್ಕೂ ಕಮಾಲಪಾಶಾ ಇವರ ಮುಂಚಿನ ತುರ್ಕಸ್ತಾನಕ್ಕೂ ಸ್ಥಿತಿ-ಗತಿಗಳಲ್ಲಿ ಅತ್ಯಂತ ಸಾಮ್ಯವಿದೆ ಎಂದು ನನ್ನ ಅಭಿಪ್ರಾಯ. ತುರ್ಕಸ್ತಾನಕ್ಕಿಂತ ನಮ್ಮ ಸಮಾಜವು ಹೆಚ್ಚು ಕೀಳುಮೆಟ್ಟಿಲಿಗೆ ಮುಟ್ಟಿದೆ ಎಂಬುದೊಂದೆ ವೈಷಮ್ಯ. ಕಳೆದ ಇಪ್ಪತ್ತು ವರ್ಷಗಳಲ್ಲಿ ತುರ್ಕಸ್ತಾನವು ಚೈತನ್ಯಭರಿತರಾಷ್ಟ್ರವಾಗಿದೆ. ತುರ್ಕಸ್ತಾನಕ್ಕೆ ಎಂದಿಸಿಂದಲೂ ರಾಜಕೀಯ ಸ್ವಾತಂತ್ರ್ಯವಿದ್ದಿತು ಎಂಬುದನ್ನು ನಾವು ಮರೆಯುವಂತಿಲ್ಲ. ರಾಜಕೀಯ ಸ್ವಾತಂತ್ರ್ಯವಿದ್ದರೂ ಕೂಡ ದೇಶದಲ್ಲಿ ದಾರಿದ್ರ್ಯ, ಅಜ್ಞಾನ, ದಾಸ್ಯವೃತ್ತಿ, ಅಂಧಶ್ರದ್ಧೆ, ಅಭಿಮಾನಶೂನ್ಯತೆ-ಇವು ಜನತೆಯ ರಕ್ತಗತ ಗುಣಗಳಾಗಿದ್ದುವು. ರಾಜಕೀಯ ಸ್ವಾತಂತ್ರ್ಯವು ಎಲ್ಲ ರೋಗಗಳಿಗೆ ರಾಮಬಾಣ ಎಂದು ತಿಳಿಯುವ ನಮ್ಮ ತರುಣರು ಈ ಮಾತನ್ನು ಲಕ್ಷ್ಯಪೂರ್ವಕವಾಗಿ ಗಮನಿಸಬೇಕು. ರಾಜಕೀಯ ಸ್ವಾತಂತ್ರ್ಯವು ನಮ್ಮ ವ್ಯವಹಾರದ ಒಂದು ಅಂಗ; ಸಾಮಾನ್ಯ ಮನುಷ್ಯನ ದಿನದ ವ್ಯವಹಾರದ ಮನೋವೃತ್ತಿಯೆ ನಮ್ಮ ಜೀವನದ ತಳಹದಿ. ತಳಹದಿಯನ್ನು ಗಟ್ಟಿಮಾಡದೆ ಕಟ್ಟಡವನ್ನು ಕಟ್ಟುವಂತಿಲ್ಲ. ಸಾಮಾನ್ಯ ಮನುಷ್ಯನ ದಿನಚರಿಯ ಮನೋವೃತ್ತಿಯಲ್ಲಿ ಜ್ಞಾನ-ಧನ-ಅಭಿಮಾನಗಳನ್ನು ಅಂಕುರಿಸದೆ ನಾವು ನಮ್ಮ ರಾಷ್ಟ್ರವನ್ನು ಕಟ್ಟುವಂತಿಲ್ಲ. ಕಮಾಲ ಪಾಶಾ ಇವರ ಜೀವನದಲ್ಲಿ ಇಂತಹ ಧೋರಣೆಯೆ ಇದ್ದಿತು ಎಂದು ನನಗೆ ಹೊಳೆದ ಮಾತು. ಇಂದು ತುರ್ಕಸ್ತಾನದಲ್ಲಿ ತೋಫುಗಳ ಶಕ್ತಿ ಇರದಿದ್ದರೂ, ಮನಃಶಕ್ತಿ ಇದೆ,

ಆತ್ಮವಿಶ್ವಾಸವಿದೆ; ಪ್ರತಿಯೊಬ್ಬನು ಜ್ಞಾನಸಂಪನ್ನನಾಗಿರದಿದ್ದರೂ, ಜ್ಞಾನದ ಸಾಧನ–ಸಲಕರಣೆಗಳು ಪ್ರತಿಯೊಬ್ಬನ ಹಸ್ತಗತವಾದಂತಿದೆ; ವ್ಯವಹಾರದಲ್ಲಿ ಸರ್ವತೋಮುಖವಾದ ಸ್ವಾತಂತ್ರ್ಯವಿರದಿದ್ದರೂ, ಹೃದಯದೊಳಗಿನ ದಾಸ್ಯಬುದ್ಧಿ ಹಾರಿಹೋಗಿದೆ; ಮುಂದೆ ಮೋಕ್ಷ ದೊರಕೀತೆಂಬ ನಿಶ್ಚಯವಿರದಿದ್ದರೂ, ಹಿಂದೆ ಭೂತದ ಬೆದರಿಕೆ ಮಾಯ ವಾಗಿದೆ. ದೇಹಕ್ಕೆ ದಾರಿದ್ರ್ಯ ತಪ್ಪಿದೆ, ಬುದ್ಧಿಗೆ ಆಲಸ್ಯ ತಪ್ಪಿದೆ. ಇವೆರಡೇ ಸಂಗತಿಗಳು ಸಮಾಜಕ್ಕೆ ಸಂಪತ್ತಿಸಂತೆ ಎಂದು ಹೇಳ ಬಹುದು. ಭಾರತದ ಆಧಾರಸ್ತಂಭರು ತುರ್ಕಸ್ತಾನದ ವಿಜಯಸ್ತಂಭದ ಮೇಲೆ ಕೊರೆದ ಇತಿಹಾಸವನ್ನು ಓದಲಿ, ಅನುಭವ ಪಡೆಯಲಿ ಎಂಬುದೆ ನನ್ನ ಮುಖ್ಯೋದ್ದೇಶ.

ಇದಲ್ಲದೆ ಇನ್ನೂ ಒಂದೆರಡು ಉದ್ದೇಶಗಳು ನನ್ನ ಹೃದಯಾ ಕಾಶದಲ್ಲಿ ಆಗಾಗ ಮಿನುಗುತ್ತಲಿವೆ. ಇಂದು ಜಗತ್ತಿಗೆ ಆದರ್ಶಪ್ರಾಯ ವಾದಂತಹ, ಜಗತ್ತಿನ ಆದರಕ್ಕೆ ಪಾತ್ರವಾದಂತಹ ಮಹಾವಿಭೂತಿ ಯೊಂದು ನಮಗೆ ಮುಂದಾಳಾಗಿ ಲಭಿಸಿದೆ. 'ಮಹಾತ್ಮ'ರ ಮನಸ್ಸನ್ನು ಅರಿಯುವುದು ಸಣ್ಣ ಕೆಲಸವಲ್ಲ; ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ ಎಂದು ಅದನ್ನು ಬಣ್ಣಿಸುತ್ತಾರೆ. ಆದಕಾಗಿ ಇಂದಿನ ಜಗತ್ತಿನಲ್ಲಿಯ ಬೇರೆ ಮಹಾಪುರುಷರ ಚರಿತ್ರೆಯಿಂದ ತುಲನಾ ತ್ಮಕ ದೃಷ್ಟಿಯನ್ನು ಸಂಪಾದಿಸಿಕೊಂಡರೆ 'ಮಹಾತ್ಮರ' ಮನ ಸ್ಸನ್ನು ಅರಿತುಕೊಳ್ಳುವ ವಿದ್ಯೆಯು ನಮಗೆ ತುಸುಮಟ್ಟಿಗಾದರೂ ಪ್ರಾಪ್ತವಾಗಬಹುದಲ್ಲ–ಎಂಬುದೊಂದು; ಅದರಂತೆಯೆ–ಇಂದಿನ ಕಾಲ ದಲ್ಲಿ ಆಂತರರಾಷ್ಟ್ರೀಯ ಜ್ಞಾನದ ಮಹತ್ವವೂ ಆವಶ್ಯಕತೆಯೂ ಹೆಚ್ಚಾಗಿದೆ. ಬೇಕೆನಲಿ ಬೇಡವೆನಲಿ ರಾಷ್ಟ್ರಗಳು ಒಂದನ್ನೊಂದು ಹೆಚ್ಚಾಗಿ ಅವಲಂಬಿಸಿಕೊಂಡು ನಿಂತಿವೆ. ಇಂತಹ ಚರಿತ್ರಗ್ರಂಥಗಳ ನಿಮಿತ್ತದಿಂದ ಪರರಾಷ್ಟ್ರಗಳ ಸ್ಥಿತಿ–ಗತಿಗಳ ಜ್ಞಾನವು ನಮಗಾಗ ಬಹುದು–ಎಂಬುದೂ ಒಂದು; ಹೀಗೆ ಇವೆರಡು ಉದ್ದೇಶಗಳೂ ಇವೆ. ಇದಲ್ಲದೆ ಕನ್ನಡ ಸಾಹಿತ್ಯದ ಬೆಳವಣಿಗೆಗೆ (ಕವಿತೆ–ಕತೆ–ನಾಟಕಗಳ

ಹೆಚ್ಚಾದ ಈಗಿನ ಕಾಲದಲ್ಲಿ ) ಚರಿತ್ರಗ್ರಂಥಗಳು ವಿಶೇಷವಾಗಿ ಪೋಷಕವಾಗುವುವು. ಇದಲ್ಲದೆ—

ಇನ್ನೂ ಎಷ್ಟೋ ಉದ್ದೇಶಗಳನ್ನು ನಾನು ಕಾಣಿಸಬಹುದು. ಆದರೆ ಪ್ರಕಟವಾಗುವ ಗ್ರಂಥದಲ್ಲಿ ಉದ್ದೇಶಕ್ಕಿಂತ ಆ ಉದ್ದೇಶ ಸಾಧಿಸಿದೆಯು ಇಲ್ಲವೆ ಎಂಬ ಮಾತೇ ಹೆಚ್ಚು ಮಹತ್ತ್ವದಿದೆ. ನನ್ನ ಇಲ್ಲವೆ ನನ್ನ ಇದೊಂದೆ ಗ್ರಂಥದಿಂದ ಮೇಲೆ ಕಾಣಿಸಿದ ಎಲ್ಲ ಉದ್ದೇಶಗಳು ಸಾಧಿಸಬೇಕೆಂಬ ಅತ್ಯಾಶೆ ನನಗಿಲ್ಲ. ನನ್ನ ಗ್ರಂಥವನ್ನು ಓದಿ ಚರಿತ್ರಾತ್ಮಕ ಗ್ರಂಥಗಳನ್ನು ಓದಬೇಕೆಂಬ ಆಸಕ್ತಿ ಹುಟ್ಟಿದರೆ, ಜಗತ್ತಿನ ಇತಿಹಾಸ ಜ್ಞಾನದ ಮಹತ್ತ್ವ ಹೊಳೆದರೆ, ಅಂತರರಾಷ್ಟ್ರೀಯ ಪರಸ್ಪರ ಸಂಬಂಧವನ್ನು ಅರಿತುಕೊಳ್ಳುವ ಅಗತ್ಯ ಕಂಡು ಬಂದರೆ, 'ಮಿಂಚಿನ ಬಳ್ಳಿ'ಯ ಪ್ರಕಟನೆಗಳಿಗಾಗಿ ಪ್ರೋತ್ಸಾಹಬುದ್ಧಿಯು ಪ್ರೇರಣೆಯಾದರೆ ನಾನು ಕೃತಾರ್ಥನೆಂದು ಭಾವಿಸುವೆ.

ವಿಲಾಸಿ

# ೧ ಅಥಾತೋ ಜಿಜ್ಞಾಸಾ

ಶಾಲೆಯಲ್ಲಿ ಹುಡುಗರ ಗಲಾಟೆ ನಡೆದಿದೆ. ಶಿಕ್ಷಕರು ಯಾರೂ ಹತ್ತಿರದಲ್ಲಿರಲಿಲ್ಲ. ಯಾರು ನಗುತ್ತಿದ್ದಾರೆ, ಯಾರು ಕುಣಿಯುತ್ತಿದ್ದಾರೆ, ಯಾರು ಶಕ್ತಿ ಇದ್ದವರು ಅಶಕ್ತರನ್ನು ಪೀಡಿಸುತ್ತಲಿದ್ದಾರೆ— ಅಂತೂ ನೋಡಿದಲ್ಲೆಲ್ಲ ಅರಾಜಕತೆ! ಆದರೆ ಈ ವಾನರಸೈನ್ಯದ ಕಿಡಿಗೇಡಿತನದ ರಣರಂಗದಲ್ಲಿ ಒಬ್ಬನೇ ಒಬ್ಬ ಬಾಲಕನು ದೂರದಲ್ಲಿದ್ದಾನೆ. ಮುಖದಲ್ಲಿ ಹಿರಿತನದ ಕಳೆ, ಕಣ್ಣುಗಳಲ್ಲಿ ಹೆಮ್ಮೆಯ ತೇಜಸ್ಸು, ಸೆಟೆದುಬ್ಬಿ ಸರಿದುನಿಂತು ಅಸಹ್ಯವನ್ನು ಸೂಚಿಸುವಂತೆ ಇದೆಲ್ಲವನ್ನೂ ನೋಡುತ್ತಲಿದ್ದಾನೆ. ಇವರೆಲ್ಲರಿಗಿಂತಲೂ ತಾನು ಹೆಚ್ಚಿನವ, ಮೇಲಿನವ ಎಂಬ ಅಹಂಕಾರವೇನೊ ಅವನಿಗೆ? ಇಂತಹ ಅಹಂಕಾರವು ಬಾಲಕರ ಆಟ-ಪಾಟಗಳಲ್ಲಿ ನಡೆಯುವದೆಂತು? ಯಾರು ಕರೆದರೂ ಈ ಬಾಲ ಪಂಡಿತನು ಎಳಕ್ಕವರೊಡನೆ ಕೂಡಲೊಲ್ಲನು. ಆಯಿತು ಪ್ರಾರಂಭ ಕಿಡಿಗೇಡಿತನಕ್ಕೆ, ಎಲ್ಲರೂ ಇವನನ್ನು ಸುತ್ತುಗಟ್ಟಿದರು, ಹಂಗಿಸಿದರು; ಇವನೇನೊ ಕೆರಳಿಸಿದ ಸಿಂಹನಂತೆ ಕೈಗೆ ಸಿಕ್ಕವನನ್ನು ಹಿಡಿದು ಚನ್ನಾಗಿ ಥಳಿಸತೊಡಗಿದನು. ಇದೇ ಸಮಯಕ್ಕೆ ಶಿಕ್ಷಕನು ಅಲ್ಲಿಗೆ ಬಂದನು; ನಡೆಯುವುದನ್ನೆಲ್ಲ ಕಣ್ಣಾರೆ ಕಂಡನು; ಇನ್ನೊಬ್ಬ ಹುಡುಗನನ್ನು ಹೊಡೆಯುವುದೇಕೆ, ಈ ಗಲಾಟೆ ಏಕೆ– ಎಂದು ನಮ್ಮ ಬಾಲಪಂಡಿತನನ್ನು ಕೇಳಿದನು. 'ನನ್ನನ್ನು ಅವಮಾನಗೊಳಿಸಿದರು, ಅವಮಾನಕ್ಕೆ ಪ್ರತೀಕಾರ ಮಾಡುವುದು ಗಂಡಸಿನ ಲಕ್ಷಣ' ಎಂದನು ಬಾಲಪಂಡಿತ! ಈ ಮಾತಿನಿಂದ ಶಿಕ್ಷಕನು ತನಗೇ ಅಪಮಾನವಾಯಿತೆಂದು ಭಾವಿಸಿದವನಂತೆ ಕನಲಿ ಬಾಲಪಂಡಿತನನ್ನು ಚನ್ನಾಗಿ ಥಳಿಸಿದನು. ಆ ಕ್ಷಣದಲ್ಲಿ

ಶಾಲೆಯಿಂದ ಹೊರಬಿದ್ದ ಈ ವೀರ ತೇಜಸ್ವಿ ಬಾಲಕನು ತಿರುಗಿ ಶಾಲೆಯಲ್ಲಿ ಕಾಲನ್ನಿಡಲಿಲ್ಲ. ಯಾಕೆಂದರೆ ಅವನಿಗೆ ಅಪಮಾನವಾಯಿತಲ್ಲವೆ ಅಷ್ಟೊಂದು ?

* * *

ಸುಮಾರು ೨೬-೨೮ ವಯಸ್ಸಿನ ತರುಣ ಕರ್ನಲ (ದಳಪತಿ) ಒಬ್ಬನು ತನ್ನ ದೇಶದ ಪರರಾಷ್ಟ್ರ ಮಂತ್ರಿಯ ಆಸ್ಥಾನಕ್ಕೆ ಬಂದಿದ್ದಾನೆ. ಆಗತ್ಯದ ಕೆಲಸಕ್ಕಾಗಿ ಮಂತ್ರಿಯನ್ನು ಕಾಣಲೇಬೇಕಾಗಿದೆ. ಆದರೆ ಮಂತ್ರಿಗೆ ಮಾತ್ರ ಇವನನ್ನು ಕಾಣುವುದು ಬೇಡಾಗಿದೆ. ಆದುದರಿಂದ 'ನನಗೆ ಬಹಳೇ ಕೆಲಸವಿದೆ; ಶಕ್ಯವಿದ್ದರೆ ಮುಗಿಯುವವರೆಗೆ ತಡೆ' ಎಂದು ಮಂತ್ರಿಯು ಹೇಳಿ ಕಳುಹಿಸಿದನು. ದಳಪತಿಯು ಸಂತೋಷದ ಮುಖಮುದ್ರೆಯಿಂದ ಹೊರಗಿನ ಕೋಣೆಯಲ್ಲಿ ಇನ್ನೊಬ್ಬ ಅಧಿಕಾರಿಯೊಡನೆ ಹರಟೆ ಹೊಡೆಯುತ್ತ ಕುಳಿತುಕೊಂಡನು. ಒಳಗೆ ಮಂತ್ರಿಯು ಕೆಲಸವಿಲ್ಲದಿದ್ದರೂ ಕೆಲಸವಿದ್ದವನಂತೆ ಎಷ್ಟೋ ಗಂಟೆಗಳವರೆಗೆ ಮಗ್ನನಾದವನಂತೆ ನಟಿಸಿದ್ದನು; ದಳಪತಿಯು ಕೊನೆಗೆ ಬೇಜಾರವೆನಿಸಿ ಹೋಗಬಹುದೆಂದು ಮಂತ್ರಿಯ ಆಶೆ; ಆದರೆ ಮಧ್ಯಾಹ್ನವು ಸಂಜೆಯಾದರೂ ನಮ್ಮ ಯುವಕ ದಳಪತಿಯು ಸಂತೋಷದ ಮುದ್ರೆಯಿಂದಲೇ ಹರಟೆ ಹೊಡೆಯುತ್ತ ಕಾಯುತ್ತಲಿದ್ದಾನೆ. ಕೊನೆಗೆ ಮಂತ್ರಿಯೆ ಬೇಜಾರವೆನಿಸಿ ಅವನನ್ನು ಒಳಗೆ ಬರಲು ಹೇಳಿದನು. ಕೂಡಲೆ ಇಷ್ಟೊತ್ತಿನವರೆಗೆ ಕಾಯ್ದಿದ್ದರೂ 'ನಾನು ಸದ್ಯಕ್ಕೆ ಮಾತನಾಡುತ್ತಲಿದ್ದೇನೆ; ಅದು ಮುಗಿಯಲಿ, ಅಲ್ಲಿಯವರೆಗೆ ತಡೆ' ಎಂದು ದಳಪತಿಯು ಮಂತ್ರಿಗೆಯೆ ಹೇಳಿಕಳುಹಿದನು!

* * * *

ಶಾಲೆಯಲ್ಲಿ ಅಭಿಮಾನಧನನಾಗಿ ಸೆಟೆದುನಿಂತ ಬಾಲಕನೂ ಮಂತ್ರಿಗೆ ಕೂಡ ಮೈಯ್ಯಕ್ಕೆಮೈಯ್ಯ ಮುಟ್ಟಿಸುವಂತೆ ಸ್ವಾಭಿಮಾನದಿಂದ ಗದ್ದರಿಸಿದ ಯುವಕ ದಳಪತಿಯೂ ಒಂದೇ ವ್ಯಕ್ತಿ; ಈ

ಅಸಾಮಾನ್ಯ, ದರ್ಪೋದ್ಧತ ವ್ಯಕ್ತಿಯೆ ನಮ್ಮ ಕಥಾನಾಯಕ; ಕೊಳೆಯುವ ಹೆಣದಂತೆ ಸುತ್ತಲಿನ ವಾತಾವರಣವನ್ನು ದೂಷಿಸುತ್ತ ಬಿದ್ದುಕೊಂಡ ತುರ್ಕಸ್ತಾನವನ್ನು ಮಾಟಗಾರಿಕೆಯಿಂದಲೊ ಮಹಾಮಹಿಮೆಯಿಂದಲೊ ಅಲ್ಪಾವಧಿಯಲ್ಲಿ ಚೈತನ್ಯದಿಂದ ತುಂಬಿ ತುಳುಕುವಂತೆ ಮಾಡಿದ ಅವತಾರಪುರುಷನೆನಿಸುವ; ಏಶ್ಯದ ಅನೇಕ ಭಾಗಗಳಲ್ಲಿ ದೇವನ, ಧರ್ಮದ, ಧನಮದಾಂಧರ ಸಾಮ್ರಾಜ್ಯಲಾಲಸೆಯಿಂದ ದಾಸ್ಯನರಕಕ್ಕಿಳಿದ ದೇಶಗಳಿಗೆ ಉದ್ಧಾರದ ಮಾರ್ಗವನ್ನು ತೋರಿಸುವ ಆದರ್ಶದೀಪನಿವ; ಜಾತಿಯಿಂದ ಯೋಗ್ಯತೆ ಬರುವುದೆಂದು ಜಂಭ ಕೊಚ್ಚುವ ಸನಾತನವಾದವು ಸುಳ್ಳಿನ ಸಾಗರವೆಂದು ಸಿದ್ಧಮಾಡಿದ ಆಶ್ಚರ್ಯ ಪುರುಷನಿವ; ಬಲಾಢ್ಯತೆಗೆ ಧನಾಢ್ಯತೆಯೆ ಬೀಜಕಾರಣವೆಂದು ಹಿರಿತನದಿಂದ ಕೊಚ್ಚುವ ಮಾತು ಹುಡುಗಾಟದ ಹರಟೆ ಎಂದು ಸಾಧಿಸಿದ ಸಾಸಿಗನಿವ; ಮಾನವನಿಗೆ ಮೀರಿದ್ದಿಲ್ಲ, ಪ್ರಯತ್ನಕ್ಕೆ ನಿಲುಕದ್ದಿಲ್ಲ ಎಂದು ಕೈಯೆತ್ತಿ ಸಾರುವ ಕಲಿಯುಗದ ಕಲ್ಕಿ ಇವ; ಇಂದು ನಮ್ಮೆಲ್ಲರ ಕಣ್ಣುಕಟ್ಟಿ ನಿಂತ ಕೆಮಾಲ ಪಾಶಾ ಎಂಬ ವ್ಯಕ್ತಿ ಇವ!

ಮುಸ್ತಾಫಾ ಕೆಮಾಲ ಪಾಶಾ ಇವರ ಜೀವನಚರಿತ್ರೆ ಎಂದರೆ ಈ ಶತಮಾನದ ಒಂದು ಸೋಜಿಗ, ಒಂದು ಸ್ಫೂರ್ತಿ ಎಂದು ಹೇಳಬಹುದು. ಇವರು ಮಾಡಿದ ಕೆಲಸವನ್ನು ತಿಳಿಯಬೇಕಾದರೆ ಇವರ ಸಮಾಜದ, ದೇಶದ ಪರಿಸ್ಥಿತಿಯನ್ನು ಮೊದಲು ಅರಿತುಕೊಳ್ಳಬೇಕಾಗುವುದು. ಇಲ್ಲವಾದರೆ ಅನೇಕರಂತೆ ಇವರ ಸ್ವಭಾವ ವೈಚಿತ್ರ್ಯದಿಂದ ದಿಗ್ಭ್ರಮೆಯ ಕತ್ತಲಲ್ಲಿ ತತ್ತರಿಸುತ್ತ ನಡೆಯಬೇಕಾಗುವುದು. ಇಂದಿಗೂ ಸರ್ವಾಧಿಕಾರಿತ್ವದಿಂದ ತುರ್ಕಸ್ತಾನದ ಸೂತ್ರಗಳನ್ನೆಲ್ಲ ತನ್ನ ಕೈಯಲ್ಲಿಯೆ ಇಟ್ಟುಕೊಂಡುದರಿಂದ ಇವರು ಸ್ವಾರ್ಥಸಾಧುವೆಂದು ಎಷ್ಟೋ ನಿರೀಕ್ಷಕರು ಅಭಿಪ್ರಾಯಪಡುತ್ತಿದ್ದಾರೆ; ದೇಶದ ಹಿತಕ್ಕಾಗಿ ಎಂದು ಸಾವಿರಾರು ಜನರನ್ನು ದೇಹದಂಡನೆಗೆ ಮತ್ತು ದೇಶತ್ಯಾಗಕ್ಕೆ ಗುರಿಮಾಡಿದುದರಿಂದ ಇವರು ಕ್ರೂರ ಸ್ವಭಾವದವರೆಂದು ಎಷ್ಟೋ ಜನರು ಅಸಹ್ಯಪಡುತ್ತಿದ್ದಾರೆ; ಮದ್ಯ ಮತ್ತು ಮಾನಿನಿಯರ ಮೋಹವು

ಇವರಿಗೆ ಚಿಕ್ಕಂದಿನಿಂದಲೂ ಅಂಟಿಕೊಂಡ ವ್ಯಸನವೆಂದೂ ತಾಯಿಯು ನ್ನಾಗಲಿ ಹೆಂಡತಿಯನ್ನಾಗಲಿ ಸಂತೋಷಕರವಾಗುವಂತೆ, ಸಮಂಜಸ ವೆನಿಸುವಂತೆ ನಡೆಸಿಕೊಳ್ಳಲಿಲ್ಲವೆಂದೂ ಇವರನ್ನು ಎಷ್ಟೋ ಜನರು ಇವರನ್ನು ಆಡಿದಂತೆ ಮಾಡದ ಅಧಿಕಾರಮದಾಂಧ ಎಂದು ಹೀಯಾಳಿಸು ತ್ತಿದ್ದಾರೆ; ಮೂರು ಖಂಡಗಳನ್ನು ಮುತ್ತಿ ಮೆರೆಯುತ್ತಿದ್ದ ತುರ್ಕಸ್ತಾನ ಸಾಮ್ರಾಜ್ಯವನ್ನು ಇವರು ಬುದ್ಧಿಪುರಸ್ಸರವಾಗಿ ಬಿಟ್ಟು ಕೊಟ್ಟು ಮೂರುಮೊಳದಷ್ಟು ದೇಶವನ್ನೆ ಅಭಿಮಾನದ ಮತ್ತು ಕಾರ್ಯದ ತವರ್ಮನೆ ಮಾಡಿಕೊಂಡುದರಿಂದ ಇವರು ದೂರದೃಷ್ಟಿ ಇಲ್ಲದ ರಾಜಕಾರಣಪಟು (ಪಟು ಅಲ್ಲ) ಎಂದು ಎಷ್ಟೋ ತಜ್ಞರು ಮೂಗು ಮುರಿಯುತ್ತಿದ್ದಾರೆ; ಖಲೀಫನನ್ನು ಕಿತ್ತೊಗೆದು, ಜೀವನಕ್ಕೆ ತಳಹದಿ ಯಾದ ಧರ್ಮವನ್ನು ಅಲ್ಲಗಳೆದು ವೇಷ-ಭಾಷೆ-ಅಕ್ಷರಗಳಲ್ಲಿ ಕೂಡ ಯುರೋಪೀಯರನ್ನು ಅನುಕರಣ ಮಾಡುವ ಮನೋವೃತ್ತಿಗಾಗಿ ಇವರನ್ನೆ ಎಷ್ಟೋ ಪುರಾಣಮತವಾದಿಗಳು ಕೇವಲ ಮರ್ಕಟಮತಿ ಎಂದು ಖಂಡಿಸುತ್ತಿದ್ದಾರೆ; ಹೀಗಿರುವಾಗಲೂ ಕಳೆದ ಇಪ್ಪತ್ತು ವರ್ಷ ಗಳಲ್ಲಿ ಯುರೋಪದ ಮಹಾರಾಷ್ಟ್ರಗಳು ತನ್ನನ್ನು ಬಗ್ಗು ಬಡೆಯಲು ಸಂಚು ಹಾಕಿದರೂ ಆರ್ಭಟಿಸಿ ತಿರುಗಿ ನಿಂತು ಹೋರಾಡಿ ಇಂದು ತುರ್ಕಸ್ತಾನವು ಯೋಗ್ಯತೆಯಿಂದ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಸ್ಥಾನ-ಮಾನಗಳನ್ನು ಪಡೆದುಕೊಂಡುದು ಮುಸ್ತಾಫಾ ಅವರ ಮಹಿಮೆ ಯಿಂದಲೆ!

ದೊಡ್ಡವರ ಹೃದಯವೆಂದರೆ ವಜ್ರಕ್ಕಿಂತಲೂ ಕಠೋರವಾದುದು, ಹೂವಿಗಿಂತಲೂ ಮೆತ್ತಗಾದುದು ಎಂಬ ವಚನವು ಗಾದೆಯ ಮಾತಿ ನಂತೆ ರೂಢವಾಗಿದೆ; ಎಂದರೆ ಆ ಮಾತಿನ ಸತ್ಯತೆಗಿಂತ ಶೈಲಿಯೆ ನಮ್ಮ ಮನಸ್ಸನ್ನು ಸೆಳೆಯುವುದು. ಆದರೂ ಒಂದೇ ವ್ಯಕ್ತಿಯ ವಿಷಯ ವಾಗಿ ಮೇಲೆ ಕಾಣಿಸಿದಂತೆ ಪರಸ್ಪರ ವಿರುದ್ಧ ಅಭಿಪ್ರಾಯಗಳಿದ್ದಲ್ಲಿ ಆ ವ್ಯಕ್ತಿಯು ಈ ಗಾದೆಯ ಮಾತಿನ ಉದಾಹರಣೆ ಎಂದು ತಿಳಿಯಬೇಕೆ? ಇಲ್ಲವೆ ಬೇರೆ ಬೇರೆ ಅಭಿಪ್ರಾಯಗಳನ್ನು ಪಟ್ಟ ಜನರಿಗೆಯೆ ಆ ವ್ಯಕ್ತಿಯ

ನಿಜವಾದ ಶಾಶ್ವತವಾದ ಸ್ವರೂಪವು ಹೊಳೆದಿಲ್ಲವೆನಬಹುದೆ? ಏನೆ ಇರಲಿ, ಈ ಗೂಢವನ್ನು ತಿಳಿದುಕೊಳ್ಳುವ ಕುತೂಹಲಕ್ಕಾದರೂ ನಾವು ಆ ವ್ಯಕ್ತಿಯ ಚರಿತ್ರವನ್ನು ಅರಿತುಕೊಳ್ಳಬೇಕೆನಿಸುವುದು. ಇದಲ್ಲದೆ ಇಂದು ಭಾರತೀಯರಿಗೆ ತಮ್ಮಲ್ಲೂ ಅವತಾರಪುರುಷರು ಜನಿಸಿರುವರೆಂಬ ಹೆಮ್ಮೆಯಿದೆ; ತಮ್ಮ ಅವತಾರಪುರುಷರಿಂದ ತಮ್ಮ ಉದ್ಧಾರವಾಗುವುದೆಂಬ ಭರವಸೆಯೂ ಬಹುಜನರಿಗಿದೆ. ಈ ಸಂದರ್ಭದಲ್ಲಿ ಅನೇಕದೃಷ್ಟಿಗಳಿಂದ ಭಾರತದಂತೆ ಪರಿಸ್ಥಿತಿಯಿದ್ದು ಅಪನತಿಗಿಳಿದ ತುರ್ಕಸ್ತಾನವನ್ನು ಮುಸ್ತಾಫಾ ಕೆಮಾಲ ಪಾಶಾ ಇವರು ಉದ್ಧರಿಸಿದ ಕತೆಯನ್ನು ಓದಿ ನಮಗೆ ಧೈರ್ಯವೂ ಆತ್ಮವಿಶ್ವಾಸವೂ ಹೆಚ್ಚಬಹುದು. ನಮ್ಮದು ಶಾಂತಿಧರ್ಮ, ಅಹಿಂಸಾವ್ರತ; ನಮಗೂ ತುರ್ಕಸ್ತಾನಕ್ಕೂ ಹೋಲಿಕೆಯಾಗಬಹುದೆ-ಎಂದು ನಾವು ಸಂಶಯಪಡುವಂತಿಲ್ಲ. ಕೆಮಾಲ ಪಾಶಾ ಇವರ ಕೈಯಲ್ಲಿ ಇವರನ್ನು ನಂಬಿದ ಅನೇಕ ಸೈನಿಕರು, ಶೂರರು ಯುದ್ಧವನ್ನಾಡಲು ಸಿದ್ಧರಿದ್ದರೂ ಅವರನ್ನು ಕೆಮಾಲರು ತಡೆದು ಹಿಡಿದಿದ್ದರು. ಯಾಕೆ? ಅವರ ಮಾತಿನಲ್ಲಿಯೆ ಉತ್ತರವನ್ನು ಹೇಳಬಹುದು. 'ನಾವು ಬಂಡನೆಬ್ಬಿಸುವ ಪುಂಡರಲ್ಲ, ಧರ್ಮೋಪದೇಶಕರು; ದೇಶದೊಳಗಿನ ಒಬ್ಬ ಸ್ವಾಭಿಮಾನಿಯು ನಮ್ಮ ಮತಕ್ಕೆ ಸೇರದಿರುವವರೆಗೆ ನಮ್ಮ ಧರ್ಮೋಪದೇಶವನ್ನು ತಡೆಯುವ ಅಧಿಕಾರವು ನಮಗಿಲ್ಲ; ತಡೆದರೆ ನಾವು ಧರ್ಮದ್ರೋಹಿಗಳೆನಿಸುವೆವು. ನಮ್ಮ ಸಮಸ್ಯೆಯನ್ನು ಬಿಡಿಸುವ ಸಾಧನಗಳು ತುಬಾಕಿಗಳಲ್ಲ; ಶ್ರದ್ಧೆ, ಸಂಕಲ್ಪ, ಆತ್ಮಪ್ರತೀತಿ–ಇವೇ ನಮಗೆ ಸಾಧನಗಳು. ಇದು ಬಂಡು ಅಲ್ಲ, ಸಂಹಾರವಲ್ಲ; ಹೊಸ ಯುಗದ ಸೃಷ್ಟಿ ಇದು. ನಾವು ಸೈನಿಕರಾಗಿ ದೇಶವನ್ನು ಕೊಳ್ಳೆ ಇಡುವವರಲ್ಲ; ಧರ್ಮೋಪದೇಶಕರಾಗಿ ನಮ್ಮ ಮತಕ್ಕೆ ನಮ್ಮ ಬಾಂಧವರನ್ನು ಒಲಿಸಿಕೊಳ್ಳುವವರು'! ಇದೇನು ಹಿಂಸಾಮಾರ್ಗವೆ? ಕೆಮಾಲರು ಇಂದು ಜಗತ್ತಿನಲ್ಲಿ ಅಶಾಂತಿಯ ಬೀಜವನ್ನು ಬಿತ್ತುವ ಸರ್ವಾಧಿಕಾರಿಗಳ ಹಿಂಡಿಗೆ ಸೇರಿದವರು, ವ್ಯಕ್ತಿಯ ಸ್ವಾತಂತ್ರ್ಯದ ತತ್ತ್ವವನ್ನು ಒಪ್ಪಿಕೊಳ್ಳುವ ನಾವು–ಭಾರತೀಯರು–ಅವರ ಜೀವನದಿಂದ ಕಲಿಯುವಂತಹದೇನಿದೆ–ಎಂಬ ಮಾತೂ ಸಮರ್ಪಕವೆನಿಸುವುದಿಲ್ಲ. 'ತಮ್ಮ

ಕಾಲ ಮೇಲೆ ನಿಲ್ಲುವ ಶಕ್ತಿಯು ನನ್ನ ದೇಶಬಂಧುಗಳಿಗೆ ಬರುವವರೆಗೆ ಅವರನ್ನು ನಾನು ಕೈಹಿಡಿದು ಪ್ರಗತಿಯ ಮಾರ್ಗದಲ್ಲಿ ನಡೆಸುವೆ. ನಡೆಯಲು ಬಂದ ಮೇಲೆ ತಮಗೆ ಯಾವ ಮಾರ್ಗವು ಸರಿ ಎನಿಸುವುದೊ ಅದನ್ನೆ ಅವರು ಅನುಸರಿಸಲಿ, ತಮ್ಮ ಕಾರ್ಯಭಾರವನ್ನು ತಾವು ಬೇಕಾದಂತೆ ನಡೆಸಿಕೊಳ್ಳಲಿ. ನನ್ನ ಜೀವನವು ಆಗ ಸಫಲವಾಯಿತೆಂದು ಭಾವಿಸುವೆ' ಎಂದು ಕೈಯೆತ್ತಿ ಸಾರುವ ಕೆಮಾಲರು ಮಹಾತ್ಮನೊ ಮುದಾತ್ಮನೊ?

ಕೆಮಾಲರಿಗೆ ಹೆಂಡತಿಯೊಡನೆ ಮನೆಮಾಡಿಕೊಂಡು ಬಾಳುವ ಮಿದುಗರುಳು ಇರಲಿಕ್ಕಿಲ್ಲ; ಆದರೆ ಇಡಿಯ ದೇಶದ ಜನರನ್ನೆ ಮಕ್ಕಳಂತೆ ಲಾಲಿಸಿ ಪೋಷಿಸುವ ಎದೆಗರುಳು ಇದೆಯಲ್ಲ? ಆ ದೇಶದ ಜನರಾದರೂ ಎಂತಹರು! ಆ ದೇಶವಾದರೂ ಎಂತಹದು! ಎಂತಹದು–ಎಂತಹದು ಎಂದು ಬೆರಗಾಗುವುದೇಕೆ? ಒಂದು ಮಾತಿನಲ್ಲಿ ಎರಡೂ ನಮ್ಮಂತಹವೆ ಎಂದು ಧೈರ್ಯವಾಗಿ ಹೇಳಬಹುದು. 'ನಮ್ಮಂತಹದು' ಎಂದ ಮಾತ್ರಕ್ಕೆ ವಾಚಕರಿಗೆ 'ಸುವರ್ಣಭೂಮಿ, ಆರ್ಯಭೂಮಿ, ದೇವನು ಅವತಾರ ತಾಳಿದ ಪುಣ್ಯಭೂಮಿ' ಮುಂತಾಗಿ ಕಲ್ಪನೆ ಬಂದೀತು, ಜೋಕೆ! ನಾವು ಹೇಳುವುದು ಪುರಾಣದೊಳಗಿನ ಭಾರತದೇಶವಲ್ಲ, ಪ್ರಪಂಚದಲ್ಲಿಯ ಭಾರತ ಭೂಮಿ. ಅಥವಾ ನಮ್ಮ ಚರಿತ್ರಪುರುಷನ ಕತೆಗೆ ಈ ವಿಷಯವು ಹಿನ್ನೆಲೆಯಾದುದರಿಂದ ಅದನು ವಿವರವಾಗಿಯೇ ಹೇಳೋಣ.



# ೨ ಅಥಾತಃ ತುರ್ಕಜಿಜ್ಞಾಸಾ

ಸುಮಾರು ಏಳುನೂರು ವರುಷಗಳಾಚೆ ಮಧ್ಯ ಏಶಿಯಾದ ಮರು ಭೂಮಿಯಿಂದ ಪುಂಡರ ಹಾವಳಿಯೊಂದು ಬಿರುಗಾಳಿಯಂತೆ ಬೀಸಿತು. ಈ ಹಾವಳಿಗೆ ಎದುರಾಗಿ ನಿಂತ ಅನೇಕ ಜನಾಂಗಗಳು ಮಣಿದು ಮುಗ್ಗಿದುವು. ಇನ್ನುಳಿದುವು ಮುರಿದು ಕುಗ್ಗಿದುವು. ಯಾಕೆಂದರೆ ಈ ಪುಂಡರು ಹೊಟ್ಟೆಯ ಹಸಿವೆಯಿಂದ ಕಂಗೆಟ್ಟು, ದಯೆ-ಮಾಯೆ ಗಳಿಲ್ಲದೆ ಆವೇಶ ಮದಾಂಧನಾದ ಭೀಮನಂತೆ ರಕ್ತವನ್ನು ಚಿಮ್ಮಿಸಿ ಕುಡಿಯಲು ಕೂಡ ಹಿಂದುಮುಂದು ನೋಡುವಂತಿರಲಿಲ್ಲ. ಹೀಗೆ ಸಾಗಿದ ಈ ಪುಂಡರ ಕ್ರೂರ ಕಠಾರಿಗೆ ಕೆಲವು ಸಾಮ್ರಾಜ್ಯಗಳೂ ತುತ್ತಾದವು. ಅರಬಸ್ತಾನದ ಖಲೀಫರ ಸಾಮ್ರಾಜ್ಯವೂ, ಯುರೋಪ ದಲ್ಲಿ ಗ್ರೀಕ ಜನಾಂಗವೂ ಇವರ ಆಡಳಿತಕ್ಕೆ ಸೇರಿದುವು. ಹೀಗೆಯೇ ಕಾಲಾನುಸಾರವಾಗಿ ತಮ್ಮ ಪ್ರಭಾವವನ್ನು ಇವರು ಗ್ರೀಸದಿಂದ ಇರಾಣದ ವರೆಗೆ, ಇಜಿಪ್ತದಿಂದ ಕಾಕೇಸಸ ಪರ್ವತದ ವರೆಗೆ ಹರಡಿ ಕೊಂಡರು. ಇವರ ಮೊದಲನಾಯಕನಾದ ಸುಲೇಮಾನ ಶಹಾನು ಎಷ್ಟು ಕ್ರೂರವೃತ್ತಿಯವನೂ ಕಠೋರವ್ರತನೂ ಆಗಿದ್ದನೋ ಅಷ್ಟೆ ಅವನ ತರುವಾಯ ನಾಯಕತ್ವವನ್ನು ವಹಿಸಿದ ಸುಲ್ತಾನರು ಕ್ರೂರರೂ ಕಠೋರರೂ ಆಗಿದ್ದರು. ತಾವು ಗೆದ್ದ ದೇಶದ ಮತ್ತು ಜನರ ಧರ್ಮ ವನ್ನೇನೊ ಇವರು ತೋರಿಕೆಯಲ್ಲಿ ಸ್ವೀಕರಿಸಿದ್ದರೂ ಇವರ ಅಂತಃಕರ ಣದ ಮೇಲೆ ಆ ಧರ್ಮದ ತಿರುಳಿನ ತಿಳಿವು ಮೂಡಿರಲಿಲ್ಲ. ೧೬ನೆಯ ಶತಮಾನದ ಕೊನೆಯೊಳಗಾಗಿ ಇವರು ಯುರೋಪ, ಏಶಿಯಾ, ಆಫ್ರಿಕಾ ಈ ಮೂರೂ ಖಂಡಗಳ ಬಹುಭಾಗವನ್ನು ತಮ್ಮ ದರ್ಪ-ಛತ್ರದ ಕೆಳಗೆ ನಿಲ್ಲಿಸಿದರು. ೧೬ನೆಯ ಶತಮಾನದಿಂದ ಭಾರತವು ತನ್ನ ಸುವರ್ಣದ ಮೋಹದಿಂದ ಪರರಾಷ್ಟ್ರಗಳಲ್ಲಿ ಅಸೂಯಾ-ದ್ವೇಷಗಳನ್ನೆಬ್ಬಿಸಿದಂತೆ

ತುರ್ಕ ಸಾಮ್ರಾಜ್ಯವೂ ತನ್ನ ವೈಭವದ ಮೋಹದಿಂದ ಪರರಾಷ್ಟ್ರಗಳಲ್ಲಿ ಅಸೂಯಾ–ದ್ವೇಷಗಳನ್ನೆಬ್ಬಿಸಿತು. ಈ ಪರರಾಷ್ಟ್ರಗಳ ತಿಕ್ಕಾಟ ಮೇಲಾಟಗಳ ಪರಿಣಾಮವಾಗಿ ಭಾರತವು ಕಾಲಾನುಸಾರವಾಗಿ ತನ್ನ ಸ್ವಾತಂತ್ರ್ಯಕ್ಕೆ ಎರವಾದಂತೆ ತುರ್ಕಸ್ಥಾನವೂ ನಿಯಮಿತ ಅವಧಿಯಲ್ಲಿ ತನ್ನ ಸ್ಥಾನ–ಮಾನ–ಸ್ವಾತಂತ್ರ್ಯಗಳನ್ನು ಕಳೆದುಕೊಳ್ಳುವ ಸ್ಥಿತಿಗೆ ಮುಟ್ಟಿತು. ಅನೇಕ ಕಾರಣಗಳಿಂದ ಒಂದೇಸವನೆ ಯುದ್ಧ–ಕಲಹಗಳಲ್ಲಿಯೇ ತೊಡಗಿದ ತಾತ್ಕಾಲಿಕ ರಾಜರ ಚಾಪಲ್ಯಕ್ಕಾಗಿ ದೇಶದ ಮತ್ತು ಪ್ರಜೆಗಳ ಸಂಪತ್ತು ಕಳೆದ ಭಾರತದಂತೆ, ಬಹುಭಾಗದಲ್ಲಿ ಹರಡಿದ ಸಾಮ್ರಾಜ್ಯವನ್ನಾಳಲು ಶಕ್ತಿ–ಯುಕ್ತಿಗಳು ಸಾಲದೆ ಇಲ್ಲಿ–ಅಲ್ಲಿ ಏಳುತ್ತಿರುವ ಬಂಡುಗಳನ್ನು ಅಡಗಿಸುವುದರಲ್ಲಿಯೆ ಆಸಕ್ತರಾದ ಸುಲ್ತಾನರ ಚಟುವಟಿಕೆಗಳಿಂದ ದೇಶದ ವ್ಯಾಪರವು ಕುಗ್ಗಿತು, ಪ್ರಜೆಗಳ ಕರಭಾರವು ಬೆಳೆದು ಸಂಪತ್ತು ಸರಿಯಿತು. ಇದಲ್ಲದೆ ಭಾರತದಂತೆ ತುರ್ಕಸ್ಥಾನವಾದರೂ ಯಂತ್ರಯುಗದ ಪರಿಶೋಧದಲ್ಲಿ ಪ್ರಗತಿಯನ್ನು ಹೊಂದದೆ ಉಳಿಯಿತು, ಇಲ್ಲಿಯ ಪ್ರಜೆಗಳಾದರೂ ಸಾಹಸ–ಸಂಪರ್ಕಗಳಿಲ್ಲದೆ ಅಜ್ಞಾನಾಂಧಕಾರದಲ್ಲಿಯೆ ಕೊಳೆಯ ತೊಡಗಿದರು. ತುರ್ಕಸ್ಥಾನದಲ್ಲಿ ಸುಲ್ತಾನರು ಧರ್ಮಗುರುವಿನ ಸ್ಥಾನವನ್ನೂ ಆಕ್ರಮಿಸಿ, ಧರ್ಮದ ಹೆದರಿಕೆಯಿಂದ ಪ್ರಜೆಗಳನ್ನು ತಮ್ಮ ಅನ್ಯಾಯಕ್ಕೆ ತಲೆತಗ್ಗಿಸುವಂತೆ ಅಜ್ಞಾನದಲ್ಲಿಯೆ ಬೆಳೆಯಲು ಒಂದು ವಿಧದಿಂದ ಉತ್ತೇಜನವನ್ನು ಕೊಟ್ಟರು; ಅದೇ ವಿಧದಲ್ಲಿಯೆ ಭಾರತೀಯರಾದರೂ ರಾಜನು ದೇವಾಂಶನೆಂಬ ಕಲ್ಪನೆಯ ಧಾರ್ಮಿಕಸಂಪ್ರದಾಯದಲ್ಲಿ ಅನ್ಯಾಯ–ಅನನುಕೂಲತೆಗಳನ್ನು ನುಂಗಿಕೊಂಡು ತಮ್ಮ ಅಜ್ಞಾನದಲ್ಲಿಯೆ ಸಂತೃಪ್ತರಾಗಿ ಉಳಿದರು.

ಹೀಗೆ ತೋರಿಕೆಯಲ್ಲಲ್ಲದೆ ನಿಜವಾದ ಇರುವಿಕೆಯಲ್ಲಿ ಭಾರತಕ್ಕು ತುರ್ಕಸಾಮ್ರಾಜ್ಯಕ್ಕು ಸಮಾನವಾದ ಪರಿಸ್ಥಿತಿ ಇದ್ದುದರಿಂದ 'ನಮ್ಮಂತಹವೆ' ಎಂಬ ಶಬ್ದಗಳಿಂದ ನಾವು ಮೇಲೆ ಹೋಲಿಕೆಯನ್ನು ಕಾಣಿಸಿದ್ದೇವೆ. ಆದರೆ ಒಂದೇ ಒಂದು ಸಂಗತಿಯಲ್ಲಿ ಇವೆರಡು ದೇಶಗಳ

ನಡುವೆ ಮಹತ್ವದ ವ್ಯತ್ಯಾಸವಿದ್ದು ಇಂದು ಇವೆರಡು ದೇಶಗಳ ಇತಿಹಾಸವು ತೀರ ಭಿನ್ನವಾಗಿ ಕಾಣುವುದು. ತುರ್ಕಸ್ಥಾನದ ಸುಲ್ತಾನರು ದೇಶ ಮತ್ತು ಧನ ಇವುಗಳ ಸಂಪಾದನೆಯ ಮೋಹಕ್ಕೆ ಸಿಲುಕಿದಂತೆ ಧರ್ಮಪ್ರಸಾರದ ಅಂಧ ಮೋಹಕ್ಕೆ ಒಳಗಾದರು. ಈ ಸುಲ್ತಾನರ ಸಾಮ್ರಾಜ್ಯದಲ್ಲಿ ಗ್ರೀಕ ಜನಾಂಗವೂ ಇದ್ದಿತೆಂದು ಮೇಲೆಯೇ ಹೇಳಿದೆಯಷ್ಟೆ? ಗ್ರೀಸದಲ್ಲೂ ಇನ್ನು ಕೆಲವು ಯುರೋಪ ಪ್ರದೇಶಗಳಲ್ಲೂ ಎಷ್ಟೋ ಕ್ರಿಸ್ತ ಮತಾನುಯಾಯಿಗಳು ಸುಲ್ತಾನರ ಪ್ರಜೆಗಳಾಗಿದ್ದರು. ಈ ಪ್ರದೇಶಗಳಲ್ಲಿ ಸುಲ್ತಾನರ ಮಹಮ್ಮದೀಯ ಧರ್ಮಕ್ಕೂ ಪ್ರಜೆಗಳ ಕ್ರಿಸ್ತಧರ್ಮಕ್ಕೂ ತುಮುಲವಾದ ಕದನವೆ ಪ್ರಾಪ್ತವಾಯಿತು. ಯುರೋಪದ ಉಳಿದ ಕ್ರಿಸ್ತ ಧರ್ಮೀಯ ರಾಷ್ಟ್ರಗಳೂ ಅಲ್ಲಿಯ ಪ್ರಜೆಗಳೂ ಈ ಕದನದಿಂದ ಸಂಕ್ಷುಬ್ಧರಾದರು. ೧೯ನೆಯ ಶತಮಾನದ ಆದಿಯಲ್ಲಿ ಆಳಿದ ರಶಿಯಾದ ಝಾರನು ಕ್ರಿಸ್ತಮತದ ಧರ್ಮಗುರುವು ತಾನು, ಜಗತ್ತಿನ ಕ್ರಿಸ್ತರೆಲ್ಲರನ್ನು ಸಂರಕ್ಷಿಸುವ ಹೊಣೆಯೂ ತನ್ನದು ಎಂದು ತನ್ನನ್ನು ತಾನೇ ಅವತಾರಪುರುಷನೆಂದು ಭಾವಿಸಿಕೊಂಡವನಿದ್ದನು. ಅದರಂತೆಯೆ ಗ್ರೀಕರ ಸಂಸ್ಕೃತಿ-ಸಾಹಿತ್ಯಗಳ ಅಭಿಮಾನವುಳ್ಳ ಎಷ್ಟೋ ಯುರೋಪೀಯ ವಿದ್ವಾಂಸರೂ ಕವಿಗಳೂ ಗ್ರೀಸದಲ್ಲಿ ಸುಲ್ತಾನರು ನಡೆಸಿದ ಅತ್ಯಾಚಾರಗಳನ್ನು ತಡೆಯುದಂತಾದರು. ಹೀಗಿದ್ದರೂ ಯಾವ ಯುರೋಪೀಯ ರಾಷ್ಟ್ರವೂ ಸುಲ್ತಾನನೊಡನೆ ಯುದ್ಧವನ್ನು ಹೂಡುವ ಪರಿಸ್ಥಿತಿ ಇದ್ದಿರಲಿಲ್ಲ. ಯಾಕೆಂದರೆ ತುರ್ಕಸ್ತಾನವು ಆಯಕಟ್ಟಿನ ಸಾಮ್ರಾಜ್ಯವಾಗಿದ್ದಿತು. ಮೂರು ಖಂಡಗಳ ವ್ಯಾಪಾರಮಾರ್ಗದ ಕೈಗಂಬದಂತಹ ಸ್ಥಾನದಲ್ಲಿದ್ದಿತು. ಒಂದು ರಾಷ್ಟ್ರವು ಸುಲ್ತಾನನೊಡನೆ ಹೋರಾಡಿ ಒಂದು ವೇಳೆ ಅವನನ್ನು ಸೋಲಿಸಿದರೆ ಈ ಆಯಕಟ್ಟಿನ ಅಧಿಕಾರವು ಆ ರಾಷ್ಟ್ರಕ್ಕೆ ಸೇರಿ ತಮ್ಮ ವ್ಯಾಪಾರ ಮಾರ್ಗಕ್ಕೆ ಅಡಚಣೆಯಾಗುವುದೆಂಬ ಭೀತಿಯಿಂದ ಉಳಿದ ಯುರೋಪೀಯ ರಾಷ್ಟ್ರಗಳು ಸುಲ್ತಾನನಿಗೆ ಸಹಾಯ ಮಾಡುವ ಸಂಭವವಿದ್ದಿತು. ಈ ಪರಿಸ್ಥಿತಿಯನ್ನರಿತ ಸುಲ್ತಾನರು ಎಷ್ಟೋ ವರ್ಷಗಳ

ವರೆಗೆ ಯುರೋಪೀಯ ರಾಷ್ಟ್ರಗಳ ನಡುವೆಯೆ ದ್ವೇಷ ಅಸೂಯೆ ಗಳನ್ನು ಹುಟ್ಟಿಸಿ ತಮ್ಮ ಅತ್ಯಾಚಾರದ ವ್ಯಭಿಚಾರದಲ್ಲಿ ನಿರ್ವಿಘ್ನರಾಗಿ ಮಗ್ನರಾಗಿದ್ದರು. ಆದರೆ ಕೊನೆಗೆ ಸುಲ್ತಾನರ ಈ ಅತ್ಯಾಚಾರ–ಅತಿ ಸುಖಗಳ ಲಾಲಸೆಯೆ ಅವರಿಗೆ ಮುಳುವಾಯಿತು. ನಿರಂತರವಾಗಿ ಒಂದಿಲ್ಲೊಂದು ಕಡೆ ಯುದ್ಧವನ್ನು ಹೂಡಬೇಕಾದುದರಿಂದ ಹಣದ ಆವಶ್ಯಕತೆಯು ಸುಲ್ತಾನರಿಗೆ ಯಾವಾಗಲೂ ಇದ್ದಿತು; ಇವರ ಬರಿದಾದ ಬೊಕ್ಕಸವನ್ನು ಕಾಮಧೇನುವಿನಂತೆ ತುಂಬುವುದು ಪ್ರಜೆಗಳಿಗಾದರೂ ಎಷ್ಟು ದಿವಸ ಶಕ್ಯವಾದೀತು? ಹೀಗಾಗಿ ಕೊನೆಗೆ ಸುಲ್ತಾನರು ಪರ ರಾಷ್ಟ್ರಗಳಿಂದ ಸಾಲವನ್ನು ತೆಗೆಯಬೇಕಾಯಿತು. ದಿನೇ ದಿನೇ ದರಿದ್ರರಾಗುತ್ತಿರುವ ಪ್ರಜೆಗಳ ದೊರೆಯಿಂದ ತಮ್ಮ ಸಾಲವು ಮುಟ್ಟೀತೆಂಬ ಆಶೆ ಪರರಾಷ್ಟ್ರಗಳಿಗಿದ್ದಿಲ್ಲ. ಆದುದರಿಂದ ಸಾಲವನ್ನು ಕೊಡುವಾಗ ಅವರು ತಮ್ಮ ರಾಷ್ಟ್ರಕ್ಕೆ, ವ್ಯಾಪಾರಕ್ಕೆ, ವ್ಯವಸಾಯಗಳಿಗೆ, ವಿಶೇಷವಾಗಿ ಯುದ್ಧ–ವ್ಯಾಪಾರಗಳ ಸಮಯಕ್ಕೆ ಯಶಸ್ಸಿನ ಬೀಗದ ಕೈಯಂತಿದ್ದ ಬಾಸ್ಫರಸ ಮತ್ತು ದಾರ್ಡನೆಲ್ಸಗಳಲ್ಲಿ ತಮ್ಮ ಹಡಗುಪಡೆಗೆ ಸವಲತ್ತುಗಳನ್ನು ಬೇಡಿಕೊಳ್ಳುತ್ತಿದ್ದರು. ಸುಖಲೋಲುಪನಾದ ಮದಾಂಧರಿಗೆ ಹಣಕ್ಕಾಗಿ ಯಾವ ಸವಲತ್ತಾದರೂ, ದೇಶದ ಸ್ವಾತಂತ್ರ್ಯವನ್ನೆ ಮಾರಿಕೊಂಡರೂ ಅದು ಸಣ್ಣ ಮಾತೆನಿಸುತ್ತಿದ್ದಿತು. ಇನ್ನು ಪರರಾಷ್ಟ್ರಗಳಿಗೆ ಬರಿಯ ಸವಲತ್ತು ದೊರೆತರೆ ಸಾಲುವಂತಿರಲಿಲ್ಲ; ಸುಲ್ತಾನನು ತನ್ನ ಸಿಂಹಾಸನದಲ್ಲಿ ಸುರಕ್ಷಿತವಾಗಿದ್ದರಲ್ಲವೆ ಈ ಸವಲತ್ತುಗಳನ್ನು ನಡೆಸಿಕೊಳ್ಳುವುದು? ಹೀಗಾಗಿ ಸುಲ್ತಾನನನ್ನು ಸಹಾಯಕೊಟ್ಟು ಬೆನ್ನು ಕೊಡುವುದಕ್ಕೆ ಪರರಾಷ್ಟ್ರದ ಅಧಿಕಾರಿಗಳು ತುರ್ಕಸ್ತಾನದಲ್ಲಿ ಕಾಲಿಟ್ಟರು. ಕೊನೆಗೆ ಸುಲ್ತಾನನ ಲೆಕ್ಕಪತ್ರವನ್ನು ವ್ಯವಸ್ಥಿತವಾಗಿ ಇಡುವುದಕ್ಕು, ಹಾಗೆ ಇಟ್ಟುದನ್ನು ನೋಡುವುದಕ್ಕು ಪರದೇಶದಿಂದ ಅಧಿಕಾರಿಗಳು ಬಂದು ಸುಲ್ತಾನನನ್ನು ಸುತ್ತುಗಟ್ಟಿದರು. ಹೀಗೆ ಒಂದು ಪರರಾಷ್ಟ್ರದ ಪ್ರಾಬಲ್ಯವು ಬೆಳೆದರೆ ಇನ್ನೊಂದು ಪರರಾಷ್ಟ್ರವು ಅಸೂಯೆಯಿಂದ ಕಿಡಿಗೇಡಿತನವನ್ನು ಪ್ರಾರಂಭಿಸುತ್ತಿದ್ದಿತು. ೧೮೫೪ರಲ್ಲಿ ಫ್ರಾನ್ಸ

ದೇಶವು ಇಜಿಪ್ತದ ಮುಹಮ್ಮದಪಾಶಾ ಎಂಬವನಿಗೆ ಬೆಂಬಲಕೊಟ್ಟು ಸುಲ್ತಾನನಿಗೆ ಇಜಿಪ್ತದಿಂದ ಸಲ್ಲತಕ್ಕ ಕಾಣಿಕೆಯನ್ನು ತಪ್ಪಿಸಿದ ಉದಾಹರಣೆ ಇದೆ. ಇಷ್ಟೇಕೆ? ರಶಿಯಾದ ಅಧಿಕಾರಿಗಳು ಸುಲ್ತಾನನನ್ನು ಸುತ್ತುಗಟ್ಟಿದರೆ ಇಂಗ್ಲಿಶ ಇಲ್ಲವೆ ಫ್ರೆಂಚ ಕುಚೋದ್ಯಗಾರರು ತುರ್ಕಸ್ಥಾನದಲ್ಲಿ ಪ್ರಜೆಗಳ ಬಂಡನೆಬ್ಬಿಸಲು ಯತ್ನಿಸುತ್ತಿದ್ದರು. 'ನಿಮ್ಮ ಸುಲ್ತಾನನು ಪರದೇಶದಿಂದ ಬಂದ ಅಧಿಕಾರಿಗಳ ಕೈಗೊಂಬೆಯಾಗಿರುವನು. ನೀವು ಸ್ವಾತಂತ್ರ್ಯವನ್ನು ಕಳೆದುಕೊಂಡು ಇಂದು ಪರದೇಶದ ಗುಲಾಮರಾಗಿರುವಿರಿ' ಎಂಬ ಉಪದೇಶವೆ ಇಂತಹ ಕುಚೋದ್ಯಗಾರರ ಕಿಡಿಗೇಡಿತನದ ಸೂತ್ರವಾಗಿತ್ತು. ಕೊನೆಗೆ ಇಂತಹ ಅನೇಕ ಕಾರಣಗಳ ಮೂಲಕವಾಗಿ ರಶಿಯಾ ಮತ್ತು ತುರ್ಕಸ್ಥಾನದ ನಡುವೆ ಯುದ್ಧವಾಗಿ (ಕ್ರಿಮಿಯಾದ ಯುದ್ಧ ೧೮೫೦-೫೬) ರಶಿಯಾ ದೇಶವು ಗೆಲ್ಲುವದೆಂದು ತೋರಿದಾಗ ಇಂಗ್ಲಂಡ-ಫ್ರಾನ್ಸಗಳು ಯುದ್ಧದಲ್ಲಿ ಸೇರಿಕೊಂಡವು. ೧೮೫೬ರಲ್ಲಿ ಆದ ಪ್ಯಾರಿಸದ ಒಪ್ಪಂದದಲ್ಲಿ ಒಂದು ಕಡೆ ತುರ್ಕಸ್ಥಾನದ ಸಾಮ್ರಾಜ್ಯಸ್ವಾತಂತ್ರ್ಯವನ್ನೂ ಇನ್ನೊಂದು ಕಡೆ ಸುಲ್ತಾನನು ತನ್ನ ಪ್ರಜೆಗಳ ಸ್ಥಿತಿಯನ್ನು ಸುಧಾರಿಸಬೇಕೆಂದೂ ತುರ್ಕಸ್ಥಾನದ ಒಳ-ಆಡಳಿತದಲ್ಲಿ ಯಾವ ಪರರಾಷ್ಟ್ರವೂ ಕೈಹಾಕತಕ್ಕದ್ದಲ್ಲವೆಂದೂ ಶರ್ತುಗಳು ಸೇರಿಸಲ್ಪಟ್ಟವು. ಅಂದಿನಿಂದ ತುರ್ಕಸ್ಥಾನದ ಪ್ರಜೆಗಳ ಹೀನಸ್ಥಿತಿಯು ಪರಮಾವಧಿಗೆ ಮುಟ್ಟಿತೆನ್ನಬಹುದು. ಕ್ರಿಸ್ತಪ್ರಜೆಗಳ ಕೊಲೆಯೆ ಆಗಲಿ, ಮುಹಮ್ಮದೀಯ ಪ್ರಜೆಗಳ ಸುಲಿಗೆಯೆ ಆಗಲಿ ಯಾವ ಪರರಾಷ್ಟ್ರವೂ ಕೈಹಾಕುವಂತಿಲ್ಲವಲ್ಲ? ಇದಲ್ಲದೆ ಪರರಾಷ್ಟ್ರಗಳಲ್ಲಿ ಪರಸ್ಪರ ಅಸೂಯೆ ಇದೆ ಎಂದು ಕಂಡು ಹಿಡಿದ ಸುಲ್ತಾನರು ಯಥೇಷ್ಟವಾಗಿ ತಮ್ಮ ಸಾಲ-ಸುಲಿಗೆಗಳನ್ನು ಹೆಚ್ಚಿಸಿ ವ್ಯಸನಮದಾಂಧರಾಗಿ ಕರವನ್ನು ಕೊಡಲಾಗದ ಪ್ರಜೆಗಳ ರಕ್ತವನ್ನೆ ಹೀರಿ ಕೊಬ್ಬತೊಡಗಿದರು. ಪ್ರಜೆಗಳಾದರೂ ಮಾಡುವುದೇನು? ಸುಲ್ತಾನನು ಧರ್ಮಗುರುವಿನಂತೆ, ಅವನನ್ನು ಎದುರಿಸುವುದು ಪಾಪ; ಸುಲ್ತಾನನು ಸಮ್ರಾಟ, ಅವನನ್ನು ಸೋಲಿಸುವುದು ಅಸಾಧ್ಯ; ತಮ್ಮ ದೇಶದಲ್ಲಿ ತಾವು ಗುಲಾಮರು, ಅಷ್ಟೊಂದು

ಅಜ್ಞಾನ; ಹೊಟ್ಟೆಗಾಗಿ ದುಡಿಯುವುದಕ್ಕೆ ಕೂಡ ಶಕ್ತಿ ಸಾಲದು, ಅಂತಹ ಅಜ್ಞಾನ. ಹೀಗೆ ನಿಬಿಡವಾದ ಕತ್ತಲೆಯಲ್ಲಿ ಸಿಕ್ಕು ಹಿಂದು-ಮುಂದೆ ಹೆಜ್ಜೆಯನ್ನಿಡಲು, ನಿಂತಲ್ಲಿಯೆ ನಿಲ್ಲಲು ಕಾಲೇಳದ ದಾರಿಗರಂತೆ ಜೀವನ–ಮರಣಗಳ ನಡುವೆ ಸಿಕ್ಕು ಹಣ್ಣಾಗಿದ್ದರು.

---

## ೩ ಅರುಣೋದಯ

ಜೀವನ್ಮರಣದ ಈ ಕತ್ತಲೆಯಲ್ಲಿ ಬಳಲುವ ತುರ್ಕಸ್ತಾನದ ಅಸಂಖ್ಯ ಪ್ರಜೆಗಳಲ್ಲಿ ಅಲಿ ರಿಝಾ ಮತ್ತು ಅವನ ಹೆಂಡತಿ ಝುಬೀದಾ ಎಂಬವರಿಬ್ಬರು ಸಲೋನಿಕಾ ನಗರದಲ್ಲಿರುತ್ತಿದ್ದರು. ಇವರಿಗೆ ಮುಸ್ತಾಫಾ ಎಂಬ ಮಗುವು ಹುಟ್ಟಿದನು. ಮುಂದೆ ನಡೆದ ಸಂಗತಿಗಳನ್ನನುಲಕ್ಷಿಸಿ ಇದು ತುರ್ಕಸ್ತಾನದ ಅರುಣೋದಯ ಎಂದು ಹೇಳಬಹುದು.

ಅಲಿ ರಿಝಾನಾಗಲಿ ಝುಬೀದಾ ಆಗಲಿ ಯಾವ ದೃಷ್ಟಿಯಿಂದಲೂ ಅಲೌಕಿಕ ಪುರುಷರು ಎಂದು ಹೇಳುವಂತಿಲ್ಲ. ಅಲಿಯು ಒಬ್ಬ ಬಡ ಕಾರಕೂನ; ಸುಲ್ತಾನನ ಉಳಿದ ಅಧಿಕಾರಿಗಳಂತೆ ಇವನಿಗಾದರೂ ಸಾಲದಷ್ಟೆ ಸಂಬಳವು ಅನಿಯತವಾಗಿ ದೊರೆಯುತ್ತಿತ್ತು. ಝುಬೀದಾ ಎಲ್ಲ ಮಹಮ್ಮದೀಯ ಹೆಂಗಸರಂತೆ; ಓದುಬರೆಹವಿಲ್ಲ, ವ್ಯವಹಾರದ ಸಂಪರ್ಕವಿಲ್ಲ, ಧರ್ಮದಲ್ಲಿ ಅಂಧಶ್ರದ್ಧೆಯನ್ನಿಟ್ಟು ಮೋರೆಗೆ ಮುಸುಕು ಮುಚ್ಚಿಕೊಂಡು ಅಂಧಳಾಗಿಯೆ ಜೀವನದಲ್ಲಿ ನಡೆಯುವವಳು. ಇವರು ವಾಸಿಸುತ್ತಿದ್ದ ನಗರಭಾಗವಾದರೂ ಇವರಂತೆಯೆ ಹಳೆದರಿಂದ ಮುಚ್ಚಿ ಮಾಸಿದ ಬೀದಿ; ಅಲ್ಲಿಯ ಮನೆಗಳಾದರೂ ಇವರ ಜೀವನದಂತೆ ಆಶೆ–ಆಕಾಂಕ್ಷೆಗಳಿಲ್ಲದೆ ಬಾಗಿದುವು; ಹೀಗೆ ನೋಡುವವರಿಗೆ ಈ ಸಂನಿವೇಶದಲ್ಲಿ ಯಾವುದೂ ಅಸಾಮಾನ್ಯವೆನಿಸುವುದಿಲ್ಲ. ಆದರೂ ಅಂದಿನ

ಜೀವನದ ಒರೆಗೆ ಹಚ್ಚಿ ನೋಡಿದಲ್ಲಿ ಈ ಗಂಡ–ಹೆಂಡಿರಿಬ್ಬರ ಸ್ವಭಾವ ಗಳಲ್ಲಿ ಎಷ್ಟೋ ಸಂಗತಿಗಳು ಬೆಳಗಿ ಕಾಣುವವು.

ಆಲಿಗೆ ಸಂಬಳವು ಸಾಲುತ್ತಿರಲಿಲ್ಲ. ಅದೂ ಪ್ರತಿತಿಂಗಳು ತಪ್ಪದೆ ಸಲ್ಲುತ್ತಿರಲಿಲ್ಲ ಎಂದು ಮೇಲೆ ಹೇಳಿದೆಯಷ್ಟೆ? ಇದರಲ್ಲಿ ಅವನದೇನು ವಿಶಿಷ್ಟ ದೌರ್ಭಾಗ್ಯವಿರಲಿಲ್ಲ. ಸುಲ್ತಾನನ ಎಲ್ಲ ನೋಕರರ ಸ್ಥಿತಿಯೂ ಹಾಗಿದ್ದಿತು. ಹೀಗಿದ್ದರೂ ಸುಲ್ತಾನನ ನೋಕರರು ಉಪವಾಸ ಸಾಯುವ ಇಲ್ಲವೆ ಬಡತನದಲ್ಲಿ ಬಳಲುವ ಸಂದರ್ಭಗಳೇ ಇದ್ದಿರಲಿಲ್ಲ. ಇದರಲ್ಲಿ ಆಶ್ಚರ್ಯವೇನು? ಸುಲ್ತಾನನ ನೋಕರಿಯಲ್ಲಿ ಸೇರುವು ದೆಂದರೆ ಅದೊಂದು ಯೋಗ್ಯತೆಯ ಪರೀಕ್ಷೆ ಮಾತ್ರ; ಸಂಬಳದ, ಧನದ ಸಂಪಾದನೆಯ ಸಾಧನವಲ್ಲ. ಸುಲ್ತಾನನು ನಿಮಗೆ 'ಯೋಗ್ಯ' ಎಂಬ ಶಿಫಾರಸುಪತ್ರವನ್ನು ಕೊಟ್ಟಮೇಲೆ ಆ ಯೋಗ್ಯತೆಯಿಂದ ನಿಮ-ನಿಮಗೆ ತಕ್ಕಂತೆ ಧನಸಂಪಾದನೆಯನ್ನು ನೀವಾಗಿಯೆ ನಿಮ್ಮ ಶಕ್ತಿಯಿಂದ ಮಾಡ ತಕ್ಕದ್ದು. ಹೀಗಾಗಿ ಈ ಸಮ್ರಾಟನ ಸೇವಕರೆಲ್ಲರೂ ಧನಸಂಪಾದನೆಯ ಮಾರ್ಗದಲ್ಲಿ ನುರಿತವರಾದರು, ಅರ್ಥಾತ್ 'ಲಾಚಗುಳಿ'- ಪ್ರಪಂಚದ ಗೂಳಿ–ಆದರು! ಈ 'ಲಂಚಬುರುಕ' ತನವನ್ನು ಯಾರೂ ಪಾಪ ವೆಂದಾಗಲಿ ಅನ್ಯಾಯವೆಂದಾಗಲಿ ತಿಳಿಯುತ್ತಿರಲಿಲ್ಲ. ಹೊಟ್ಟೆ ತುಂಬಿ ಕೊಳ್ಳುವುದು ಮೊದಲ ಪುಣ್ಯ ಎಂಬುದೇ ವ್ಯವಹಾರಶಾಸ್ತ್ರವಾಗಿತ್ತು. ಆಲಿ ರಿಝಾನು ಮಾತ್ರ ಈ ವ್ಯವಹಾರ ಶಾಸ್ತ್ರದಲ್ಲಿ ಪಂಡಿತನಾಗಿರಲಿಲ್ಲ, ಆಗಬೇಕೆಂದು ಬಯಸಲೂ ಇಲ್ಲ. ಎಲ್ಲರೂ 'ಲಂಚಬುರಕ' ರಾಗಿರು ವಾಗ, ತನಗೂ ಕೂಡ ಹಾಗಾಗಲು ಅಧಿಕಾರ–ಅನುಕೂಲತೆಗಳು ಇದ್ದರೂ ಕೂಡ ಆಲಿ ರಿಝಾನು ಪ್ರಾಮಾಣಿಕವೃತ್ತಿಯಲ್ಲಿಯೇ ಉಳಿದು ಕೊಂಡನೆಂಬುದು ಆ ಪರಿಸ್ಥಿತಿಯಲ್ಲಿ ಅಲೌಕಿಕವಲ್ಲವೆ? ಆಲಿ ರಿಝಾ ನಲ್ಲಿ ಇನ್ನೂ ಒಂದು ಅಲೌಕಿಕ ಶಕ್ತಿ ಇದ್ದಿತು. ಅದೆಂದರೆ ಐಹಿಕ ಪ್ರಪಂಚದ ವಿಷಯವಾಗಿ ವಿಚಾರಮಾಡುವುದು. ಸುಲ್ತಾನನ ಧರ್ಮ ಸಾಮ್ರಾಜ್ಯದಲ್ಲಿ ಎಲ್ಲರೂ ಧರ್ಮವೀರರೇ ಆಗಿದ್ದರು. ಧರ್ಮವೀರರಿಂದ ತುಂಬಿದರೂ ಕೂಡ ತನ್ನ ದೇಶಕ್ಕೆ ಉಳಿದ ರಾಷ್ಟ್ರಗಳ ದೃಷ್ಟಿಯಿಂದ

ಯಾವ ಸ್ಥಾನ-ಮಾನಗಳಾಗಲಿ ಸುರಕ್ಷಿತತೆಯಾಗಲಿ ದೊರಕುತ್ತಿರಲಿಲ್ಲ ವಲ್ಲವೆಂಬುದು ಇವನಿಗೆ ಗೂಢ! ಶಿಕ್ಷಣವಾಗಲಿ, ಯಂತ್ರಶಕ್ತಿಯಾಗಲಿ ಭೂತಚೇಷ್ಟೆಗಳು, ಸರಕದ ಸೋಪಾನಗಳು ಎಂದು ತನ್ನ ಧರ್ಮ ಗುರುಗಳು ಸಾರುತ್ತಿರುವಾಗ ಅದೇ ಶಿಕ್ಷಣದಿಂದ, ಯಂತ್ರಶಕ್ತಿಯಿಂದ ಯುರೋಪ ರಾಷ್ಟ್ರಗಳು ಸುಖವನ್ನೂ ಸುರಕ್ಷಿತತೆಯನ್ನೂ ಶಕ್ತಿಯನ್ನೂ ಹೆಚ್ಚಿಸಿಕೊಳ್ಳುತ್ತಿದ್ದವಲ್ಲ ಎಂಬುದು ಇವನಿಗೆ ಇನ್ನೊಂದು ಗೂಢ! ಈ ಗೂಢಗಳ ತಿಕ್ಕಾಟದಿಂದ ಅಲಿ ರಿಝಾನಿಗೆ ಒಂದು ಅಲೌಕಿಕ ವಿಚಾರ ಹೊಳೆಯಿತು; ತನ್ನ ಮಗನಿಗೆ ಶಿಕ್ಷಣಕೊಡಬೇಕೆಂದು! ಗಂಡಸನಾದ ಮಾತ್ರಕ್ಕೆ ವ್ಯವಹಾರವನ್ನು ತುಸುಮಟ್ಟಿಗಾದರೂ ಅರಿಯಬಹುದಾದ ಅಲಿಗೆ ಈ ವಿಚಾರವು ಹೊಳೆದುದು ಆಶ್ಚರ್ಯವಲ್ಲ; ಆದರೆ ಹೊರಗಿನ ಪ್ರಪಂಚವನ್ನು ತಿಳಮಾತ್ರವಾಗಿಯೂ ಅರಿಯದ, ಶಿಕ್ಷಣವೆಂದರೆ ರೋಗವೆಂಬಂತೆ ಅದರಿಂದ ಬುದ್ಧಿಪೂರ್ವಕವಾಗಿ ಅಲಿಪ್ತಳಾಗಿ ಉಳಿದ ಝುಬೇದಾ ಇವಳಿಗೂ ಇಂತಹದೇ ವಿಚಾರ ಹೊಳೆಯಿತು. ತನ್ನ ಮಗನು ಶಾಲೆಗೆ ಹೋಗಬೇಕು, ವಿದ್ಯೆಯನ್ನು ಕಲಿಯಬೇಕು, ಎಲ್ಲರಿಗಿಂತಲೂ ಮುಂದಾಗಬೇಕು ಎಂದು ಆವಳ ಹಂಬಲ. ಎಲ್ಲ ತಾಯಂದಿರಿಗೂ ತಮ್ಮ ಮಕ್ಕಳ ವಿಷಯವಾಗಿ ಹೀಗೆಯೆ ಅಭಿಮಾನವಿರಬಹುದು. ಆದರೆ ಝುಬೇದಾ ಇವಳಿಗೆ ಬರಿಯ ಅಭಿಮಾನವಿರಲಿಲ್ಲ; ಅದೊಂದು ಹಟವಾಗಿದ್ದಿತು, ಸಂಕಲ್ಪವೆನಿಸಿತು, ಜೀವನದಲ್ಲಿ ಆವೇಶವಾಯಿತು. ತಂದೆಯಿಂದ ಪ್ರಾಮಾಣಿಕತನವನ್ನೂ ತಾಯಿಯಿಂದ ಹಟಬುದ್ಧಿಯನ್ನೂ ಮುಸ್ತಾಫನು ಗಳಿಸಿದ್ದನೆಂಬುದು ಬಾಲ್ಯದಲ್ಲಿಯೆ ಕಂಡುಬಂದಿತು. ಮುಸ್ತಾಫನು ಚಿಕ್ಕವನಿರುವಾಗಲೇ ತಂದೆಯು ತೀರಿಕೊಂಡನು; ಮನೆಯಲ್ಲಿ ಹಣವಿಲ್ಲ, ಗಳಿಸುವವರಿಲ್ಲ; ಹೀಗಿರುವಾಗಲೂ ಮಗನಿಗೆ ಶಿಕ್ಷಣವನ್ನು ಕೊಡಬೇಕೆಂದು ಹಟ ಹಿಡಿದು ಅದಕಾಗಿ ಅನೇಕ ಪ್ರಯತ್ನಗಳನ್ನೂ ಕಷ್ಟನಷ್ಟಗಳನ್ನೂ ಸಹಿಸಿದ ಝುಬೇದಾನಿಗೆ ಮಗನ ಶಿಕ್ಷಣವು ಜೀವನದ ಆವೇಶವೆ ಆಗಿದ್ದಿತೆಂದು ಹೇಳಬಹುದಲ್ಲವೆ? ಶಿಕ್ಷಣಕ್ಕಾಗಿ ತಾಯಿಗಿದ್ದ ಅಭಿಮಾನವು ಮಗನಿಗಿರಲಿಲ್ಲ. ತಂದೆಯ ಮರಣದಿಂದ ಬಂದ ಬಡತನವು ಮುಸ್ತಾಫನಿಗೆ

ಭಾಗ್ಯವಾಯಿತು, ಯಾಕೆಂದರೆ ಶಾಲೆ ತಪ್ಪಿತು! ಸೋದರಮಾವನ ಮನೆಯಲ್ಲಿ ದನಕರುಗಳನ್ನು ಕಾಯುವುದೂ, ಹೊಲ–ನೆಲಗಳಲ್ಲಿ ದುಡಿಯುವುದೂ ಮನಬಂದಂತೆ ಅಲೆದಾಡುವುದೂ ಈ ಹುಡುಗನಿಗೆ ಸ್ವರ್ಗಸುಖವೆನಿಸಿತು. ಚಿಕ್ಕಂದಿನಲ್ಲಿ ದನ–ಕರುಗಳನ್ನು ಜೋಪಾನ ಮಾಡಿದುದರಿಂದಲೆ ಮುಂದೆ ಈ ಹುಡುಗನಿಗೆ ಅಜ್ಞಾನಿಜನ–ಪಶುಗಳ ಜೋಪಾನ ಮಾಡುವ ಚಾತುರ್ಯ ಬಂದಿತೇನೊ! ಝುಬೇದಾನಿಗೆ ಮಾತ್ರ ತನ್ನ ಮಗನು ದನಕರುಗಳಿಗಿಂತ ಹೆಚ್ಚಿನ ಯೋಗ್ಯತೆಯು ಪಶುಗಳ ಮೇಲೆ ಅಧಿಕಾರ ನಡೆಯಿಸುವವನಾಗಬೇಕೆಂಬ ಹಟ ಬಿಟ್ಟಿರಲಿಲ್ಲ. ಮುಂದೆ ಎರಡು ವರ್ಷಗಳಲ್ಲಿಯೆ ಅವಳು ತನ್ನ ಸೋದರಿಯೊಬ್ಬಳಿಂದ ಸಹಾಯವನ್ನು ಪಡೆದು ಮಗನನ್ನು ಮತ್ತೆ ಶಾಲೆಗೆ ಕಳುಹಿಸಿಯೆ ಕೊಟ್ಟಳು. ತನಗೆ ಬೇಡಾದ ಶಿಕ್ಷಣವನ್ನು ಕೊಡಿಸಲು ಈ ಸ್ತ್ರೀಯರೀರ್ವರು ಇಷ್ಟೊಂದು ಹಟದಿಂದ ಹೊಂಚುಹಾಕಿದರೆಂದು ಮುಸ್ತಾಫಾನಿಗೆ ಮುಂಗತನದ ವಿಚಾರ ಬಂದಿರಬೇಕು!–ಆದಕಾರಣವೆ ತನ್ನ ಆಯುಷ್ಯದಲ್ಲಿ ಅವನು ಸ್ತ್ರೀಯರೊಡನೆ ಅಷ್ಟೊಂದು ಬಿಗುವಿನಿಂದ ನಡೆದುಕೊಂಡಿರಬೇಕು! ಏನೆ ಇರಲಿ, ಮುಸ್ತಾಫಾನು ಶಾಲೆಗೆ ಹೋಗಲೇಬೇಕಾಯಿತು. ತಾಯಿಯ ಹಟವೇ ಅಂತಹುದು.

ಮುಸ್ತಾಫಾನಿಗೆ ಶಾಲೆಯ ಶಿಕ್ಷಣವು ಸೇರುತ್ತಿರಲಿಲ್ಲವೆಂಬುದೊಂದು ಅತ್ಯಂತ ಸೋಜಿಗದ ಸಂಗತಿಯು. ಮುಂದೆ ತುರ್ಕಸ್ತಾನದ ಉದ್ಧಾರವನ್ನು ಕೈಕೊಂಡಾಗ ಶಿಕ್ಷಣದ ಪ್ರಸಾರವನ್ನು ಒತ್ತಾಯದಿಂದ ನಡೆಸಿದ ಇವನಿಗೆ ಚಿಕ್ಕಂದಿನಲ್ಲಿ ಶಿಕ್ಷಣವು ಯಾಕೆ ಸೇರುತ್ತಿದ್ದಿರಲಿಕ್ಕಿಲ್ಲ? ಸೋದರಮಾವನ ಮನೆಯಲ್ಲಿ ದನ–ಕರುಗಳನ್ನು ಕಾಯುವಾಗ ಉಲ್ಲಾಸದಿಂದಿದ್ದ ಬಾಲಕನು ಶಾಲೆಯಲ್ಲಿ ಯಾರೊಡನೆಯೂ ನಗುತ್ತಿರಲಿಲ್ಲ, ಕಲಿಯುತ್ತಿರಲಿಲ್ಲ. ತಾಯಿಯ ಪ್ರೇಮವು ಮೊದಲಿನಿಂದ ಇವನಲ್ಲಿ ವಿಶೇಷವಾಗಿದ್ದುದರಿಂದ ತಾನೊಬ್ಬ ಅಪ್ರತಿಮ ಬಾಲಕ ಎಂಬ ಕಲ್ಪನೆಯು ಮುಸ್ತಾಫಾನ ಮನಸಿನಲ್ಲಿ ಮನೆಮಾಡಿಕೊಂಡಿದ್ದಿರಬಹುದು. ' ನಾನು ನಿಮ್ಮಂತೆ ಅಲ್ಲ, ನಾನು ಬೇರೆ, ನಾನು ಹೆಚ್ಚಿನವ '

ಎಂದು ಹೇಳುತ್ತ ಮಿಕ್ಕವರಿಂದ ಸೆಟೆದುಹೋಗುವ ಮುಸ್ತಾಫಾನ ಮಾತುಗಳು ತಾಯಿಯು ಮಗನನ್ನು ತೊಡೆಯಮೇಲಿಟ್ಟುಕೊಂಡು ಮುದ್ದಿಸುವಾಗ ಆಡಿದ ಮಾತುಗಳಂತಿವೆ; ತನ್ನ ತಾಯಿಯ ಶಬ್ದಗಳ ಪ್ರತಿಧ್ವನಿಯನ್ನೆ ಮುಸ್ತಾಫಾನು ನುಡಿಸುತ್ತಿದ್ದನೇನೊ ಎಸುವಂತಿದೆ. ತಾನು ಮೇಲಿನವ, ಎಲ್ಲರ ಮೇಲೆ ಅಧಿಕಾರ ನಡೆಸುವವ ಎಂಬ ಹೆಮ್ಮೆ ಮುಸ್ತಾಫಾನಿಗೆ ಮೊದಲಿನಿಂದ ಇಂದಿನವರೆಗೂ ಇದೆ. ದನ–ಕರುಗಳನ್ನು ಕಾಯುವಾಗಿನ ಉಲ್ಲಾಸವೃತ್ತಿಗೆ ಈ ಬಾಲಿಶ ಹೆಮ್ಮೆಯೂ ಕಾರಣವಾಗಿರಬಹುದು. ಪಶುಗಳನ್ನು ನಡೆಸುವವ, ಕಾಯುವವ, ದಂಡಿಸುವವ, ಅವುಗಳ ಸರ್ವಾಧಿಕಾರಿ ತಾನು. ಪಶುಗಳಲ್ಲಿ ವ್ಯಕ್ತಿತ್ವವಿಲ್ಲ, 'ಹಿಂಡುತನ' (ಹಿಂಡಿನಲ್ಲಿಯೆ ಕೂಡಿ ನಡೆಯುವ ಗುಣ) ವಿದೆ. ಮುಸ್ತಾಫಾನು ಶಾಲೆಗೆ ಬಂದು ಅಲ್ಲಿಯ ಹುಡುಗರನ್ನು ನೋಡಿದೊಡನೆಯೆ ಅವನಿಗೆ 'ಹಿಂಡುತನ'ದ ಪಶುಗಳ ಕಲ್ಪನೆ ಬಂದಿರಬೇಕು. ಶಾಲೆಯ ಹುಡುಗರಲ್ಲೂ ಪಶುಗಳಂತೆ 'ಹಿಂಡುತನ'ವನ್ನೆ ಶಿಕ್ಷಣವು ಹುಟ್ಟಿಸುವುದಲ್ಲವೆ? ಎಲ್ಲರು ಕಲಿಯುವುದು, ಕೂಡುವುದು, ನಡೆಯುವುದು ಒಂದೇ ವಿಧದಲ್ಲಿ. ಒಬ್ಬನು ಮಾಡಿದಂತೆ ಇನ್ನೊಬ್ಬನು ಮಾಡುವಂತೆ ಕಲಿಸುವುದೆ ಶಿಕ್ಷಣ ಪದ್ಧತಿಯ ವೈಶಿಷ್ಟ್ಯವಾಗಿದೆ. ೩೦–೪೦ ಹುಡುಗರ ವರ್ಗದಲ್ಲಿ ವ್ಯಕ್ತಿತ್ವಕ್ಕೆ ಅವಕಾಶವಾಗಲಿ ಪ್ರೋತ್ಸಾಹವಾಗಲಿ ದೊರಕುವುದು ಹೇಗೆ? ಇಂತಹ ಅನೇಕ ವಿಚಾರಗಳು ಒಳಗಿಂದೊಳಗೆಯೆ ಈ ಬಾಲಕನಿಗೆ ಹೊಳೆದಿದ್ದವೇನೊ! ಇದಲ್ಲದೆ ಕಲಿಸುವ ವಿಷಯಗಳಾದರೂ ಎಂತಹವು? ಅಂತೂ ಮುಸ್ತಾಫಾನಿಗೆ ಶಾಲೆಯ ಶಿಕ್ಷಣವು (ಬರಿಯ ಶಿಕ್ಷಣವಲ್ಲ) ಅಸಹ್ಯವೆನಿಸಿತು. ಇದಲ್ಲದೆ ಅವನ ಹೆಮ್ಮೆಯ ಸ್ವಭಾವವೊಂದು ಯಾವಾಗಲೂ ಅವನನ್ನು ತೊಂದರೆಗೀಡುಮಾಡುತ್ತಿದ್ದಿತು. ತಾನು ಎಲ್ಲರಿಗಿಂತಲೂ ಹೆಚ್ಚಿನವ ಎಂದು ಭಾವಿಸುವ ಈ ಹುಡುಗನಿಗೆ ಶಿಕ್ಷಕರು ತನ್ನ ಮೇಲೆ ಅಧಿಕಾರವನ್ನು ನಡೆಸುವುದು ಕೂಡ ಸಹನವಾಗುತ್ತಿರಲಿಲ್ಲ. ಹೀಗಿರುವಾಗ ಒಂದು ದಿವಸ ಇವನು ಮಿಕ್ಕ ಹುಡುಗರೊಡನೆ ಜಗಳಕ್ಕೆ ನಿಲ್ಲಬೇಕಾಯಿತು. ಇವನು ಜಗಳವನ್ನು ನಡೆಸುವಾಗಲೆ ಶಿಕ್ಷಕನು ಒಂದುದನ್ನೂ ಮುಂದೆ ನಡೆದ ಸಂಗತಿಯಿಂದ ಕನಲಿ

ಇವನು ಶಾಲೆಯಿಂದ ಹೊರಹೊರಟು ತಿರುಗಿ ಬರಲೇ ಇಲ್ಲವೆಂಬುದನ್ನೂ ಈ ಚರಿತ್ರೆಯ ಪ್ರಾರಂಭದಲ್ಲಿಯೆ ಹೇಳಿದ್ದೇವೆ.

ಝುಬೇದಾನ ಹೃದಯವು ಮತ್ತೆ ಕಳವಳಗೊಂಡಿತು. ಇನ್ನೊಬ್ಬರ ಸಹಾಯದಿಂದ ಶಾಲೆಗೆ ಕಳುಹಿಸಿದ ಈ ಬಾಲಕನು ಶಿಕ್ಷಕರೊಡನೆ ಜಗಳ ಹೂಡಿ ಓಡಿಹೋದರೆ ಮತ್ತೆ ಸಹಾಯ ಮಾಡುವರಾರು? ತಾಯಿಯು ಎಷ್ಟು ಹೇಳಿದರೂ, ಹೆದರಿಸಿದರೂ, ಹೇಳಿಕೊಂಡರೂ ಮುಸ್ತಾಫಾನು ತಿರುಗಿ ಶಾಲೆಯಲ್ಲಿ ಕಾಲಿಡಲು ಒಪ್ಪಲಿಲ್ಲ. 'ಹುಡುಗರು ನನ್ನನ್ನು ಅವಮಾನಗೊಳಿಸಿದರು; ಅದಕಾಗಿ ಅವರನ್ನು ಹೊಡೆಯುವುದು ನನ್ನ ಕರ್ತವ್ಯ; ನನ್ನ ಕರ್ತವ್ಯವನ್ನೆ ನಾನು ಮಾಡಿದರೆ ಯಾವ ಶಾಲೆಯಲ್ಲಿ ಶಿಕ್ಷಕನು ನನ್ನನ್ನು ಅಪರಾಧಿ ಎಂದು ದಂಡಿಸಿದನೊ ಆ ಶಾಲೆಯಲ್ಲಿ ನಾನು ಎಂದಿಗೂ ಕಾಲಿಡತಕ್ಕವನಲ್ಲ' ಎಂದು ಆರ್ಭಟಿಸಿದನು. ಆಗ ಇವನ ವಯಸ್ಸು ಹನ್ನೆರಡು! ಇವನ ಧೈರ್ಯದ ಮನೋವೃತ್ತಿಯನ್ನೂ ಮಾತುಗಳನ್ನೂ ಕೇಳಿ ಆಶ್ಚರ್ಯಚಕಿತನಾದ ಇವನ ಸೋದರ ಮಾವನು 'ನೀನು ಸೈನಿಕನಾಗಲು ಯೋಗ್ಯನಿರುವೆ' ಎಂದನು. ಮುಸ್ತಾಫಾನಿಗೆ ಈ ಮಾತಿನಿಂದ ಒಮ್ಮೆಲೆ ಎದೆಯಲ್ಲಿ ಮಿಂಚಿದಂತಾಯಿತು; ಕಣ್ಣುಗಳು ತೆರೆದುವು; ತುಟಿಗಳು ಅರಳಿದವು. ತಟ್ಟನೆ ಮನೆಯನ್ನು ಬಿಟ್ಟು ತನ್ನ ತಂದೆಯ ಮಿತ್ರನಾದ ಒಬ್ಬ ಸೈನ್ಯಾಧಿಕಾರಿಯ ಕಡೆಗೆ ಹೋದನು. ಅವನ ಸಹಾಯ-ಸಲಹೆಗಳನ್ನು ಪಡೆದು ಒಂದು ಸೈನ್ಯ ಶಿಕ್ಷಣ ಸಂಸ್ಥೆಯನ್ನು ಸೇರಿದನು.

ಈ ಸಂಸ್ಥೆಯಲ್ಲೂ ಮುಸ್ತಾಫಾನು ತನ್ನ ಹುಟ್ಟುಗುಣವಾದ ಹೆಮ್ಮೆಯಿಂದಲೆ ನಡೆಯುತ್ತಿದ್ದನು. ಮಿಕ್ಕ ವಿದ್ಯಾರ್ಥಿಗಳ ಸಹವಾಸವು ಇವನಿಗೆ ಎಂದೂ ಬೇಕೆನಿಸಲಿಲ್ಲ. ಇವನು ಉದ್ದಾಮನಿದ್ದಷ್ಟು ಗಟ್ಟಿಗನೂ ಇದ್ದುದರಿಂದ ಯಾರೂ ಇವನ ಗೊಡವೆಗೆ ಹೋಗುತ್ತಿರಲಿಲ್ಲ. ಅಭ್ಯಾಸದಲ್ಲಿ ಮಾತ್ರ ಇವನು ಇಲ್ಲಿ ಕಲ್ಪನೆಯನ್ನು ಮೀರಿ ಪ್ರಗತಿಯನ್ನು ತೋರಿಸಿದನು. ಮುಸ್ತಾಫಾನಿಗೆ ಗಣಿತವಿಷಯವು ಅತ್ಯಂತವಾಗಿ ರುಚಿಸುತ್ತಿದ್ದಿತು. ಇದೊಂದು ಇವನ ಸ್ವಭಾವದ ದ್ಯೋತಕವೆಂದೇ

ಹೇಳಬಹುದು. ಇಡಿಯ ಆಯುಷ್ಯದಲ್ಲಿ ಮುಸ್ತಾಫಾನ ಸ್ವಭಾವವು ಗಣಿತದಂತೆಯೆ ಇದ್ದದ್ದು ಕಂಡು ಬರುವುದು. ಒಂದು ನಿಯಮಿತ ಕ್ರಮ, ಅದರಂತೆ ನಡೆದರೆ ನಿಯಮಿತವಾದ ಉತ್ತರ; ಹೆಚ್ಚಿನ ಹರಟೆ-ಚರ್ಚೆಗಳಿಲ್ಲ. ಈ ಚುರುಕತನದಿಂದ ಮುಸ್ತಾಫಾನಲ್ಲಿ ಒಬ್ಬ ಶಿಕ್ಷಕನ ಒಲವು ಹೆಚ್ಚಾಗಿ ಕೂಡಿತು. ಆ ಶಿಕ್ಷಕನ ಹೆಸರೂ ಮುಸ್ತಾಫಾ ಎಂದೇ ಇದ್ದಿತು. 'ನಾನೂ ನೀನೂ ಮುಸ್ತಾಫಾ ಎಂಬ ಒಂದೇ ಹೆಸರಿನವರಿದ್ದುದರಿಂದ ಕೆಲವು ಸಲ ಗೊಂದಲವೇಳಬಹುದು. ಅದಕಾಗಿ ನಿನಗೆ ಇಂದಿನಿಂದ ಮುಸ್ತಾಫಾ ಕೆಮಾಲ (ಕೆಮಾಲ=ಅತ್ಯುತ್ತಮ, ಘನವಂತ) ಎಂದು ಹೆಸರಿಡುವೆ' ಎಂದು ಶಿಕ್ಷಕನು ಒಂದು ದಿವಸ ಹೇಳಿದನು. ಆ ಶಿಕ್ಷಕನ ನಿಜವಾದ ಉದ್ದೇಶವು ಸಾಧಿಸಿತೊ ಇಲ್ಲವೊ, ಆದರೆ ಮನಸಿನೊಳಗಿನ ಆಶೆ ಮಾತ್ರ ಈಡೇರಿತೆಂದು ಹೇಳಬಹುದು. ಬಾಲಕ ಮುಸ್ತಾಫಾನು ಕೊನೆಗೆ ನಿಜವಾಗಿಯೆ 'ಕೆಮಾಲ' (ಘನವಂತ) ನಾದನು. ಪಕ್ಕ ಹುಡುಗರು ಆಟ-ನೋಟಗಳಲ್ಲಿ ಹೊತ್ತುಕಳೆಯುವಾಗ ಮುಸ್ತಾಫಾನು ಜ್ಞಾನಸಂಪಾದನೆಯನ್ನು ನಡೆಸುತ್ತಿದ್ದನು. ಸೈನಿಕನಾಗುವ ಉದ್ದೇಶದಿಂದ ತನ್ನ ದೇಶದ ಇತಿಹಾಸವನ್ನು ಓದುವಾಗ ಜಗತ್ತಿನ ಇತಿಹಾಸದ ಕಲ್ಪನೆಯೂ ಅವನಿಗೆ ಬರತೊಡಗಿತು. ತನ್ನ ಪ್ರಾಚೀನರ ವೈಭವ-ಶೌರ್ಯಗಳ ಕಲ್ಪನೆಯೊಂದಿಗೆ ಸಮಕಾಲೀನ ವಸ್ತುಸ್ಥಿತಿಯನ್ನು ಹೋಲಿಸುವಾಗ ಈ ಯುವಕನಿಗೆ ದಿಗಿಲು, ರೋಮಾಂಚ. ಅನ್ಯದೇಶ–ಸಾಮ್ರಾಜ್ಯಗಳನ್ನು ಪಾದಾಕ್ರಾಂತ ಮಾಡಿದ ತನ್ನ ಪೂರ್ವಜರ ವಂಶೀಯರು ಇಂದು ಅನ್ಯರಾಷ್ಟ್ರಗಳ ಪಾದಪೀಠರಾಗಿದ್ದಾರೆಂಬುದನ್ನು ಕಂಡು ಈ ತರುಣ ಸೈನಿಕನು ವೀರಾವೇಶದಿಂದ ತಳಮಳಿಸುತ್ತಿದ್ದನು. ಅಲ್ಲಲ್ಲಿ ಬಂಡುಗಳೆ ಯಾವಾಗಲೂ ಏಳುತ್ತಿದ್ದುವೆಂಬುದೂ ಅದಕಾಗಿ ಸೈನಿಕನಾದ ಮೇಲೆ ತನ್ನನ್ನು ಅಲ್ಲಿಂದಿಲ್ಲಿಗೆ ಯಾವಾಗಲೂ ಓಡಾಡಿಸಬಹುದೆಂದೂ ಇವನಿಗೆ ಗೊತ್ತು. ಆದರೆ ಈ ಬಂಡುಗಳ ಕಾರಣವೇನು? ನಮ್ಮ ಸುಲ್ತಾನನಲ್ಲಿ ಶಕ್ತಿ ಇದ್ದರೆ ಬಂಡುಗಳು ಏಳುತ್ತಿದ್ದುವೆ? ಶಕ್ತಿಯನ್ನು ಮೀರಿದ ಸಾಮ್ರಾಜ್ಯವನ್ನು ಕಾಯ್ದುಕೊಳ್ಳಲು

ಹವಣಿಸಿ ಪ್ರಜೆಗಳಿಂದ ಯುದ್ಧಕ್ಕಾಗಿ ಹಣವನ್ನು ಹೆಚ್ಚೆಚ್ಚಾಗಿ ಸುಲಿದು ದೇಶದಲ್ಲಿ ಅಸಂತೋಷವನ್ನು ಬೆಳೆಯಿಸುವುದು ಯೋಗ್ಯವೆ- ಎಂಬ ಸಂದೇಹ ಇವನಿಗೆ. ಕೆಮಾಲನು ಓರಕ್ಕವರೊಡನೆ ಹೆಚ್ಚಾಗಿ ಮಾತು ಕತೆಗಳನ್ನಾಡುತ್ತಿದ್ದಿಲ್ಲವಾದ್ದರಿಂದ ಅವನ ವಿಚಾರಗಳು ಯಾವಾಗಲೂ ಅವನ ತಲೆಯಲ್ಲಿ ನಿಧಾನವಾಗಿ, ಪರಿಪಕ್ವವಾಗಿ ಬೆಳೆಯುತ್ತಿದ್ದುವು. ಪ್ರಜೆಗಳನ್ನು ಸಂತೋಷದಲ್ಲಿಟ್ಟರೆ ದೇಶಕ್ಕೆ ಹಿತಕರ, ದೇಶಕ್ಕೆ ಹಿತ ವಾಗುವಂತೆ ನಡೆದರೆ ಪ್ರಜೆಗಳ ವಿಶ್ವಾಸ, ಪ್ರಜೆಗಳ ವಿಶ್ವಾಸವನ್ನು ಕಾಯ್ದುಕೊಂಡರೆ ಪರರಾಷ್ಟ್ರಗಳಿಂದ ಧನಸಹಾಯವನ್ನು ಬೇಡಿ ಪರಾವಲಂಬಿಯಾಗುವ ಕಾರಣವಿಲ್ಲ, ತನ್ನ ತನು-ಧನ ಶಕ್ತಿಗಳಿಗೆ ಸಾಲು ವಷ್ಟು ಸಾಮ್ರಾಜ್ಯವನ್ನು ಕಾಯ್ದುಕೊಂಡರೆ ಸುಲ್ತಾನನಿಗೂ ಹಿತಕರ, ಇದಲ್ಲದೆ ಕ್ರಿಸ್ತೀಯ ಮತ್ತು ಮುಹಮ್ಮದೀಯ ಪ್ರಜೆಗಳ ಧರ್ಮ ವಿರೋಧದಿಂದಲೂ ರಾಜ್ಯಕ್ಕೆ ಹಾನಿಯಾಗುತ್ತಿದ್ದುದರಿಂದ ಇಂತಹ ಧರ್ಮದ ಆವಶ್ಯಕತೆ ಇಲ್ಲ- ಮುಂತಾಗಿ ತಲೆತುಂಬ ವಿಚಾರಗಳನ್ನು ಒಬ್ಬನೇ ಒಬ್ಬನಾಗಿ ಇವನು ನಡೆಸುತ್ತಿದ್ದನು. ಇವನ ಪ್ರಗತಿಯೂ ಅಭ್ಯಾಸದಲ್ಲಿ ಯಶಸ್ವಿಯಾಗಿ ಸಾಗಿತು. ಇವನ ಪ್ರಾವೀಣ್ಯಕ್ಕಾಗಿ ಇವ ನನ್ನು ಕಾನಸ್ಟಾಂಟಿನೋಪಲದ ಸೈನ್ಯಾಧಿಕಾರಿ ವಿದ್ಯಾಲಯ (Staff College) ಕ್ಕೆ ಕಳುಹಿಸಲಾಯಿತು. ಈಗ ಇವನ ವಯಸ್ಸು ಇಪ್ಪತ್ತು!

---

# ೪ ಪ್ರಾತಃಕಾಲದ ಕಿಲಕಿಲಾಟ

ಇದುವರೆಗೆ ಮುಸ್ತಾಫಾನು ಕಾನಸ್ಟಾಂಟಿನೋಪಲದಂತಹ ದೊಡ್ಡ ನಗರವನ್ನು ಕಂಡಿರಲಿಲ್ಲ; ಕಾನಸ್ಟಾಂಟಿನೋಪಲವು ನಗರವಲ್ಲದೆ ಬಂದರವೂ ಆಗಿದ್ದಿತು. ಬಂದರದಲ್ಲಿಯ ಜನಜೀವನವೆಂದರೆ ಕ್ಷೇತ್ರದಲ್ಲಿಯಂತೆ. ಅನೇಕ ಜಾತಿ-ಜನಾಂಗಗಳು ಪಾಪಪುಣ್ಯಗಳ ಹೆದರಿಕೆಯಿಲ್ಲದೆ ಕಾಲವನ್ನು ಕಳೆಯುವರು. ಯಾವ ಪಾಪಕೃತ್ಯವನ್ನು ಮಾಡಿದರೇನಾಯಿತು? ಕ್ಷೇತ್ರವಿದೆ, ಅದೆಲ್ಲವೂ ಮರುಗಳಿಗೆಯಲ್ಲಿ ತೊಳೆದು ಹೋಗುವುದು—ಎನುವಂತಹ ಉಚ್ಛೃಂಖಲವೃತ್ತಿಯು ಬಂದರಗಳಲ್ಲಿ ಕಂಡುಬರುವುದು. ಕೆಮಾಲನಿಗೂ ಈ ಉಚ್ಛೃಂಖಲ ವೃತ್ತಿಯು ಆವರಿಸಿತು. ತನ್ನ ಹೆಮ್ಮೆಯು ಮೂಲಕ ಇವನು ತನ್ನ ಸರಿಕರೊಡನಾಗಲಿ, ತನಗಿಂತ ಹೆಚ್ಚಿನವರೊಡನಾಗಲಿ ವ್ಯವಹಾರದಲ್ಲಿ ಎಂದೂ ಕೂಡುತ್ತಿರಲಿಲ್ಲ. ಆದರೆ ತನಗಿಂತ ಕಡಮೆ ಯೋಗ್ಯತೆಯುವರ ಸಹವಾಸದಲ್ಲಿ ಮಾತ್ರ ಇವನು ಕೂಡಲೆ ಬೆರೆತು, ಮೈಮರೆಯುತ್ತಿದ್ದನು. ತನ್ನ ಸುತ್ತಲಿನವರು ಕಡಮೆ ಯೋಗ್ಯತೆಯುವರಾದುದರಿಂದ ತನ್ನ ಹೆಮ್ಮೆಗೆ ಯಾವಾಗಲೂ ಅವಕಾಶ-ಸಮಾಧಾನಗಳು ದೊರೆಯುತ್ತಿದ್ದುವು. ಹೀಗಾಗಿ ಕೆಮಾಲನು ಕಡಮೆ ದರ್ಜೆಯ ಸ್ತ್ರೀಯರ ಮತ್ತು ಮದ್ಯ ಸೇವಕರ ಸಹವಾಸದಲ್ಲಿ ಲೋಲಾಡುತ್ತ ಮತ್ತನಾಗಿ ಮೈಮರೆದು ಕಾಲ ಕಳೆಯತೊಡಗಿದನು. ಇದನ್ನರಿಯದ ಝುಬೇದಾನಿಗೆ ಇನ್ನೊಂದು ಬಗೆಯ ಕಳವಳ. ಮಗನು ದೊಡ್ಡ ನಗರಕ್ಕೆ ಹೋಗಿದ್ದಾನೆ, ಅಲ್ಲಿಯ ಯೋಗ್ಯತೆಗೆ ತಕ್ಕ ಉಡಿಗೆ-ತೊಡಿಗೆಗಳು ಅವನಿಗೆ ಬೇಕು. ಇವಕ್ಕೆಲ್ಲ ಹಣವನ್ನೆಲ್ಲಿಂದ ತರಬೇಕು? ಹಣವಿಲ್ಲದೆ ಹೋದರೆ ತನ್ನ ಮಗನ ಸ್ಥಾನಮಾನಗಳು ಕಡಮೆ ಎನಿಸಬಹುದಲ್ಲ ಎಂದು ಅವಳ ಚಿಂತೆ. ಎಂತಹ ಕಷ್ಟವನ್ನು ಸಹಿಸಿಯಾದರೂ ಮಗನಿಗೆ ಸಡಗರವನ್ನು ಒದಗಿಸಬೇಕೆಂಬ ಹಟದಿಂದ ಕಾಲವನ್ನು ಕಳೆವಾಗ–ತುರ್ಕಸ್ತಾನದ ಸುದೈವದಿಂದ—

ಒಬ್ಬ ಧನಿಕನು ಅವಳನ್ನು ವರಿಸಲು ಆಸೆಪಟ್ಟನು. ತನಗೆ ಮದಿವೆ ಬೇಡವಾಗಿದ್ದರೂ ಮಗನ ಭವಿತವ್ಯವನ್ನು ಲಕ್ಷಿಸಿ ಝುಬೇದಾ ಒಪ್ಪಿದಳು. ಆದರೆ ಅಭಿಮಾನಧನನಾದ ಕೆಮಾಲನಿಗೆ ತಾಯಿಯ ಈ ಕೃತ್ಯದಲ್ಲಿ ತನಗಾಗಿದ್ದ ಸ್ವಾರ್ಥತ್ಯಾಗವು ಕಾಣಲಿಲ್ಲ; ಅದೊಂದು ಸುಖಲೋಲುಪತೆ ಎನಿಸಿ ಅವನು ಅತ್ಯಂತವಾಗಿ ಅಸಹ್ಯಪಟ್ಟನು. ಇಂದಿಲ್ಲ ನಾಳೆಯಾದರೂ ತನ್ನ ಮನೋಗತವು ಮಗನಿಗೆ ತಿಳಿಯುವುದೆಂದೂ, ಒಂದು ವೇಳೆ ತಿಳಿಯದೆ ಹೋದರೂ ತನ್ನ ಮಗನಿಗೆ ಕಷ್ಟ ತಪ್ಪಿತಲ್ಲ ಎಂದೂ ಮಾತೆಯ ಹೃದಯವು ಉಲ್ಲಾಸದಿಂದ ಕುಣಿಯುತ್ತಲಿದ್ದಿತು.

ಮಗನ ಹೃದಯದಲ್ಲಿ ಮಾತ್ರ ಇಷ್ಟರಲ್ಲಿ ಮತ್ತೊಂದು ಕಾರಣದಿಂದ ಕೋಲಾಹಲವೆದ್ದಿತು. ಕಾನಸ್ಟಾಂಟಿನೋಪಲ್ಲದ ಜೀವನದಲ್ಲಿ ಒಂದು ತರದ ಆಲೋಲಕಲ್ಲೋಲವಿದ್ದಿತು. ಒಂದುಕಡೆ ಇದ್ದುದಿಷ್ಟೆ ಸುಖಮಯವೆಂದು ವಿಲಾಸಗಳಲ್ಲಿಯೆ ಕಾಲಕಳೆಯುವ ಜನರಿದ್ದರೆ ಇನ್ನೊಂದು ಕಡೆ ಇದ್ದುದರಿಂದ ತೃಪ್ತರಾಗದೆ ಅದನ್ನು ತಿದ್ದುವ ಹಟವಾದಿ ಕ್ರಾಂತಿಕಾರಕ ಜನರೂ ಈ ನಗರದಲ್ಲಿದ್ದರು. ಜೀವನದ ಆಲೋಲಕಲ್ಲೋಲವು ಕೆಮಾಲನನ್ನು ಈ ಎರಡೂ ದಂಡೆಗಳನ್ನು ಮುಟ್ಟಿಸುತ್ತ ತೇಲಾಡಿಸುತ್ತಿದ್ದಿತು. ತಮ್ಮ ದೇಶಕ್ಕಾಗಿ ಅತ್ಯಂತ ಉಜ್ವಲವಾದ ಅಭಿಮಾನವನ್ನು ತಾಳುವ ಅನೇಕ ತರುಣರು ಈ ವಿದ್ಯಾಲಯದಲ್ಲಿದ್ದರು. ತಮ್ಮ ದೇಶದಲ್ಲಿ ಪರದೇಶೀಯರು ಅಧಿಕಾರವನ್ನು ನಡೆಸುವುದಾಗಲಿ ತಮ್ಮ ಸುಲ್ತಾನನು ತನ್ನ ಮನಬಂದಂತೆ ವರ್ತಿಸುವುದಾಗಲಿ ಇವರ ನೆತ್ತರವನ್ನು ಕುದಿಸುತ್ತಿತ್ತು. ಇಂತಹ ಸ್ಥಿತಿಯನ್ನು ಶಕ್ಯವಾದ ರೀತಿಯಲ್ಲಿ ಸುಧಾರಿಸಲೇಬೇಕೆಂಬ ಹಟದಿಂದ ಈ ತರುಣರು ತಮ್ಮೊಳಗೆಯೆ 'ಮಾತೃಭೂಮಿ' ಎಂಬ ಸಂಘವನ್ನು ನಡೆಸಿದ್ದರು. ಕೆಮಾಲನು ಉಪಾಯಾಂತರದಿಂದ ಈ ಸಂಘದ ಸದಸ್ಯನಾದನು; ಉಜ್ವಲವಾದ ಭಾಷಣಗಳನ್ನು ಮಾಡಿದನು; ದೇಶಾಭಿಮಾನದ ಮಂತ್ರವನ್ನು ಪಾಠ ಮಾಡಿದನು. ಇದೆಲ್ಲವೂ ಮರೆಯಲ್ಲಿಯೇ; ಯಾಕೆಂದರೆ ಇಂತಹ ಚಟುವಟಿಕೆಗಳು ಸುಲ್ತಾನನ ಸರಕಾರಕ್ಕೆ ಸೇರುತ್ತಿರಲಿಲ್ಲವಂತೆ!

ಇದರಿಂದಂತೂ ಕೆಮಾಲನಿಗೆ ಅಪಮಾನವೆನಿಸಿತು, ಆಶ್ಚರ್ಯವಾಯಿತು. ತಮ್ಮ ದೇಶದ ಅಭಿಮಾನವು ದ್ರೋಹವೇ? ತಮ್ಮ ದೇಶದ ಸ್ಥಿತಿಯನ್ನು ಸುಧಾರಿಸಬೇಕೆನ್ನುವುದು ಪಾಪವೆ? ಪರಕೀಯರನ್ನು ಹೊಡೆದೋಡಿಸಿ ತನ್ನ ದೇಶವು ಸ್ವಾವಲಂಬಿಯಾಗುವಂತೆ ಯತ್ನಿಸುವುದು ಅಪರಾಧವೆ? ಇದು ನ್ಯಾಯವೆ, ಅನ್ಯಾಯವೆ? ಹೀಗೆ ಕೆಮಾಲನು ಬಹು ದಿವಸಗಳ ವರೆಗೆ ವಿಚಾರ ಮಾಡುವ ಆವಶ್ಯಕತೆಯು ಉಳಿಯಲಿಲ್ಲ. ತೀವ್ರದಲ್ಲಿಯೆ ಸುಲ್ತಾನನು ತನಗೆ ಯಾವುದು ನ್ಯಾಯವೆಂಬುದನ್ನು ತೋರಿಸುವುದ ಕ್ಕಾಗಿ 'ಮಾತೃಭೂಮಿ' ಸಂಘದ ಸದಸ್ಯರನ್ನೆಲ್ಲ ಸೆರೆಹಿಡಿದು ವಿಚಾರಣೆ ಗಾಗಿ ಕಾರಾಗೃಹದಲ್ಲಿರಿಸಿದನು. ಝುಬೇದಾನ ಪ್ರೀತಿಯ ಮಗನು ಸುಲ್ತಾನನ ಕೋಪಕ್ಕೆ ಸಿಲುಕಿದನು. ಸುಲ್ತಾನನ ಕೋಪವೆಂದರೇನು? ಸೆರೆಮನೆಯಲ್ಲಿಯೆ ಕೊಳೆಯಬಹುದು, ಸುಡುವ ಬೆಂಕಿಯಲ್ಲಿ ಬೇಯಿಸ ಬಹುದು! ಹಗಲಿರುಳು ಹಂಬಲಿಸುವ ತಾಯಿಗೆ ಇವೇ ಕನಸುಗಳು.

ತಾಯಿಯು ಕಳವಳದಿಂದ ಕಂಡ ಒಂದು ಕನಸಿನಂತೆಯೂ ವಸ್ತು ಸ್ಥಿತಿಯಲ್ಲಿ ಜರುಗಲಿಲ್ಲ. ಅನೇಕ ದಿನಗಳ ವರೆಗೆ ಕಾರಾಗೃಹದ ಕತ್ತಲೆ ಯಲ್ಲಿ ಕೊಳೆತ ಕೆಮಾಲನನ್ನೂ ಆವನ ತರುಣ ಮಿತ್ರರನ್ನೂ ಸುಲ್ತಾನನು ಉದಾರ ಮನಸ್ಸಿನಿಂದ ಕ್ಷಮಿಸಿದನು. ಕ್ಷಮೆಯಿಂದ ಉಪಕೃತರಾದ ಈ ತರುಣರು ಸುಲ್ತಾನನಿಗೆ ಆಜನ್ಮ ಗುಲಾಮರಾಗುವರೆಂದಾಗಲಿ, ಸುಲ್ತಾನನು ಕ್ಷಮಿಸಿರುವದನ್ನು ಕಂಡು ತಾವು ತಿಳಿದಂತೆ ಸುಲ್ತಾನನ ಸ್ವಭಾವವಿಲ್ಲವೆಂದು ಮನಗಂಡು ಪುಂಡಾಟಿಕೆಯನ್ನು ಕಡಮೆ ಮಾಡ ಬಹುದೆಂದಾಗಲಿ ಯಾರಾದರೂ ತಿಳಿದುಕೊಂಡಿದ್ದರೆ ಅದು ಶುದ್ಧ ತಪ್ಪು ಎಂದು ಸ್ವಲ್ಪಾವಧಿಯಲ್ಲಿಯೇ ತಿಳಿದು ಬರಬಹುದಾಗಿತ್ತು. ಕ್ಷಮಿಸಿ ದರೂ ಈ ತರುಣರು ಮತ್ತೊಮ್ಮೆ ಕಾನಸ್ಟಾಂಟಿನೋಪಲಿನಲ್ಲಿ ಒಂದೆಡೆ ಕೂಡದಂತೆ ಇವರನ್ನು ಒಬ್ಬರೊಬ್ಬರಿಗೆ ತಿಳುಹಿಸದೆ ಬೇರೆಬೇರೆ ದೂರ ಸ್ಥಳಗಳಿಗೆ ಒಯ್ಯಲಾಯಿತು. ಕೆಮಾಲನನ್ನು ಸೀರಿಯಾಕ್ಕೆ ದೇಶಾಂತರಿ ಸಿದರು. ಕೆಮಾಲನು ದಮಸ್ಕಸದಲ್ಲಿ ತನಗೆ ನಿಯಮಿಸಿದ ಸೈನ್ಯದಳ ವನ್ನು ಕೂಡಿಕೊಂಡನು. ಕೆಮಾಲನ ಮನಸ್ಸಿಗೆ ಶಾಂತಿ ಇರಲಿಲ್ಲ;

ನಡೆದ ಸಂಗತಿಯಿಂದ ಅವನ ಅಸಂತೋಷವು ಹೆಚ್ಚಿದ್ದಿತು. 'ನಮ್ಮ ಸುಲ್ತಾನ ನಮ್ಮ ಧರ್ಮ ಗುರುವಿನಂತೆ, ಅವನನ್ನು ಎದುರಿಸುವುದು ಪಾಪ' ಎಂಬ ಕಲ್ಪನೆಯು ಇವನಿಗೆ ಹುಡುಗಾಟವೆನಿಸಿತು. ಅನ್ಯಾಯ ವನ್ನು ಇದ್ದಲ್ಲಿಂದ ಕಿತ್ತುಹಾಕಬೇಕು. ದೇವನ ಹೆಸರಿನಿಂದ ಅನ್ಯಾಯ ವಾದರೆ ದೇವನನ್ನು, ಧರ್ಮದ ಹೆಸರಿನಿಂದ ಅನ್ಯಾಯವಾದರೆ ಧರ್ಮ ವನ್ನು, ರಾಜನಿಂದ ಅನ್ಯಾಯವಾದರೆ ರಾಜನನ್ನೆ ಕಿತ್ತುಹಾಕುವುದು ನ್ಯಾಯ ಎಂದು ಈ ಯುವಕನ ತತ್ವ. ಇಂದು ನಡೆಯುವಂತಹದಲ್ಲ ಎಂದು ಕಂಡುಬಂದುದನ್ನು ಬಿಡಲೇ ಬೇಕು. ಅದು ಹಿಂದಿನಿಂದ ನಡೆದು ಬಂದುದೆಂದು ಹಟದಿಂದ ಅದನ್ನಪ್ಪಿಕೊಳ್ಳುವುದು ಜಾಣತನವಲ್ಲ. ಮೂರು ಖಂಡಗಳಲ್ಲಿ ಸಾಮ್ರಾಜ್ಯವನ್ನು ಸಂರಕ್ಷಿಸುವ ಯೋಗ್ಯತೆ ಇಂದು ಇದ್ದಿಲ್ಲವಾದರೆ ಸಾಮ್ರಾಜ್ಯವನ್ನು ಬಿಟ್ಟುಕೊಡಬಾರದೇಕೆ? ಮುಹಮ್ಮದೀಯ ಧರ್ಮಕ್ಕಾಗಿ ಉಳಿದ ರಾಷ್ಟ್ರಗಳಲ್ಲಿಯ ಮುಹಮ್ಮ ದೀಯರ ಬೆನ್ನು ಕಟ್ಟಿ ಕಡಿದಾಡುವದು ಯಾವ ಜಾಣತನ? ಈ ಸಾಮ್ರಾ ಜ್ಯವೂ ಬೇಡ, ಈ ಧರ್ಮವೂ ಬೇಡ ಎಂದು ಕೆಮಾಲನ ಸಿದ್ಧಾಂತ. ಆದರೆ ಅವನ ಜೊತೆಗಾರರಲ್ಲೇ ಬಹುಜನ ತರುಣರಿಗೆ ಸಾಮ್ರಾಜ್ಯದ ಮತ್ತು ಧರ್ಮದ ಅಭಿಮಾನವಿದ್ದುದರಿಂದ ಕೆಮಾಲನು ಆ ಪ್ರಶ್ನೆಗಳನ್ನು ಗೊತ್ತಿಗೆ ಹಚ್ಚಿ ತನ್ನ ಪಕ್ಷಬಲವನ್ನು ಕಡಮೆ ಮಾಡಲು ಬಯಸಲಿಲ್ಲ. ಸದ್ಯದ ಕೆಲಸವೆಂದರೆ ಸುವ್ಯಸ್ಥಿತವಾಗಿ ಸಹಕಾರ್ಯಕರ್ತರ ಸಂಘಟನೆ ಮಾಡುವುದು, ಸಂಘಗಳನ್ನು ಹೂಡುವುದಲ್ಲ; ಶಿಸ್ತು ಬೆಳೆಸುವುದು, ಶೂರಾವೇಶದಲ್ಲಿ ಹೊತ್ತು ಕಳೆಯುವುದಲ್ಲ—ಎಂದು ನಿಶ್ಚಯಿಸಿ ದಮ ಸ್ಕಸದಲ್ಲಿಯೆ, ತನ್ನ ದಳದಲ್ಲಿಯೆ ಆಡಳಿತದಿಂದ ಅಸಂತುಷ್ಟರಾದ ಸೈನಿಕ ರನ್ನೂ ಸೈನ್ಯಾಧಿಕಾರಿಗಳನ್ನೂ ಕೂಡಿಸಿದನು. ಸೀರಿಯಾ ಪ್ರಾಂತದ ಎಲ್ಲ ಭಾಗಗಳಲ್ಲೂ ನಿಯಮಿತ, ದಕ್ಷ ಕೆಲಸಗಾರರನ್ನು ಸಜ್ಜುಗೊಳಿಸಿ ದನು. ಇಷ್ಟರಲ್ಲಿ ಸಲೋನಿಕಾದಿಂದ ಕೆಲವು ಕಾರ್ಯಕರ್ತರು ಅವನನ್ನು ಸಲೋನಾಕ್ಕೆ ಅಗತ್ಯವಾಗಿ ಬರುವಂತೆ ಹೇಳಿಕೊಂಡರು. ಸಲೋನಾಕ್ಕೆ ಹೋಗುವುದು ಅಗತ್ಯವೆ? ಹಾಗಾದರೆ ಹೊರಟನು ಕೆಮಾಲನು. ಬೇರೆ

ಯಾವ ವಿಚಾರವೆ ಆವನಿಗಿಲ್ಲ, ರಜೆ ಇಲ್ಲ, ಅಪ್ಪಣೆ ಇಲ್ಲ; ಹೆಸರು-ವೇಷ ಗಳನ್ನು ಬದಲಾಯಿಸಿ ಸಲೋನಾಕ್ಕೆ ಬಂದನು. ಸುಲ್ತಾನನ ಹೇರರು ತನ್ನನ್ನು ಗುರುತಿಸಬಾರದೆಂದು ಮರೆಯಲ್ಲಿಂದಲೆ ಕೆಲಸ ಮಾಡುತ್ತಿದ್ದನು. ಇಷ್ಟಿದ್ದರೂ ಇವನನ್ನು ಗುಪ್ತ ಪೋಲೀಸರು ಗುರುತಿಸಿದರು; ಆವನನ್ನು ಬಂಧಿಸಬೇಕೆಂದು ಹುಕುಂ ಹೊರಟಿತು. ಆದರೆ ಪೋಲೀಸ ಅಧಿಕಾರಿ ಯಾದ ಜಮಿಲ್ ಎಂಬುವನು ಮುಂಚಿತವಾಗಿಯೆ ಈ ಸುದ್ದಿಯನ್ನು ಕೆಮಾಲನಿಗೆ ತಿಳುಹಿಸಿದ್ದರಿಂದ ಅವನಿಗೆ ಪಾರಾಗಲು ಶಕ್ಯವಾಯಿತು. ಇಷ್ಟರಲ್ಲಿ ದಮಸ್ಕಸದಲ್ಲಿದ್ದ ಕೆಮಾಲನ ಮೇಲಧಿಕಾರಿಯು ಕೆಮಾಲನು ದಮಸ್ಕಸವನ್ನು ಬಿಟ್ಟೇ ಇಲ್ಲ ಎಂದು ಬರೆದು ತಿಳುಹಿಸಿದನು! ಸರಕಾರ ದವರು ಗುಪ್ತಪೋಲೀಸರು ಯಾರನ್ನೋ ನೋಡಿ ಕೆಮಾಲನೆಂದು ತಿಳಿದು ಇಷ್ಟೊಂದು ಖಟಾಟೋಪವನ್ನೆಬ್ಬಿಸಿದರೆಂದು ಪೋಲೀಸರನ್ನೆ ಸಿಟ್ಟು ಮಾಡಿದರು! ಕೆಮಾಲನು ಪಾರಾಗಿ ದಮಸ್ಕಸಕ್ಕೆ ಬಂದನೇನೊ ನಿಜ. ಆದರೆ ಸಲೋನಿಕಾದಲ್ಲಿ ಕ್ರಾಂತಿಯ ಚಳವಳಿಯು ಉಗ್ರಸ್ವರೂಪವನ್ನು ತಾಳಿವೆ ಎಂದು ಕಂಡು ಆವನಿಗೆ ಸಲೋನಿಕಾಕ್ಕೆ ಹೋಗುವ ಆತುರ. ಕೊನೆಗೆ ಹಾಗೂ ಹೀಗೂ ಹೇಳಿಸಿ ಕೇಳಿಸಿ ಸಲೋನಿಕಾಕ್ಕೆ ತನ್ನನ್ನು ನಿಯಮಿಸುವಂತೆ ಸಾಧಿಸಿಕೊಂಡನು.

ಸಲೋನಿಕಾದಲ್ಲಿ ಕ್ರಾಂತಿಯ ಚಳವಳಿಯು ಉಗ್ರಸ್ವರೂಪವನ್ನು ತಾಳಿದ್ದು ನಿಜವೆಂದು ಕೆಮಾಲನು ಮನಗಂಡನು. 'ಐಕ್ಯ ಮತ್ತು ಪ್ರಗತಿ' ಎಂಬ ಒಂದು ಗುಪ್ತಸಂಘವು ಚಟುವಟಿಕೆಗಳನ್ನು ಜೋರಾಗಿ ನಡೆಸಿದ್ದಿತು. ಈ ಸಂಘದಲ್ಲಿ ಮೊದಮೊದಲು ಕೆಮಾಲನಿಗೆ ಪ್ರವೇಶ ದೊರಕಲಿಲ್ಲ; ಕೊನೆಗೆ ಪ್ರವೇಶ ದೊರಕಿದರೂ ಸಹಾನುಭೂತಿ ದೊರಕು ವುದು ಶಕ್ಯವಾಗಲಿಲ್ಲ. ಇವನ ಹೆಮ್ಮೆ ಮತ್ತು ಯೋಗ್ಯತೆ ಇವೆರಡ ಕ್ಕಾಗಿಯೂ ಸಂಘದ ಮುಂದಾಳುಗಳು ಇವನಿಗಾಗಿ ಅಸೂಯೆ ತಾಳಿ ದರು. ಕೆಮಾಲನಿಗಾದರೂ ಈ ಕ್ರಾಂತಿಕಾರರ ವೃತ್ತಿಯನ್ನು ಕಂಡು ಅಸಮಾಧಾನವೆ ಹೆಚ್ಚಿತು. ತನ್ನ ಧ್ಯೇಯವೇನು, ಅದನ್ನು ಸಾಧಿಸು ವುದು ಯಾವ ಮಾರ್ಗದಿಂದ ಎಂಬುದನ್ನು ಕೆಮಾಲನು ಎಂದೋ

ನಿಶ್ಚಯಿಸಿಕೊಂಡಿದ್ದನು. ಆದರೆ ಈ ಸಂಘದ ಮುಂದಾಳುಗಳಿಗೆ ಕೂಡ ಅಂತಹ ನಿರ್ಣಯಾತ್ಮಕ ಬುದ್ಧಿ ಇಲ್ಲವೆ ದೃಷ್ಟಿ ಇಲ್ಲದುದನ್ನು ನೋಡಿ ಅವರಿಗಾಗಿ ಇವನಲ್ಲಿ ತಿರಸ್ಕಾರವೆ ತೋರಿತು. ತನ್ನ ತಿರಸ್ಕಾರವನ್ನು ಕೆಮಾಲನು ಆಡಿಯೂ ತೋರಿಸುತ್ತಿದ್ದನು; ಇದಕ್ಕೆ ಪ್ರಾಯಶ್ಚಿತ್ತವೆಂದು ಸಂಘದ ಮುಂದಾಳುಗಳು ಇವನಿಗೆ ಯಾವ ಅಧಿಕಾರಸ್ಥಾನವನ್ನೂ ಕೊಡಲಿಲ್ಲ. ಕೆಮಾಲನಾದರೂ ಸಂಘವನ್ನು ಬಿಟ್ಟುಕೊಡಲಿಲ್ಲ, ತುಟಿಯನ್ನು ಬಿಚ್ಚಿ ಮಾತನಾಡಲಿಲ್ಲ. ಹೀಗಿರುವಾಗ ಒಂದು ದಿನ ಈ ಕ್ರಾಂತಿಕಾರಕ ತಂಡವು ಕೆಮಾಲನ ಮನೆಯಲ್ಲಿಯೆ ಕೂಡಿತು. ಮನೆಯ ಕೆಲಸಗಿತ್ತಿಗೆ ಇವರ ಮಾತು–ನಡತೆಗಳಿಂದ ಏನೊ ಸಂಶಯ ಬಂದಿತು, ಅವಳು ಝುಬೇದಾನಿಗೆ ತಿಳುಹಿಸಿದಳು. ಮತ್ತೊಂದು ಸಲ ಗೆಳೆಯರೆಲ್ಲರೂ ಕೆಮಾಲನ ಮನೆಯಲ್ಲಿಯೆ ಕೂಡಿದ್ದರು. ಎಲ್ಲರೂ ಹೋದ ಮೇಲೆ ಝುಬೇದಾ ಹೆದರಿಕೆಯಿಂದ ಮಗನಿಗೆ ನಡೆದ ಸಂಗತಿಯನ್ನು ಕೇಳಿದಳು; ಅವಳ ಮೈ ನಡುಗಿತು; ಬಾದಶಹನ ವಿರುದ್ಧ ಬಂಡು ಎಂದರೆ ಅವಳಿಗೆ ಪಾಪವೂ ಎನಿಸಿತು, ಮಗನ ಜೀವಕ್ಕಾಗಿ ಹೆದರಿಕೆಯೂ ಎನಿಸಿತು; ಕೊನೆಗೆ ಕೆಮಾಲನು ಬೇಜಾರದಿಂದ ತಾಯಿಗೆ ಹೇಳಿದನು: 'ಇಷ್ಟು ಜನರು ನನ್ನನ್ನು ಕೂಡಿದ್ದಾರೆ, ನನ್ನಲ್ಲಿ ವಿಶ್ವಾಸವನ್ನಿಟ್ಟಿದ್ದಾರೆ, ಅವರಿಗೆ ನಾನು ವಚನವನ್ನೂ ಕೊಟ್ಟಿದ್ದೇನೆ. ಈಗ ಕೊಟ್ಟ ವಚನವನ್ನು ಮುರಿಯಬೇಕೆ?' ವೃದ್ಧಮಾತೆಗೆ ದಿಗಿಲು, ಯಾಕೆಂದರೆ ಕೊಟ್ಟ ವಚನವನ್ನು ಮುರಿಯುವುದೂ ನೀಚತನದ ಪಾಪ. ಕೊನೆಗೆ ಅವಳೂ ಧೈರ್ಯದಿಂದ ಹೇಳಿದಳು; 'ನಿನ್ನ ಕೆಲಸವಾಗಲಿ ಮಾತುಗಳಾಗಲಿ ನನಗೆ ಅರ್ಥವಾಗುವುದಿಲ್ಲ. ನಾನು ನಿನ್ನಂತೆ ಸುಶಿಕ್ಷಿತಳಲ್ಲ. ಆದರೂ ಕೊಟ್ಟ ವಚನವನ್ನೂ ಹಿಡಿದ ಕೆಲಸವನ್ನೂ ಕಡೆಗಾಣಿಸಲೇಬೇಕು ಎಂದು ಮಾತ್ರ ನನಗೆ ತಿಳಿಯುತ್ತದೆ. ಆದುದರಿಂದ ಶಕ್ಯವಿದ್ದಷ್ಟು ಸಾಹಸ ಮಾಡು, ಯಶಸ್ವಿಯಾಗು'!

ಸಾಹಸವನ್ನು ಮಾಡುವ ಆವಶ್ಯಕತೆಯೆ ಬೀಳದಿದ್ದರೂ, ಯಶಸ್ಸು ಮಾತ್ರ ಶೀಘ್ರದಲ್ಲಿಯೆ ದೊರಕಿತು. ೧೯೦೮ರ ಜುಲೈ ತಿಂಗಳಿನಲ್ಲಿ ದೇಶದ

ತುಂಬ ಬಂಡು ಎದ್ದಿತು. ಸಲೋನಿಕಾದ ಸೈನ್ಯದಳವು ಕೆಮಾಲನ ಕೈಯ್ಯಲ್ಲಿದ್ದುದರಿಂದ ಅದರ ಸಹಾಯದಿಂದ ಎಲ್ಲ ವಿರೋಧವನ್ನು ಹೊಡೆದೋಡಿಸಿ 'ಐಕ್ಯ ಮತ್ತು ಪ್ರಗತಿ' ಸಂಘವು ಬಂಡನ್ನು ಕಡೆಗಾಣಿಸಿತು, ಸುಲ್ತಾನನು ಪದಭ್ರಷ್ಟನಾದನು, ರಾಜ್ಯದ ಅಧಿಕಾರ ಸೂತ್ರವೆಲ್ಲ 'ಐಕ್ಯ ಮತ್ತು ಪ್ರಗತಿ' ಸಂಘದ ಮುಂದಾಳುಗಳ ಕೈ ಸೇರಿತು.

ಬಂಡು ಒಂದು ಸಾಧನ, ಸಾಧ್ಯವಲ್ಲ; ಅದೊಂದು ದಾರಿ, ಅದೇ ಧ್ಯೇಯವಲ್ಲ ಎಂಬುದು ಬಂಡನ್ನು ಯಶಸ್ವಿಯಾಗಿ ನಡೆಸಿದ ಎಷ್ಟೋ ಮುಂದಾಳುಗಳು ಮರೆಯುವರೆಂಬುದಕ್ಕೆ ಇತಿಹಾಸದಲ್ಲಿ ಅನೇಕ ಸಾಕ್ಷಿಗಳಿವೆ. ಈ ಸಂದರ್ಭದಲ್ಲಿಯಾದರೂ ಇದೇ ಮಾತಿನ ಸತ್ಯತೆ ಕಂಡು ಬಂದಿತು. ಅಧಿಕಾರವನ್ನು ತಮ್ಮ ಕೈವಶ ಮಾಡಿಕೊಳ್ಳುವುದಕ್ಕೆ ಬಂಡನ್ನೆಬ್ಬಿಸಿದ್ದಿತೊ, ಇಲ್ಲವೆ ದೇಶಕ್ಕೆ ಸುಖ-ಶಾಂತಿಗಳನ್ನು ತಂದುಕೊಡುವುದಕ್ಕೊ? ಸಂಘದ ಮುಂದಾಳುಗಳಾದ ಎನುವರ, ಜೆಮಾಲ ಮುಂತಾದವರು ಅಧಿಕಾರವು ತಮ್ಮ ಕೈಸೇರಿದ ಮಾತ್ರಕ್ಕೆ ತೃಪ್ತರಾಗಿಬಿಟ್ಟರು. ಜನತೆಯ ಮುಂದೆ ವೈಭವದ ಮೆರವಣಿಗೆಯಲ್ಲಿ ಸುಳಿದಾಡಿದರು, ಜನತೆಗೆ ಅಲ್ಲದ ಸಲ್ಲದ ಆಶೆ ಹುಟ್ಟುವಂತೆ ಮಾತನಾಡಿದರು, ಕೊನೆಗೆ ದೊಡ್ಡಸ್ತಿಕೆಗಾಗಿ ತಂತಮ್ಮೊಳಗೆ ಕಲಹವನ್ನು ಪ್ರಾರಂಭಿಸಿದರು. ತನ್ನ ಸೈನ್ಯದಳದ ಸಹಾಯವಿದ್ದಿಲ್ಲವಾದರೆ ಈ ಮುಂದಾಳುಗಳು 'ಕಾಲಾಳು'ಗಳಾಗುತ್ತಿದ್ದರೆಂಬುದನ್ನು ಬಲ್ಲ ಕೆಮಾಲನಿಗೆ ಇದನ್ನು ಕಂಡು ನಿರಾಶೆಯಾಯಿತು, ಅಸಹ್ಯವೆನಿಸಿತು. ಕೊನೆಗೆ ತಡೆಯದೆ ಒಂದು ದಿವಸ ಜೆಮಾಲನಿಗೆ ಉಪದೇಶದ ಉಪನ್ಯಾಸವನ್ನೆ ಕೊಟ್ಟನು. 'ಜನತೆಯ ಮೆಚ್ಚುಗೆಯನ್ನು ಪಡೆಯುವ ಹಂಬಲವು ದೊಡ್ಡಸ್ತಿಕೆಯ ಲಕ್ಷಣವಲ್ಲ, ಹುಚ್ಚುತನದ ಲಕ್ಷಣ. ಜನರು ಎಂತಹದಕ್ಕೆ ಮೆಚ್ಚುವರೆಂಬುದನ್ನು ಖಂಡಿತವಾಗಿ ಹೇಳಲು ಬರುವಂತಿಲ್ಲ. ದೇಶದ ಹಿತವನ್ನು ಲಕ್ಷ್ಯದಲ್ಲಿಟ್ಟು ನೇರವಾಗಿ ಧ್ಯೇಯಕ್ಕೆ ಸಾಗುವುದೆ ದೊಡ್ಡಸ್ತಿಕೆಯ ಲಕ್ಷಣ. ಧ್ಯೇಯವನ್ನು ಸಾಧಿಸುವಾಗ ಜನತೆಯೆ ಅಡ್ಡಬಂದರೂ ಅದನ್ನು ಬದಿಗೊತ್ತ

ಬೇಕು. ಇಂತಹ ಧೋರಣವಿದ್ದರೆ ಮಾತ್ರ ನಿಮಗೆ ಯಶಸ್ಸು ದೊರಕುವುದು, ಜೋಕೆ!' ಆದರೆ ಕೆಮಾಲನ ಮಾತನ್ನು ಯಾರೂ ಗಮನಿಸುತ್ತಿರಲಿಲ್ಲ. ಎಲ್ಲರೂ ಅಧಿಕಾರಲಾಲಸೆಯಿಂದ ತಂತಮ್ಮೊಳಗೆ ಹೆಚ್ಚಾಗಿಯೆ ಕಡಿದಾಡತೊಡಗಿದರು. ದೇಶದ ಹಿತವೂ ರಾಜಕೀಯ ಸುಧಾರಣೆಯೂ ಬರಿಯ ಬಾಯ್ಮಾತುಗಳಾದುವು. ತನ್ನ ಘನವಂತಿಕೆಯೆ ಪ್ರತಿಯೊಬ್ಬ ಮುಂದಾಳುವಿನ ಧ್ಯೇಯವಾಯಿತು; ಆಡಳಿತದ ಕಟ್ಟು ಸಡಿಲಾಯಿತು.

ಈ ಪರಿಸ್ಥಿತಿಯಲ್ಲಿ ಸಾಮ್ರಾಜ್ಯದ ಆಡಳಿತೆಗೊಳಗಾದ ಬೇರೆ ಬೇರೆ ಜನಾಂಗಗಳು ಇದೇ ತಕ್ಕ ಸಮಯವೆಂದು ಬಂಡನ್ನೆಬ್ಬಿಸಿದುವು. ಈ ಬಂಡುಗಳಿಗೆ ತಕ್ಕ ಮತ್ತು ತೀವ್ರ ಯಶಸ್ಸು ದೊರಕಿತು. ಅವುಗಳನ್ನೆದುರಿಸುವ ಶಕ್ತಿ ಯಾರಿಗಿದೆ? ಆಡಳಿತದ ಮುಂದಾಳುಗಳೆಲ್ಲ ತಂತಮ್ಮ ದೊಡ್ಡಸ್ತಿಕೆಯ ದಾಸರು! ಒಂದು ಕಡೆ ಮುಸ್ತಾಫಾ ಕೆಮಾಲ, ಇನ್ನೊಂದು ಕಡೆ ಎನುವರ ಇವರಿಬ್ಬರು ಶಕ್ಯವಿದ್ದಷ್ಟು ಸಾಹಸದಿಂದ ಹೋರಾಡಿದರು. ರೂಮಾನಿಯಾ ಮತ್ತು ಬಲ್ಗೇರಿಯಾ ಮುಂತಾದ ಅಂಗಜನಾಂಗಗಳು ತುರ್ಕಸ್ತಾನವನ್ನು ನುಗ್ಗಿ ಕೊಲೆ-ಸುಲಿಗೆ-ಕೊಳ್ಳೆಗಳಿಂದ ದೇಶವನ್ನು ಕಾಡಾಗಿ ಕರಗಿಸತೊಡಗಿದರು. ಈಗಲಾದರೂ ಎನುವರನು ಕೆಮಾಲನೊಡನೆ ಸಹಕರಿಸದೆ ಅವನಿಗಿಂತ ತಾನು ಹೆಚ್ಚಿನವ ಎಂದು ತೋರಿಸುವ ಅಸೂಯಾಬುದ್ಧಿಯಿಂದಲೇ ವರ್ತಿಸಿದನು. ಕೊನೆಗೆ ಯಶಸ್ಸು ದೊರಕಿದಾಗ ತನ್ನಿಂದಲೆ ದೊರಕಿತೆಂದು ಸಾಧಿಸಿ ತಾನು ರಾಷ್ಟ್ರದ ಯುದ್ಧಮಂತ್ರಿಯಾದನು. ಮರುಗಳಿಗೆಗೆ ಕೆಮಾಲನನ್ನು ಸೈನ್ಯದಿಂದ ಬಿಡಿಸಿ ಸೋಫಿಯಾಕ್ಕೆ ರಾಯಭಾರಿಯ ಪರಿವಾರದಲ್ಲಿ ಅಧಿಕಾರಿಯಾಗಿ ನಿಯಮಿಸಿದನು. ಇಲ್ಲವಾದರೆ ಯುದ್ಧಕೌಶಲ್ಯದಲ್ಲಿ ಕೆಮಾಲನು ತನಗಿಂತಲೂ ಮೇಲಿನವನೆಂದು ತಿಳಿದೀತೆಂಬ ಅಸೂಯೆ, ತಿಳಿದ ಮೇಲೆ ತುರ್ಕಸ್ತಾನಕ್ಕೆ ಯಶಸ್ಸೂ ಸಂರಕ್ಷಣೆಯೂ ಕೆಮಾಲನಿಂದಲೇ ದೊರಕಿದುವು, ತನ್ನಿಂದಲ್ಲ ಎಂಬುದೂ ತಿಳಿದೀತೆಂಬ ಹೆದರಿಕೆ! ಕೆಮಾಲನನ್ನು ದೂರದಲ್ಲಿರಿಸಿದ ಮೇಲೆ ಎನುವರನು ಮದೋನ್ಮತ್ತನಂತೆಯೆ ಆಚರಿಸತೊಡಗಿದನು. ತಾನು ನಿಜವಾಗಿಯೆ ಪ್ರತಿಭಾಶಾಲಿಯಾದ

ಸೇನಾನಾಯಕನೆಂದು ಭಾವಿಸಿದನು. ಆ ಭಾವನೆಯ ಮೋಹದಲ್ಲಿ ಉದುರಿ ಬೀಳುತ್ತಿರುವ ಸಾಮ್ರಾಜ್ಯವೃಕ್ಷವನ್ನು ತಾನೊಬ್ಬನೆ ಮತ್ತೆ ಚಿಗುರಿಸಬೇಕೆಂದು ಆಕಾಂಕ್ಷಿಸಿ ಮಹಮ್ಮದೀಯ ಧರ್ಮ-ಸಾಮ್ರಾಜ್ಯದ ಪುನರುತ್ಥಾಪನೆಯನ್ನೆ ಕೈಕೊಂಡನು! ಜಗತ್ತಿನ ಎಲ್ಲ ಮಹಮ್ಮದೀಯ ರಾಷ್ಟ್ರಗಳನ್ನು ಗೆದೆಯಬೇಕೆಂದು ಮೊದಲು ಮಗ್ಗುಲಲ್ಲಿದ್ದ ಇಜಿಪ್ತದ ಮೇಲೆ ದಾಳಿ ಎತ್ತಿದನು. ತನ್ನಂತಹ ಸೇನಾನಾಯಕನಿಗೆ ದೊಡ್ಡ ಸೈನ್ಯವೇಕೆ-ಎಂಬ ಸೊಕ್ಕು ಬೇರೆ! ಕೊನೆಗೆ ಇವನ ಚಿಕ್ಕ ಸೈನ್ಯವು ಚಿಕ್ಕಿಯಂತೆ ಉದುರಿಬಿದ್ದಿತು ಕ್ಷಣಾರ್ಧದಲ್ಲಿ! ಹೀಗೆ ಮಾಡಬಾರದಾಗಿತ್ತೆಂದು ಹೇಳಿದ ಕೆಮಾಲನನ್ನು ಇನ್ನಿಷ್ಟು ದೂರಿರಿಸಬೇಕೆಂದು ಕಾಕೇಸಸಕ್ಕೆ ಸೈನ್ಯಾಧಿಕಾರಿಯನ್ನು ಮಾಡಿ ಕಳುಹಿಸಿಕೊಟ್ಟನು. ಆದರೆ ಈಗ ಎನುವರನ ಸಮೀಪದ ಮಿತ್ರರಲ್ಲಿಯೇ ಅಸಂತೋಷವು ಬೆಳೆಯಿತು. ಅವರಲ್ಲಿ ಕೆಲವರು ಇವನ ವಿರುದ್ಧ ಒಳಸಂಚನ್ನು ನಡೆಸಿದರು; ತಮ್ಮ ಒಳಸಂಚಿಗೆ ನಾಯಕನಾಗಲು ಕೆಮಾಲನೆ ಯೋಗ್ಯನೆಂದು ನಿರ್ಣಯಿಸಿದರು. ಇದನ್ನು ತಿಳಿದುಕೊಂಡಾಕ್ಷಣ ಎನುವರನು ಆ ದ್ರೋಹಿಗಳನ್ನೆಲ್ಲ ಬಂಧಿಸಿದನು. ಒಬ್ಬನು ಮಾತ್ರ ತಪ್ಪಿಸಿಕೊಂಡು ಕೆಮಾಲನಿಗೆ ಕಾಕೇಸಸದಲ್ಲಿ ಬಂದು ಶರಣಾಗತನಾದನು. ಅವನನ್ನು ಕೂಡಲೆ ಬಂಧಿಸಿ ಕಾನಸ್ಟಾಂಟಿನೋಪಲ್ಲಿಗೆ ಕಳುಹಿಸಬೇಕೆಂದು ಎನುವರನು ಕೆಮಾಲನಿಗೆ ಆಜ್ಞೆ ಹೊರಡಿಸಿದನು. 'ಶರಣಾಗತನನ್ನು ಎಂದಿಗೂ ಒಪ್ಪಿಸುವುದಿಲ್ಲ' ಎಂದು ಕೆಮಾಲನು ನಿರ್ದಾಕ್ಷಿಣ್ಯವಾಗಿ ತಿಳುಹಿಸಿದನು. ಎನುವರನಿಗೆ ಎಷ್ಟೊಂದು ಕೋಪ ಬಂದರೂ ಅದನ್ನು ಹಲ್ಲುಗಳಿಂದ ಸಣ್ಣಾಗಿ ಕಡಿದು ತಿಂದು ನುಂಗಿ ಪಚನ ಮಾಡಿಕೊಳ್ಳಬೇಕಾಯಿತಲ್ಲದೆ ಮತ್ತೇನನ್ನೂ ಮಾಡುವ ಧೈರ್ಯವಾಗಲಿಲ್ಲ. 'ಸಮಯ ಬಂದಾಗ ಸಾಧಿಸೋಣ' ಎಂದು ಎನುವರನು ಹಲ್ಲು ಕಚ್ಚಿದನು; 'ಸಾಧಿಸಿದರೆ ಸಮಯವು ನನ್ನದು' ಎಂಬ ವಿಚಾರದಿಂದ ಕೆಮಾಲನು ಸುಮ್ಮನಿದ್ದನು.

---

# ೫ ಉದಯೋನ್ಮುಖ ಸೂರ್ಯ

ಆ ಸಮಯವೇನೊ ಶೀಘ್ರದಲ್ಲಿಯೆ ಬಂದಿತು; ಅದು ಬರುವಷ್ಟರಲ್ಲಿ ಮಾತ್ರ ಎನುವರನ ಮತ್ತು ಕೆಮಾಲನ ರಾಜನೀತಿಗಳಲ್ಲಿದ್ದ ವಿರೋಧವು ಇಳಿಹೊತ್ತಿನ ನೆರಳಿನಂತೆ ಬೆಳೆದಿದ್ದಿತು. ಮೊದಲಿನ ಸುಲ್ತಾನನಾದ ಅಬ್ದುಲ್ ಹಮೀದನನ್ನು ಪದಭ್ರಷ್ಟ ಮಾಡಿದ ದಿವಸದಿಂದ ಈ ವಿರೋಧಕ್ಕೆ ಪ್ರಕಟವಾಗಿ ಮೂರ್ತಸ್ವರೂಪವು ಬಂದಿತ್ತು; ಎನುವರನು ಹೊಸದಾಗಿ ನೆಲೆಸಿದ ಸುಲ್ತಾನನನ್ನು ತನ್ನ ಕೈಗೊಂಬೆಯಾಗಿ ಮಾಡಿಕೊಂಡಿದ್ದನು. ಎನುವರನು ಮತ್ತು ಅವನ ಸಂಗಡಿಗರು ಈಗ ದೊಡ್ಡ ದೊಡ್ಡ ಮತ್ತು ಆಯಕಟ್ಟಿನ ಅಧಿಕಾರ ಸ್ಥಳಗಳನ್ನು ಮುದುಕನ ಮೂರನೆಯ ಹೆಂಡತಿಯು ಪ್ರೇಮದಿಂದ ತಬ್ಬಿಕೊಂಡಿದ್ದರು. ರಾಜ್ಯಕ್ರಾಂತಿಯನ್ನು ಮಾಡಿದ್ದು ಯಾಕೆ? ಸುಲ್ತಾನನನ್ನು ಅಧಿಕಾರದಿಂದ ತಳ್ಳುವುದಕ್ಕೆ. ಹಾಗಾದ ಮೇಲೆ ಅಧಿಕಾರಸೂತ್ರವನ್ನು ಯಾರ ಕೈಯಲ್ಲಿ ಕೊಡಬೇಕೆಂಬುದನ್ನು ಉದಾರಮತವಾದಿಗಳಾದ ಕ್ರಾಂತಿಕಾರರು ಜನತೆಯನ್ನು ಕೇಳಬೇಕಲ್ಲದೆ ಕ್ರಾಂತಿಯ ಕರ್ತೃಗಳು ತಾವೆಂಬ ನೆವದಿಂದ, ಕ್ರಾಂತಿಯನ್ನು ಮಾಡಿದ್ದರ ಕೂಲಿಹಣ ಎಂಬಂತೆ ಅಧಿಕಾರವನ್ನು ತಮ್ಮ ಕೈಯಲ್ಲಿ ಸೇರಿಸಕೂಡದು—ಎಂದು ಕೆಮಾಲನ ಅಭಿಪ್ರಾಯವಿದ್ದಿತು. ಇದೇನು ಅಧಿಕಾರದ ಕ್ರಾಂತಿಯೆ, ಆಡಳಿತದ ಕ್ರಾಂತಿಯೆ? ಪ್ರತಿಯೊಂದು ಕ್ರಾಂತಿಯ ಕಾಲಕ್ಕೆ ಇತಿಹಾಸದಲ್ಲಿ ಸಾಧ್ಯ—ಸಾಧನಗಳ ಇಂತಹ ಸಮ್ಮೋಹವು ಕಂಡುಬರುವುದು. ಅಧಿಕಾರ ಕ್ರಾಂತಿಯು ( Transfer of power ) ಸಾಧನವು; ಆಡಳಿತದ ಕ್ರಾಂತಿಯು ಸಾಧ್ಯವು. ಸದ್ಯಕ್ಕೆ ಕೆಮಾಲನು ತನ್ನ ರಾಜನೀತಿಯನ್ನು ಈ ಅಧಿಕಾರಲೋಲುಪರ ಮದ ಇಳಿಯುವ ವರೆಗೆ ಬದಿಗಿರಿಸಬೇಕಾಯಿತು. ಎನುವರನನ್ನು ಎದುರಿಸಿ ನಿಲ್ಲಲು ಎಷ್ಟೋ ಜನರು ಕೆಮಾಲನನ್ನು ಕೆಣಕಿದರು. ಆದರೆ

ಆವನು ಯುಕ್ತಿ–ಪ್ರಯುಕ್ತಿ ( Strategy )ಗಳನ್ನರಿತ ಸಮರವಿಶಾರದ ನಿದ್ದುದರಿಂದ ತನ್ನ ರಾಜನೀತಿಯು ಜನರಿಗೆ ತಿಳಿಯುವ ವರೆಗಾಗಲಿ ಎನುವರನ ರಾಜನೀತಿಯ ವೈಫಲ್ಯವು ಹೊರಬೀಳುವ ವರೆಗಾಗಲಿ ಎಂದರೆ ತನ್ನ ಪಕ್ಷಕ್ಕೆ ಶಕ್ತಿ ಬರುವ ವರೆಗೆ ತಡೆದು ಹಿಡಿಯಬೇಕೆಂದೇ ನಿರ್ಧರಿಸಿದನು.

ಕೊನೆಗೆ ಕೆಮಾಲನಿಗೆ ಶಕ್ತಿ ಬಂದಿತು; ಲಾವಾರಸದಂತೆ ಸುಡುತ್ತ, ಸುರಿಯುತ್ತ, ವೇಗವಾಗಿ ಭೋರ್ಗರೆಯುತ್ತ ಬಂದಿತು; ಉನ್ಮತ್ತ ರಾಜನೀತಿಯ ಮಹಾ ಪರ್ವತವು ಜ್ವಾಲಾಮುಖಿಯ ಸ್ಫೋಟದಿಂದ ಇಬ್ಬಗೆಯಾಗಲು ಬಂದಿತು. ಮಹಾಯುದ್ಧವೆ ಆ ಸ್ಫೋಟ. ಜಗತ್ತಿನಲ್ಲಿ ಮಹಮ್ಮದೀಯ ಸಾಮ್ರಾಜ್ಯ ಸ್ಥಾಪಿಸಬೇಕೆಂಬ ಎನುವರನ ಅಧಿಕಾರದಲ್ಲಿದ್ದ ತುರ್ಕಸ್ಥಾನವು ಜಗತ್ತಿನಲ್ಲಿ ಜಟ್ಟಿಗಳ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆನ್ನುವ ಕೈಸರನ ಜರ್ಮನಿಯ ಬೆನ್ನುಕಟ್ಟಿಕೊಂಡಿತು. ಜರ್ಮನಿಗೆ ಪ್ರಬಲ ಶತ್ರುವಾದ ಇಂಗ್ಲಂಡಿಗೆ ಈ ಮಾತಿನ ಮಹತ್ತ್ವವು ಬಹಳವಾಗಿದ್ದಿತು. ಯುರೋಪದಲ್ಲಿ ಫ್ರಾನ್ಸ ಜರ್ಮನಿಗಳ ಹಣೆಬರಹ ವೇನೆ ಆಗಲಿ, ತುರ್ಕಸ್ಥಾನದ ಜಯಾಪಜಯಗಳ ಮೇಲೆ ಇಂಗ್ಲಂಡಿನ ಸಾಮ್ರಾಜ್ಯ ಸುರಕ್ಷಿತತೆಯು ಹೆಚ್ಚಾಗಿ ಅವಲಂಬಿಸಿದ್ದಿತು. ಹಿಂದು ಸ್ಥಾನದ ಮಾರ್ಗದಲ್ಲಿ ತುರ್ಕಸ್ಥಾನವು ಒಂದು ಹೆಬ್ಬಾಗಿಲಿನಂತೆ. ತುರ್ಕ ಸ್ಥಾನದಲ್ಲಿ ತನ್ನ ಪ್ರಭಾವವನ್ನು ಬೆಳೆಯಿಸಿ ಹಿಂದುಸ್ಥಾನದ ಸಮುದ್ರ ಮಾರ್ಗವನ್ನು ಭದ್ರವಾಗಿ ಕಾಯ್ದುಕೊಳ್ಳಬೇಕೆಂಬ ಆಶೆಯು ನೂರಾರು ವರ್ಷಗಳಿಂದ ಕುದಿಯುತ್ತಿದರೂ ಪಕ್ವವಾಗಿರಲಿಲ್ಲ. ಇಂದು ಜರ್ಮನಿಯ ಬೆನ್ನು ಕಟ್ಟಿ ತುರ್ಕಸ್ಥಾನವು ತಾನಾಗಿಯ ಈ ಆಶೆಯನ್ನು ಸಫಲ ಗೊಳಿಸಲು ಅನುವನ್ನುಂಟು ಮಾಡಿದೆ. ಸಿಕ್ಕ ಸಮಯವನ್ನು ಕಳೆದು ಕೊಳ್ಳಬಾರದೆಂಬ ಧೂರ್ತತೆಯಿಂದ ಚಾಣಾಕ್ಷನಾದ ವಿನ್‌ಸ್ಟನ್ ಚರ್ಚಿಲ್ ಎಂಬ ಇಂಗ್ಲಿಶ ರಾಜಕಾರಣ ಪಟುವು ಯುದ್ಧವು ಪ್ರಾರಂಭ ವಾದ ಒಂದು ವರ್ಷದಲ್ಲಿಯೆ ತುರ್ಕಸ್ಥಾನದ ಮೇಲೆ ಇಂಗ್ಲಿಶ ಸೈನ್ಯ ಶಕ್ತಿಯನ್ನೂ ಹಡಗುಪಡೆಯನ್ನೂ ದಾಳಿಬಿಟ್ಟನು. ಇಂಗ್ಲಿಶರಿಗೆ

ಸಹಾಯ ಮಾಡುವುದಕ್ಕೋಸ್ಕರ ಫ್ರೆಂಚ ಹಡಗುಪಡೆಯೂ ಕೆಲದಲ್ಲಿಯೆ ಕಡಿವಾಣವನ್ನು ಕಡಿಯುವ ಕುದುರೆಯಂತೆ ನಿಂತಿತ್ತು. ಇವೆರಡೂ ಹಡಗುಪಡೆಗಳು ತುರ್ಕಸ್ತಾನದ ರಾಜಧಾನಿಯಾದ ಕಾನಸ್ಟಾಂಟಿನೋಪಲನ್ನೆ ಉಸಿರ್ಗಟ್ಟುವಂತೆ ಮುತ್ತಿ ನಿಂತಿದ್ದುವು. ತುರ್ಕಸ್ತಾನಕ್ಕೆ ಹಡಗುಪಡೆ ಇಲ್ಲ; ಜರ್ಮನಿಯ ಸಹಾಯದ ಮತ್ತು ಸೈನ್ಯಾಧಿಕಾರಿಗಳ ಒಲದ ಮೇಲೆಯೆ ತುರ್ಕಸ್ತಾನದ ಆಶಾ ಮಂದಿರವು ನಿಂತುದು. ಆದರೆ ಜರ್ಮನಿಗೆ ಮೊದಲು ಫ್ರಾನ್ಸ-ರಶಿಯಾಗಳನ್ನು ಹಣ್ಣು ಮಾಡಬೇಕೆಂಬ ಹಂಬಲದ ಹುಚ್ಚು; ಈ ಹುಚ್ಚಿನಲ್ಲಿ ತುರ್ಕಸ್ತಾನಕ್ಕೆ ಸಹಾಯವು ಅತ್ಯಂತ ಅವಶ್ಯವಿದೆ ಎಂಬ ಸಂಗತಿಯು ಕೂಡ ಜರ್ಮನಿಯ ಲಕ್ಷ್ಯದಲ್ಲಿರಲಿಲ್ಲ. ಬ್ರಿಟಿಶ್ ಮತ್ತು ಫ್ರೆಂಚ ಹಡಗುಪಡೆಗಳ ಎದುರಾಗಲು ಸಮರ್ಥವೆನಿಸುವ ತೋಫುಗಳು ಕೂಡ ತುರ್ಕಸ್ತಾನಕ್ಕೆ ಸಾಕಷ್ಟಿರಲಿಲ್ಲ. ಹೀಗಿರುವಾಗಲೂ ಎರಡೂ ಹಡಗುಪಡೆಗಳು ಹತಾಶವಾಗಿ ತಿರುಗಬೇಕಾದುದೊಂದು ಸೋಜಿಗವೇ ಸರಿ. ಹಡಗುಪಡೆಗಳು ಹತಾಶವಾದರೂ ಯುದ್ಧ ನಡೆಸಿದ ಮಂತ್ರಿಗಳು ಮಾತ್ರ ಹತಾಶರಾಗಿರಲಿಲ್ಲ. ಹಡಗುಪಡೆಯ ಹೆದರಿಕೆಯನ್ನು ಒಂದೆಡೆ ಇಟ್ಟು ಇನ್ನೊಂದೆಡೆ ಸೈನ್ಯವನ್ನು ಒಳಹೊಗಿಸಿ ತುರ್ಕಸ್ತಾನವನ್ನು ಸೋಲಿಸಬೇಕೆಂದು ಬ್ರಿಟಿಶರು ಹೊಂಚುಹಾಕಿದರು. ತುರ್ಕಸ್ತಾನದ ಸೈನ್ಯಶಕ್ತಿಯು ಕೂಡ ಸಜ್ಜಾಗಿರಲಿಲ್ಲ, ಸಮರ್ಥವಾಗಿರಲಿಲ್ಲ. ಹೀಗಿರುವಾಗ ಒಂದು ರಾತ್ರಿ ಬ್ರಿಟಿಶರ ಸೈನ್ಯದಳವು ಗ್ಯಾಲಿಪೋಲಿ ಎಂಬಲ್ಲಿ ಬಂದಿಳಿಯಿತು. ಆ ನಸುಕಿನಲ್ಲಿ ಕೆಮಾಲನು ತನ್ನ ದಳಕ್ಕೆ ಕವಾಯಿತನ್ನು ಮಾಡಿಸುತ್ತಿದ್ದನು. ಇಂಗ್ಲಿಶ ಸೈನ್ಯವು ಬಂದಿಳಿದಿದೆ ಎಂಬ ಸುದ್ದಿಯು ಮುಟ್ಟುವುದೊಂದೇ ತಡ, ಕವಾಯಿತನ್ನು ಬಿಟ್ಟು ಯುದ್ಧವನ್ನೇ ಪ್ರಾರಂಭಿಸಿದನು. ಸದ್ದಿಲ್ಲದೆ ಬಂದಿರುವೆವೆಂಬ ಸಮಾಧಾನದಲ್ಲಿದ್ದ ಬ್ರಿಟಿಶ್ ದಳಗಳು ಒಮ್ಮೆಲೆ ಚಕಿತರಾಗಿ ಕಾಲ್ದೆಗೆದರು; ಬೆನ್ನಿನ ಮೇಲೆ ಪ್ರಾರಂಭವಾಯಿತು ಗುಂಡಿನ ಸುರಿಮಳೆ! ಆಶ್ಚರ್ಯ! ಬ್ರಿಟಿಶ್ ದಳಗಳನ್ನು ಚದರಿಸಿದರೆ? ಯಾರು? ಯಾರು? ಎಲ್ಲರ

ಬಾಯಲ್ಲೂ ಅದೇ ಪ್ರಶ್ನೆ. ಮುಸ್ತಾಫಾ ಕೆಮಾಲನು ಚದರಿಸಿದನಂತೆ! ಮುಸ್ತಾಫಾ ಕೆಮಾಲಕೀ ಜಯ! ಎನುವರನ ಕಿವಿ ಗಡಚಾಗುವಂತೆ ಇಡಿಯ ತುರ್ಕಸ್ಥಾನದ ತುಂಬೆಲ್ಲ ಕೆಮಾಲನ ಜಯಘೋಷ! ಎನುವರನಿಗೆ ತಡೆಯದಂತಾಯಿತು. ಆದರೆ ಕೆಮಾಲನ ಜಯಭೇರಿಯು ಇಷ್ಟಕ್ಕೆಯೆ ಸುಮ್ಮನಾಗಿರಲಿಲ್ಲ..ಬ್ರಿಟಿಶರು ಅನೇಕ ಪ್ರಯತ್ನಗಳನ್ನು ನಡೆಸಿದರು.. ಕೊನೆಗೆ ಸುತ್ತುಮುತ್ತಲಿನ ಅನೇಕ ಕೋಟೆಗಳನ್ನು ಕೈವಶ ಮಾಡಿಕೊಂಡರು. ಇನ್ನೊಂದು ಉಳಿದಿತ್ತು. ಅದೊಂದು ವಶವಾದರೆ ಮುಂದೆ ಅವರಿಗೆ ಜಯವು ಸ್ವಲ್ಪಾಯಾಸದಿಂದಲೇ ದೊರಕುವಂತಿತ್ತು. ಆದರೆ ಅದೊಂದು ಸ್ಥಳದಲ್ಲಿ ಕೆಮಾಲನು ತನ್ನ ಶೂರ ಸೇನಾಸಾಗರದಲ್ಲಿ ವಡವಾನಲನಂತೆ ಅಡಗಿದ್ದನು. ಯೋಗ್ಯ ವೇಳೆಗೆ ಅಕಸ್ಮಾತ್ತಾಗಿ ಶತ್ರುಗಳ ಮೇಲೆ ಬಿದ್ದು ಅವರನ್ನು ಚದರಿಸಿದನು, ಚೂರು ಚೂರಾಗಿ ಮಾಡಿದನು. ಆ ಸಮಯದಲ್ಲಿ ಒಂದು ಸ್ಮರಣೀಯ ಸಂಗತಿಯು ಸಂಭವಿಸಿತು. ಒಂದು ಕಡೆ ಕೆಮಾಲನ ಸೈನಿಕರು 'ತೋಡಿ' (Trench) ಸಲ್ಲಿ ಹುದುಗಿಕೊಂಡಿದ್ದಾರೆ, ಎದುರು ಮದ್ದುಗುಂಡುಗಳ ಸಕಲಸಾಮಗ್ರಿಸಮೇತರಾಗಿ ಬ್ರಿಟಿಶ್ ಸೈನಿಕರಿದ್ದಾರೆ. ಬಹುದಿವಸ ಎರಡೂ ಪಕ್ಷದವರು ಹೊಂಚು ಹಾಕಿ ಏನೂ ಮಾಡದೆ ಕುಳಿತುಕೊಂಡರು. ಕೊನೆಗೆ ತನ್ನ ಸೈನಿಕರ ಧೈರ್ಯವು ಇನ್ನು ಹೀಗೆಯೆ ನಡೆದರೆ ಕುಗ್ಗಬಹುದೆಂದು ಕೆಮಾಲನು ತೋಡಿನಿಂದ ಹೊರಗೆ ನುಗ್ಗಿದನು. 'ನಾನು ಕೈಯೆತ್ತಿ ಹಿಡಿದೆನೆಂದರೆ ಅದು ಸಂಕೇತವೆಂದು ತಿಳಿದು ನೀವು ಒಮ್ಮೆಲೆ ಹೊರಬಿದ್ದು ನುಗ್ಗಿರಿ' ಎಂದು ತನ್ನ ಸೈನಿಕರಿಗೆ ಆಜ್ಞೆ ಕೊಟ್ಟು ಒಬ್ಬನೇ ಶತ್ರುವಿನ ಸೈನಿಕ ಸಾಲುಗಳ ಕಡೆ ನಡೆದನು; ಕೈ ಎತ್ತಿದನು; ಅಷ್ಟರಲ್ಲಿ ಸುಂಯ್‌ಗುಡುತ್ತ ಒಂದು ಗುಂಡು ಬಂದು ಅವನ ಕೈಗೆ ತಾಕಿತು. ಕೈಗಡಿಯಾರವು ಮಾತ್ರ ಚಪ್ಪಟೆಯಾಯಿತು. ಆಗಲಿ-ಇನ್ನು ಮುಂದೆ ಕೆಮಾಲನು ತನ್ನ ದೇಶದಲ್ಲಿ ಹೊಸ ಕಾಲವನ್ನೆ ನಿರ್ಮಾಣ ಮಾಡುವವನಿದ್ದು ಅವನಿಗಿನ್ನು ಗಡಿಯಾರವೇಕೆ-? ತನ್ನ ಸೈನಿಕರ ಸ್ವಭಾವವನ್ನು ಅರಿತುಕೊಳ್ಳುವ, ತನ್ನ ಜೀವದ ಹಂಗು ಇಲ್ಲದೆ ಎಲ್ಲರಿಗೂ

ಮುಂದಾಗಿ ಗಂಡಾಂತರದಲ್ಲಿ ಧುಮುಕುವ ಕೆಮಾಲನಂತಹ ನಾಯಕನ ನೇತೃತ್ವದ ಎದುರು ಬ್ರಿಟಿಶರ ಆಟ ನಡೆಯದಂತಾಯಿತು.

ತುರ್ಕಸ್ಥಾನದಲ್ಲಿ ತನ್ನ ಹಡಗುಪಡೆಗೂ ಸೈನ್ಯಕ್ಕೂ ಆದ ಅವಮಾನವನ್ನು ಇಂಗ್ಲಂಡವು ಮರೆಯುವಂತಿರಲಿಲ್ಲ. ಮುಂದೆ ಎರಡು ವರ್ಷಗಳಲ್ಲಿ ತುರ್ಕಸ್ಥಾನದ ಸೇಡುತೀರಿಸುವ ಮತ್ತು ಸೊಕ್ಕು ಮುರಿಯುವ ಸಂಧಿಯು ಇಂಗ್ಲಂಡಕ್ಕೆ ದೊರಕಿತು. ಅರೇಬಿಯಾ ದೇಶವು ತುರ್ಕಸ್ಥಾನ ಸಾಮ್ರಾಜ್ಯಕ್ಕೆ ಒಳಗಾಗಿತ್ತು. ಕೆಲವು ವರ್ಷಗಳಿಂದ ಲಾರೆನ್ಸ ಎಂಬ ಒಬ್ಬ ಬ್ರಿಟಿಶ ಕುಚೋದ್ಯಗಾರನು ಅಲ್ಲಿ ತುರ್ಕಸ್ಥಾನದ ವಿರುದ್ಧ ಬಂಡನ್ನೆಬ್ಬಿಸುವ ಸಿದ್ಧತೆಯನ್ನು ನಡೆಸಿದ್ದನು. ಕೊನೆಗೆ ೧೯೧೭ ರಲ್ಲಿ ಬಂಡು ತಲೆ ಎತ್ತಿತು; ಹಾಹಾ ಎನ್ನುವದರಲ್ಲಿ ಮಕ್ಕಾ, ಮದೀನಾ, ಬಗದಾದ ಮೊದಲಾದವುಗಳು ತುರ್ಕಸ್ಥಾನದ ಪ್ರಭುತ್ವವನ್ನು ಬೀಸಾಡಿದುವು. ಇನ್ನೂ ಯುದ್ಧದ ಸರ್ವಾಧಿಕಾರಿಯು ಎನುವರನೆ ಆಗಿದ್ದನು. ೩-೪ ವರ್ಷಗಳಿಂದ ಒಂದೇ ಸಮನೆ ನೋಡಿದಲ್ಲೆಲ್ಲ ಸೋಲುವುದಕ್ಕೆಯೆ ಕಾರಣನಾದ ಎನುವರನ ವಿಷಯವಾಗಿ ದೇಶದಲ್ಲಿ ಅಸಂತೋಷವಿದ್ದಿತು. ಅರೇಬಿಯದ ಬಂಡಾಯವಾದಂದಿನಿಂದಂತೂ ಎನುವರನು ಕಾರ್ಯಸೂತ್ರವನ್ನು ಬಿಟ್ಟುಕೊಡಬೇಕು, ಕೆಮಾಲನಿಗೆಯೆ ಆ ಅಧಿಕಾರವನ್ನು ಕೊಡಬೇಕು ಎಂಬ ಸೊಲ್ಲು ದೇಶದ ನಾಲ್ಕೂ ಕಡೆಗಳಿಂದ ಕೇಳಬರುತ್ತಿತ್ತು. ಕೆಮಾಲನು ಇದುವರೆಗೆ ಎಲ್ಲಿಯೂ ಸೋತಿರಲಿಲ್ಲ, ಆದರೆ ಇನ್ನು ಮುಂದೆ ಅವನು ಒಂದು ಕಡೆಯಾದರೂ ಸೋಲುವಂತೆ ಮಾಡಬೇಕೆಂದು ಹವಣಿಸುತ್ತಿರುವ ಎನುವರನಿಗೆ ಅರೇಬಿಯದ ಬಂಡಾಯವು ಒಳ್ಳೇ ಸಮಯವೆಂದೆನಿಸಿತು. ಆ ದೇಶದಲ್ಲಿ ಬ್ರಿಟಿಶರ ಸೇನೆಯೂ ಸಿದ್ಧತೆಯೂ ಸಾಕಷ್ಟಿದ್ದಿತು; ಅವರನ್ನು ಎದುರಿಸಲು ಕೆಮಾಲನನ್ನು ಕಳುಹಿಸಬೇಕು, ಎಂದರೆ ಕೆಮಾಲನು ಸೋಲುವುದು ಖಂಡಿತ ಎಂದು ಉಬ್ಬಿ ಎನುವರನು ಕೆಮಾಲನನ್ನು ಅಲ್ಲಿಗೆ ಕಳುಹಿಸುವಂತೆ ಅಪ್ಪಣೆ ಮಾಡಿದನು. ಅಲ್ಲಿ ಯುದ್ಧವನ್ನು ನಡೆಸುವುದೆಂದರೆ ಕೇವಲ ಸೈನಿಕರನ್ನು ಕೊಲೆಗಡಕರಿಗೆ ಒಪ್ಪಿಸಿದಂತೆಯೆ

ಎಂದು ಕೆಮಾಲನ ಅಭಿಪ್ರಾಯವಿದ್ದುದರಿಂದ ಅವನು ತನ್ನ ಹೊಸ ಅಧಿಕಾರಕ್ಕೆ ರಾಜೀನಾಮೆಯನ್ನು ಕೊಟ್ಟನು. ಎಂತಹ ಘೋರ ಅಪರಾಧ! ಯುದ್ಧದ ಸಮಯದಲ್ಲಿ ಸೈನಿಕನಾಗಲಿ ಸೈನ್ಯಾಧಿಕಾರಿಯಾಗಲಿ ತನ್ನ ಕರ್ತವ್ಯದ ಹೊಣೆಯನ್ನು ತಪ್ಪಿಸಿದನೆಂದರೆ ಅದು ದ್ರೋಹ. ಕೆಮಾಲನು ಈಗ ಅಂತಹ ದ್ರೋಹವನ್ನೆ ಮಾಡಿದ್ದಾನೆ. ಅವನಿಗೆ ಶಿಕ್ಷೆಯಾಗಬೇಕಲ್ಲವೇ? ಆದರೆ ಶಿಕ್ಷೆ ಕೊಡುವ ಧೈರ್ಯ ಯಾರಿಗೂ ಇರಲಿಲ್ಲ. ಕೊನೆಗೆ ಕೆಮಾಲನಿಗೆ ಅನಿಯತವಾದ ರಜೆಯನ್ನು ಕೊಡಲಾಯಿತು. ಕೆಮಾಲನಾದರೂ ಅಸಹ್ಯಗೊಂಡು ಕಾನಸ್ಟಾಂಟಿನೋಪಲಿನಲ್ಲಿ ಬಂದು ಇದ್ದುಕೊಂಡನು.

ಕೆಮಾಲನೆಂದರೆ ಎನುವರನಿಗೆ ಈಗಾಗಲೆ ಪಿಡುಗಿನಂತೆ ಅಸಹ್ಯನೆನಿಸುತ್ತಿದ್ದನು; ಅವನನ್ನು ಎಷ್ಟು ದೂರದಲ್ಲಿರಿಸಬಹುದೊ ಅಷ್ಟು ಎನುವರನಿಗೆ ಸಮಾಧಾನ. ೧೯೧೮ ರ ಪ್ರಾರಂಭಕ್ಕೆ ತುರ್ಕಸ್ತಾನದ ಸುಲ್ತಾನನ ಹಿರಿಯ ಮಗನು ಜರ್ಮನ ಕೈಸರನ ಕಡೆಗೆ ತಂದೆಯ ಪ್ರತಿನಿಧಿಯಾಗಿ ಆಪ್ತಾಲೋಚನೆಗೆಂದು ಹೊರಟನು. ಈ ಯುವಕನ ಹೆಸರು ವಾಹೀದೆದ್ದೀನ ಎಂದು. ಕೆಮಾಲನು ಈ ರಾಯಭಾರಿತ್ವದ ಪರಿವಾರದಲ್ಲಿ ಹೋಗಬೇಕೆಂದು ಎನುವರನು ವ್ಯವಸ್ಥೆ ಮಾಡಿದನು. ನಡೆದ ಅವ್ಯವಸ್ಥೆ ನೋಡುವುದಕ್ಕಿಂತ ಕಾಡಿಗಾದರೂ ಹೋಗುವುದು ಲೇಸು ಎನುವ ಕೆಮಾಲನಿಗೆ ಇದರಿಂದ ಎನುವರನ ತಂತ್ರ ತಿಳಿಯಿತಲ್ಲದೆ ಮತ್ತೇನೂ ಎನಿಸಲಿಲ್ಲ. ಮಹಾಯುದ್ಧವು ಪ್ರಾರಂಭವಾದಂದಿನಿಂದ ಕೆಮಾಲನ ಹೃದಯವು ಕೆಲವು ವಿಚಾರಗಳಿಂದ ಕುದಿಯುತ್ತಿದ್ದಿತು. ತನ್ನ ದೇಶವು ಜರ್ಮನಿಯ ಬೆನ್ನು ಕಟ್ಟಿತೇನೊ ನಿಜ. ಆದರೆ ಅದರಿಂದ ತನ್ನ ದೇಶಕ್ಕೆ ತಿಳಮಾತ್ರವಾದರೂ ಲಾಭವಿಲ್ಲೆಂದು ಅವನಿಗೆ ಸ್ವಲ್ಪಾವಧಿಯಲ್ಲಿಯೆ ತಿಳಿದುಬಂದಿತ್ತು. ಜರ್ಮನಿಯು ಕಾಲ ಕಳೆದಂತೆ ಆತ್ಮಸಂರಕ್ಷಣೆಯನ್ನು ಕೂಡ ಮಾಡಿಕೊಳ್ಳಲು ಅಸಮರ್ಥವಾಗುತ್ತಿದ್ದಿತೆಂಬುದೂ ಅವನಿಗೆ ಹೊಳೆಯಿತು. ಕೈಸರನ ಇಲ್ಲವೆ ಅವನ ಸೈನ್ಯಾಧಿಕಾರಿಗಳ ಆಡಂಬರದ, ಜಂಬದ ಮಾತುಗಳು ದಣಿದು ನೆಲಕ್ಕುರುಳಿದವನ

ಬಾಯಿಯ ಬುರುಗಲ್ಲದೆ ಮತ್ತೇನೂ ಅಲ್ಲ ಎಂದು ಕೆಮಾಲನಿಗೆ ತೋಚದಿರಲಿಲ್ಲ. ಎನುವರನಿಗೆ ಮಾತ್ರ ಜರ್ಮನಿಯ ಬರಿಯ ಬಾಹ್ಯಾಡಂಬರದ ಅಬ್ಬರವು ತಿಳಿಯಲಿಲ್ಲ. ಜರ್ಮನಿಯು ದಿನೇ ದಿನೇ ಕ್ಷೀಣವಾಗುತ್ತಿದ್ದುದರ ಸುಳಿವು ಅವನಿಗೆ ಹತ್ತಲಿಲ್ಲ. ಕೈಸರನು ಗೆಲ್ಲುವನೆಂದೂ ಅವನ ಜೊತೆಗೆ ತಾನೂ ತನ್ನ ಪ್ರಾಚೀನರ ಮುಹಮ್ಮದೀಯ ಸಾಮ್ರಾಜ್ಯವನ್ನು ಪುನರುತ್ಥಾಪಿಸಬಹುದೆಂದೂ ಅವನಿಗೆ ಕನಸು ಕಾಣುತ್ತಿತ್ತು. ಈ ಕನಸಿನ ಆಶೆಗಾಗಿಯೇ ಎನುವರನು ಜರ್ಮನಿಯ ಸಂದೇಶಗಳನ್ನು ಶಿರಸಾವಮಾನ್ಯವೆಂದು ಒಪ್ಪಿಕೊಳ್ಳುತ್ತಿದ್ದನು. ತುರ್ಕಿಯ ಸೈನ್ಯದ ಮುಖ್ಯಾಧಿಕಾರಿಯು ಫಾನ್‌ಸ್ಯಾಂಡರ್ಸ ಎಂಬ ಜರ್ಮನನಿದ್ದನು; ಅರೇಬಿಯಾದ ಸಂರಕ್ಷಣೆಗೆ ಕಳುಹಿಸಿದ ಸೈನ್ಯದ ಅಧಿಕಾರವು ಫಾಲ್ಕನ್ ಹೇನ ಎಂಬ ಜರ್ಮನನ ಮುಖ್ಯಾಧಿಕಾರದಲ್ಲಿದ್ದಿತು. ಜರ್ಮನಿಯ ತೋಪು-ತುಪಾಕಿ, ಮದ್ದು-ಗುಂಡು, ಹಡಗುಪಡೆಗಳ ಸಹಾಯವೆ ಎನುವರನ ಆಶೆಯ ಬಲವಾಗಿತ್ತು. ಕೆಮಾಲನು ಇದನ್ನೆಲ್ಲ ನೋಡಿ ತನ್ನ ದೇಶದ ಕಳವಳಕ್ಕಾಗಿ ಕನಲಿದನು. ತುರ್ಕಸ್ತಾನದ ಜನರಲ್ಲಿ ಕಲಿಗಳಿ ಇದ್ದಿಲ್ಲವೆ? ಸೈನ್ಯಾಧಿಕಾರವನ್ನೂ ಯುದ್ಧವ್ಯೂಹ ಸನ್ನಾಹಗಳನ್ನೂ ಚಾತುರ್ಯದಿಂದ, ದಕ್ಷತೆಯಿಂದ, ಯೋಗ್ಯತೆಯಿಂದ ವಹಿಸುವ ಕೆಲಸವನ್ನು ಮಾಡಲು ತನ್ನ ದೇಶದ ಜನರು ಅಸಮರ್ಥರೆ? ತಮ್ಮ ಸೈನಿಕರನ್ನು ಅನ್ನ-ಒಟ್ಟೆಗಳಿಲ್ಲದೆ ಗೋಳಿಡಿಸಿ ಪರಕೀಯ ಅಧಿಕಾರಿಗಳನ್ನು ಮೆಯ್ಯಿಸುವದು ದ್ರೋಹ ಇಲ್ಲವೆ ಅಜ್ಞಾನವಲ್ಲವೆ? ಆತ್ಮಸಂರಕ್ಷಣೆಗಾಗಿ ಅನ್ಯರನ್ನು ಅವಲಂಬಿಸುವುದೆಂದರೆ ಆತ್ಮವಿನಾಶದ ಮೊದಲ ಹೆಜ್ಜೆಯನ್ನು ಪರಿದಂತೆಯೆ ಅಲ್ಲವೆ? ಇಂತಹ ವಿಚಾರಗಳಿಂದ ತಲೆ ತುಂಬಿಕೊಂಡು ದಿನದಿನಕ್ಕೆ ಕೆಮಾಲನು ತೀವ್ರ ದೇಶಾಭಿಮಾನಿಯಾದನು. ತನ್ನ ದೇಶದ ಇತಿಹಾಸದಲ್ಲಿ ಪರಕೀಯರು ಅಧಿಕಾರ ಸೂತ್ರವನ್ನು ನಡೆಸುತ್ತಿರುವುದನ್ನು ನೋಡಿ ನೋಡಿ ಅಸಹ್ಯವಾಗಿ ಕೆಮಾಲನು ಪರಕೀಯರನ್ನು ಅತ್ಯಂತವಾಗಿ ದ್ವೇಷಿಸತೊಡಗಿದನೆಂದು ಹೇಳಬಹುದು. ಈ ಮನೋವೃತ್ತಿಯಲ್ಲಿ ಅವನು ಮಾಹೀದೆದ್ದೀನನ

ಪರಿವಾರದೊಡನೆ ಜರ್ಮನಿಗೆ ಹೋಗಿದ್ದನು. ಕೈಸರ, ಹಿಂಡೆನಬುರ್ಗ ಮೊದಲಾದ ಎಲ್ಲರೊಡನೆ ಬಿಚ್ಚುಮಾತುಗಳನ್ನೂ ಚುಚ್ಚುಮಾತುಗಳನ್ನೂ ಆಡಿ ಜರ್ಮನಿಯು ವಿಜಯದ ಜಂಭವು ಪೊಳ್ಳು ಇದೆ ಎಂಬುದನ್ನು ತೋರಿಸಿಕೊಟ್ಟನು, ಅಥವಾ ಬೈಲಿಗೆಳೆದನೆನಬಹುದು. ಅದಕಾಗಿಯೆ ಸೀರಿಯಾದಲ್ಲಿಯ ಬ್ರಿಟಿಶರ ಉಪಟಳವನ್ನು ಎದುರಿಸುವುದು ಮೂರ್ಖತನವೆಂದು ಅವನು ಎನುವರನಿಗೆ ಹೇಳಿದನು. ಜರ್ಮನಿಯ ಸಹಾಯ ದೊರೆತರೆ ಏನೋ ಬ್ರಿಟಿಶರ ಪಡೆಗಳನ್ನು ತಡೆಯಬಹುದಾಗಿತ್ತು. ಆದರೇನು? ತನ್ನದೇ ಅಭಿಪ್ರಾಯವು ಸಯುಕ್ತಿಕವೆಂದು ತೋರಿಸುವ ಹಟದಿಂದ, ಹೆಮ್ಮೆಯಿಂದ ಎನುವರನು ಪ್ರಯತ್ನಪಡುತ್ತಲಿದ್ದನು. ಸೈನಿಕರಿಲ್ಲ, ಸಹಾಯವಿಲ್ಲ, ಸಜ್ಜು-ಸನ್ನಾಹವಿಲ್ಲ, ಬೊಕ್ಕಸದಲ್ಲಿ ನಿಧಿ ಇಲ್ಲ! ಇಷ್ಟರಲ್ಲಿ ಬ್ರಿಟಿಶರ ಸೈನ್ಯಕ್ಕೆ ಫ್ರೆಂಚ ಸೈನ್ಯದ ಸಹಾಯವು ಬಂದಿತು. ಇವೆರಡರ ನಡುವೆ ತುರ್ಕೀಯ ಸೇನಾಬಲವು ನುಚ್ಚುನೂರಾಗುವುದು ಖಂಡಿತವೆನಿಸಿತು. ಆದರೆ ಎನುವರನು ಹಟಬಿಡಲಿಲ್ಲ; ಎಲ್ಲರನ್ನೂ ವಿರೋಧಿಸಿ ನಡೆಸಿದ ಹುಚ್ಚುತನದಲ್ಲಿ ಸೋತರೆ ಜೀವಕ್ಕೆ ಎರವಾಗಬೇಕಾಗುವುದೆಂಬುದು ಅವನಿಗೆ ತಿಳಿಯಿತು. ಅದನ್ನು ತಪ್ಪಿಸುವುದಕ್ಕಾಗಿ ರಣರಂಗದಲ್ಲಿ ಕಾದು ಮಡಿಯುವುದರಲ್ಲಿ ದೋಷವೇನು ಎಂದು ಅವನ ಹಂಚಿಕೆ. ಎನುವರನಿಗೆ ಜೀವದಾಸೆ ಇದ್ದಿಲ್ಲವಾದರೆ, ಸುಲ್ತಾನನಿಗೆ ( ಇಷ್ಟರಲ್ಲಿ ವಾಹಿದೆದ್ದೀನನೆ ಸುಲ್ತಾನನಾಗಿದ್ದನು ) ಜೀವದಾಸೆಯು ಪ್ರಬಲವಾಗಿತ್ತು. ಇತ್ತ ಎನುವರನು ಹೋರಾಡುತ್ತಿರುವಾಗ ಕಾನಸ್ಟಾಂಟಿನೋಪಲಿನಲ್ಲಿ ವಾಹೀದೆದ್ದೀನನು ತಾನೇ ಸರ್ವಾಧಿಕಾರಿತ್ವವನ್ನು ವಹಿಸಿ ಮಂತ್ರಿಗಳನ್ನು ಮನೆಗಟ್ಟಿ ಸಹಾಯಕ ರಾಷ್ಟ್ರಗಳೊಡನೆ (Allies) ಸಂಧಾನವನ್ನು ಬೇಡಿಕೊಂಡನು. ಎನುವರನು ಕಂಗೆಟ್ಟು ಕಾಲ್ದೆಗೆದನು. ಅವನ ಸಂಗಡಿಗರನ್ನು ಸುಲ್ತಾನನು ಸೆರೆಯಲ್ಲಿರಿಸಿದನು. ಸೀರಿಯಾದಲ್ಲಿದ್ದ ಕೆಮಾಲನ ಹೃದಯದಲ್ಲಿ ಆಶೆಯ ಅಂಕುರವು ಹುಟ್ಟಿತು. ಜರ್ಮನಿಯ ರಾಯಭಾರಿತ್ವದ ಪ್ರವಾಸದಲ್ಲಿ ಕೆಮಾಲನಿಗೂ ವಾಹೀದೆದ್ದೀನನಿಗೂ ಸೌಹಾರ್ದ ಬೆಳೆದಿತ್ತು. ಎನುವರನು ಸ್ಥಾನಭ್ರಷ್ಟನಾದುದರಿಂದ ಮುಖ್ಯಮಂತ್ರಿಯ ಸ್ಥಾನವನ್ನು ವಾಹೀದೆದ್ದೀನನು ತನಗೆ

ಕೊಡಬೇಕೆಂದು ಕೇಳಿಕೊಂಡನು, ಕೊಟ್ಟೇಕೊಡುವನೆಂದು ನಂಬಿ ಕೊಂಡನು. ಪಾಷೇದೆದ್ದೀನನಿಗೆ ಶಾಂತಿ-ಸಮಾಧಾನಗಳು ಬೇಕಾ ಗಿದ್ದುವು. ಕೆಮಾಲನ ಸಹವಾಸದಲ್ಲಿ ಅವು ದೊರೆಯುವುದು ಶಕ್ಯ ವಿಲ್ಲೆಂದು ಅವನು ತನ್ನ ಈ ಮೊದಲ ಅನುಭವದಿಂದ ಖಂಡಿತವಾಗಿ ಅರಿತಿದ್ದನು. ಇದಲ್ಲದೆ ಬ್ರಿಟಿಶ ಮತ್ತು ಫ್ರೆಂಚ ಮುತ್ಸದ್ದಿಗಳಿಗೆ ಕೆಮಾಲನು ಕೆಟ್ಟ ಕನಸಿನಂತಿದ್ದನು. ಕೆಮಾಲನನ್ನು ಸನ್ಮಾನಿಸಿದರೆ ಜಯ ಶಾಲಿಗಳಾದ ಶತ್ರುಗಳಿಗೆ ಅಸಂತೋಷವಾದೀತೆಂಬ ಹೆದರಿಕೆ; ಅಜೇಯ ನೆಂದು ಖ್ಯಾತಿಗೊಂಡು ಜನರಿಗೆಲ್ಲ ಪ್ರಿಯನಾದ ಕೆಮಾಲನನ್ನು ಅಸಂತೋ ಷಗೊಳಿಸಲು ಹೆದರಿಕೆ. ಆದುದರಿಂದ ಸುಲ್ತಾನನು ಸೌಮ್ಯವಾಗಿ ಕೆಮಾಲನು ಇದ್ದಲ್ಲಿಯೆ-ಸೀರಿಯಾದಲ್ಲಿ-ಸೈನ್ಯದ ಮುಖ್ಯಾಧಿಕಾರವನ್ನು ಜರ್ಮನನಾದ ಫಾನ್ ಸ್ಯಾಂಡರ್ಸನಿಂದ ತನ್ನ ಕೈಯಲ್ಲಿ ತೆಗೆದುಕೊಳ್ಳ ಬೇಕೆಂದು ತಿಳುಹಿಸಿದನು. ಹೇಳಿಕೊಳ್ಳುವಂತಹ ಸೈನ್ಯವೇನೂ ಇದ್ದಿಲ್ಲ ವೆಂಬುದೆ ಸುಲ್ತಾನನ ಸಮಾಧಾನ. ಆದರೆ ಕೆಮಾಲನಂತಹನು ತನ್ನ ವೀರವಾಣಿಯಿಂದ, ಸಮ್ಮೋಹನಿಯನ್ನೆ ಸೂಸುವಂತಹ ದೃಷ್ಟಿಪಾತದಿಂದ ಕಲ್ಲು-ಮರಗಳಲ್ಲಿ ಕೂಡ ಆವೇಶವನ್ನು ತುಂಬಿ ಸೈನ್ಯವನ್ನು ಸಜ್ಜು ಗೊಳಿಸಬಹುದೆಂಬ ಕಲ್ಪನೆಯು ಸುಲ್ತಾನನಿಗಂತೂ ಬರಲಿಲ್ಲ, ಮುತ್ಸದ್ದಿ ಗಳೆಂದೂ ಜಯಶಾಲಿಗಳೆಂದೂ ಬೆನ್ನು ಚಪ್ಪರಿಸಿಕೊಳ್ಳುವ ಸಹಾಯಕ ರಾಷ್ಟ್ರಗಳಿಗೂ ಹೊಳೆಯಲಿಲ್ಲ. ಸುಲ್ತಾನನು ಶರಣಾಗತನಾದನು, ಸಹಾಯಕರಾಷ್ಟ್ರಗಳೂ ಸೈನ್ಯದಳಗಳೂ ಕಾಡಾನೆಗಳ ಹಿಂಡಿನಂತೆ ತುರ್ಕಸ್ತಾನದಲ್ಲಿ ಕಾಲಿಟ್ಟರು, ಕೆರಳಿದ ಸಿಂಹನಂತೆ ಕೆಮಾಲನು ಮಾತ್ರ ಸುಡುವ ಬಿಸಿಲಿನ, ಕುಕ್ಕುವ ಉಸುಕಿನ ಸೀರಿಯಾದಲ್ಲಿ ಇಲ್ಲದ ಸೈನ್ಯದ ಸರ್ವಾಧಿಕಾರಿ ಎನಿಸಿಕೊಂಡು ಸಮಯ ಸಾಧಿಸುತ್ತ ಕುಳಿತು ಕೊಂಡನು.



# ೬ ಪ್ರತಿ-ಭಟನೆ

ಸುಲ್ತಾನನ ಏಕಪ್ರಭುತ್ವವು ಬಹುದಿವಸಗಳವರೆಗೆ ನಡೆಯಲಿಲ್ಲ. ಆದರೆ ಕೆಮಾಲನಿಗೆ ಮಾತ್ರ ಎಷ್ಟು ಪ್ರಯತ್ನಪಟ್ಟರೂ ಮಂತ್ರಿಯ ಅಧಿಕಾರ ದೊರಕಲಿಲ್ಲ. ಮುಂದೆ ಸ್ವಲ್ಪ ದಿವಸಗಳಲ್ಲಿ ಹೊಸ ಮಂತ್ರಿ ಮಂಡಲವು ಅಸ್ತಿತ್ವದಲ್ಲಿ ಬಂದಿತು. ಅದರಲ್ಲೂ ಕೆಮಾಲನಿಗೆ ಸ್ಥಾನವಿಲ್ಲ. ಶತ್ರುಗಳೊಡನೆ ಸುಲ್ತಾನನು ಮಾಡಿಕೊಂಡ ಒಪ್ಪಂದವೆಂದರೆ ರಾಷ್ಟ್ರದ ಮತ್ತು ಪೌರುಷಕ್ಕೆ ಅವಮಾನದಂತಿದ್ದಿತು. ಆದರೆ ಮಾಡುವುದೇನು? ಗೆದ್ದವರ ಕಾಲಕಸವನ್ನು ಬಿದ್ದವರು ಮೂಸಿಸಲೇಬೇಕಲ್ಲವೆ? ಅಲ್ಲಲ್ಲಿ ಕೆಲ ಜನರು ಶರಣಾಗತರಾಗಲು ತಡೆಹಾಕಯತ್ನಿಸಿದರು; ಬೇರೆ ಕೆಲರು ಸುಲ್ತಾನನ ಸಿಂಹಾಸನದ ಅಧಃಪತನವನ್ನು ಬಯಸಿದರು; ಇನ್ನೂ ಕೆಲರು ಬ್ರಿಟಿಶ–ಫ್ರೆಂಚ ಕಾವಲನ್ನು ತಪ್ಪಿಸಿ ಮದ್ದು–ಗುಂಡುಗಳನ್ನು ಸಂಗ್ರಹಿಸತೊಡಗಿದರು. ಇಂತಹ ಒಳಸಂಚುಗಳಿಗೆಲ್ಲ ಕೆಮಾಲನ ಪ್ರೋತ್ಸಾಹವಿರಲೇಬೇಕೆಂದು ಬ್ರಿಟಿಶ–ಫ್ರೆಂಚ ಅಧಿಕಾರಿಗಳು ನಂಬಿದ್ದರು. ಕೆಮಾಲನು ಈಗ ಬೇಜಾರದಿಂದ ಎಲ್ಲವನ್ನೂ ಬಿಟ್ಟುಕೊಟ್ಟು ಕಾನಸ್ಟಾಂಟಿನೋಪಲಿನಲ್ಲಿ ಕಾಲಕಳೆಯುತ್ತಿದ್ದನು. ಯಾರೊಡನೆ ಎಂದೂ ಕಣ್ಣೆತ್ತಿ ತುಟಿಬಿಚ್ಚದ ಕೆಮಾಲನಿಗೆ ಈಗೊಬ್ಬ ಗೆಳೆಯನು ಗಂಟು ಬಿದ್ದಿದ್ದಾನೆ. ಅವನ ಹೆಸರು ಆರಿಫ; ಆರಿಫನು ಮಾಡದ ಕೆಲಸಗಳಿಲ್ಲ, ಸ್ವಭಾವದಿಂದ ಕ್ರೂರನಿದ್ದಷ್ಟೆ ಅಂತಃಕರಣಿಯೂ ಇದ್ದನು, ಗೆಳೆತನಕ್ಕಾಗಿ ಜೀವದ ಆಹುತಿಯನ್ನು ಕೊಡಕತ್ತವನು. ಕೆಮಾಲನು ಆರಿಫನ ಆರಾಧ್ಯದೇವತೆಯಾದನು. ತಡೆಯದ ತನ್ನ ವಿಚಾರಗಳನ್ನು ಕೆಮಾಲನು ಆಡುವುದು, ಆರಿಫನು ಅವುಗಳನ್ನು ಕೇಳುವುದು–ಹೀಗೆ ಯಾವಾಗಲೂ ನಡೆಯುವುದು ತುರ್ಕಸ್ತಾನದ ಉದ್ಧಾರ. 'ನಿನ್ನ ಶಕ್ತಿ ಅಗಾಧವಾದುದು, ನಾನು ಜೀವದ ಹಂಗುದೊರೆದು ನಿನ್ನ ಹಿಂದಿನಿಂದಿರುವೆ, ಸೈನ್ಯವನ್ನು ಸಜ್ಜುಪಡಿಸೋಣ, ತುರ್ಕಸ್ತಾನವನ್ನು ಗೆದೆಯೋಣ, ಆದೇಕೆ-

ನಿನ್ನ ಯೋಗ್ಯತೆಗೆ ತಕ್ಕಂತೆ ಕಳೆದುಹೋದ ಸಾಮ್ರಾಜ್ಯವನ್ನೇ ಸ
ಸೋಣ?' ಎಂದು ಆರಿಫನು ಭಯ-ನಯ-ಭಕ್ತಿಗಳಿಂದ ಹುರಿದ
ಸುವನು. ಆದರೆ ಕೆಮಾಲನಿಗೆ ಇಂತಹ ಮಾತುಗಳು ಕೇಳಿಸ
ಲಿಲ್ಲ. ಕೆಮಾಲನು ಗೆಳೆಯನೊಡನೆ ಚರ್ಚೆಗಾಗಿ ಮಾತನಾಡ
ಲಿಲ್ಲ, ತನ್ನ ತಡೆಯದ ವಿಚಾರಗಳನ್ನು ಹೊರದೂಡುವು
'ಸಾಮ್ರಾಜ್ಯಸ್ಥಾಪನೆ! ಕಾಗೆಗಳಂತೆ ತಂಡುತಂಡುಗಳಾಗಿ ಸವ
ಗೆಯೆ ಕಡಿದಾಡುವ ವರೆಗೆ ನಾವು ಸಾಮ್ರಾಜ್ಯವನ್ನು ಸಾ
ಬಲ್ಲೆವೆ? ಸುಲ್ತಾನನಿಂದ ರಾಜ್ಯಸೂತ್ರವನ್ನೆ ಕಸಿದುಕೊಂಡರೆ ಆ
ದೇನು? ಆ ರಾಜ್ಯಸೂತ್ರವು ಕೊಳೆತಿದೆ! ಅದನ್ನು ಮುಟ್ಟುವುದೆ
ತಡ ಅದು ಹರಿದು ಬೀಳುವುದು. ಹಳೆದಾದುದು, ಅದು ಹರಿ
ಬೇಕು; ಅದನ್ನು ಉಳಿಸುವ ಯತ್ನ ಬೇಡ. ಹೊಸದನ್ನು ಬೆಳೆ
ಯತ್ನಿಸೋಣ' ಎನ್ನುವನು ಕೆಮಾಲನು. ದಿನಾಲು ಹೀಗೆಯೆ ನ
ಕೊನೆಗೆ ಆರಿಫನು 'ನಿನ್ನ ಮಾತಿನ ಅರ್ಥವೆ ನನಗಾಗುವುದಿಲ್ಲ.
ನಿನ್ನನ್ನು ಯಾವಾಗಲೂ ನಾಯಿಯಂತೆ ಹಿಂಬಾಲಿಸಲು ನಾನು
ನಿರುವೆ ಎಂದು ಮಾತ್ರ ಬೇಕಾದಷ್ಟು ಸಲ ಹೇಳುವೆ'
ಗೆಳೆಯನ ಉಪನ್ಯಾಸವನ್ನು ತಡೆಯುವನು.

ನಾಯಿಯಾಗುವ ಆರೀಫನ ಆಕಾಂಕ್ಷೆಯು ಬೇಗನೆ ಈಡೇ
ಸಮಯ ಬಂದಿತು. ಸುಲ್ತಾನನು ಶರಣಾಗತನಾದರೂ ಅವನ ಸಾ
ಜ್ಯದ ಬೇರೆಬೇರೆ ಭಾಗಗಳಲ್ಲಿ ಶರಣೆನ್ನಲಿಕ್ಕೂ ಶಸ್ತ್ರಸಂನ್ಯಾಸ
ಜನರ ವಿರೋಧವಿತ್ತೆಂದು ಮೇಲೆಯೆ ಹೇಳಿದೆಯಷ್ಟೆ. ಎನಾಟೋಲಿ
ಎಂಬಲ್ಲಿ ಈ ವಿರೋಧವು ಉಗ್ರಸ್ವರೂಪವನ್ನು ತಾಳಿತು. ಅ
ಸದೆಬಡಿಯುವ ವೀರನೊಬ್ಬನನ್ನು ಶೋಧಿಸುತ್ತ ಸುಲ್ತಾನನ ದೃಷ್ಟಿ
ಕೆಮಾಲನ ಮೇಲೆ ಬಿದ್ದಿತು; ಮೊದಮೊದಲು ಬ್ರಿಟಿಶ-ಫ್ರೆಂಚ
ಕಾರಿಗಳು ಕೆಮಾಲನನ್ನು ಎನಾಟೋಲಿಯಾಕ್ಕೆ ಕಳುಹಿಸುವ ಸ
ವಿರೋಧವನ್ನೊಡ್ಡಿದರು. ಆದರೆ ಕೊನೆಗೆ ಸುಲ್ತಾನನು ಅವ
ಒಪ್ಪಿಸಿದನು. ಕೆಮಾಲನೂ ಒಪ್ಪಿದನು. ಅವನ ಹಂಚಿಕೆಯು

ಯಾಗಿದ್ದಿತು. ಮಂತ್ರಿಮಂಡಲದಲ್ಲಿ ಇಸ್ಮತ ಪಾಶಾ, ಫೆವಝಿ ಪಾಶಾ ಎಂಬವರು ಕೆಮಾಲನ ಪರಮಮಿತ್ರರಿದ್ದರು. ಅವರೊಡನೆ ಕೆಮಾಲನು ಗುಪ್ತ ಸಂಕೇತಭಾಷೆಯೊಂದನ್ನು ಗೊತ್ತುಪಡಿಸಿಕೊಂಡನು. ಸುಲ್ತಾನ ನಿಂದ ಅಧಿಕಾರವನ್ನು ಪಡೆದುಕೊಂಡು, ಆರೀಫನನ್ನು ಜತೆಯಲ್ಲಿ ಕರೆದುಕೊಂಡು ಕೆಮಾಲನು ಏನಾಟೊಲಿಯಾಕ್ಕೆ ಹೋದನು.

ಕಾನಸ್ಟಾಂಟಿನೋಪಲನ್ನು ಬಿಟ್ಟುದೊಂದೇ ತಡ ಕೆಮಾಲನ ಬಾಯಿಯಿಂದ ತಡೆದಿಟ್ಟ ಹಂಚಿಕೆಗಳು ಸುರಿಮಳೆಯಂತೆ ಸುರಿಯ ತೊಡಗಿದುವು. ನಗುವ ರೂಢಿಯೇ ಕೆಮಾಲನಿಗಿಲ್ಲದುದರಿಂದ ಅವನೀಗ ಒಳಗಿಂದೊಳಗೆಯೆ ನಕ್ಕಿರಬಹುದು. ತಾನು ಹೊರಟದ್ದು ಒಳಸಂಚು ಗಳನ್ನು ನಡೆಬಡಿಯಲಿಕ್ಕೆ ಎಂದು ಸುಲ್ತಾನನ ಮತ್ತು ಬ್ರಿಟಿಶ-ಫ್ರೆಂಚರ ಕಲ್ಪನೆ; ಆದರೆ ತಾನು ನಿಜವಾಗಿ ಹೊರಟದ್ದು ಒಳಸಂಚುಗಳನ್ನೆಲ್ಲ ವ್ಯವಸ್ಥಿತವಾಗಿ ತನ್ನ ನೇತೃತ್ವದಲ್ಲಿ ಒಟ್ಟುಗೂಡಿಸಿ ತುರ್ಕಸ್ತಾನವನ್ನು ಪರಕೀಯರ ಸಂಕೋಲೆಯಿಂದ ಬಿಡಿಸುವುದಕ್ಕೆ. ಇದು ಸಣ್ಣ ಕೆಲಸವಲ್ಲ ಎಂಬುದು ಅವನಿಗೆ ಗೊತ್ತು. ಸದ್ಯಕ್ಕೆ ತುರ್ಕಸ್ತಾನದಲ್ಲಿ ಬ್ರಿಟಿಶರೂ ಫ್ರೆಂಚರೂ ತಮ್ಮ ಸೈನ್ಯದಳಗಳನ್ನು ಕಾವಲಾಗಿರಿಸಿದ್ದಾರೆ. ಇದಕ್ಕೆ ಎದುರಾಗಬೇಕಾದರೆ ಸೈನ್ಯ ಬೇಕು ತನಗೂ. ಸುಲ್ತಾನನ ಪ್ರತಿನಿಧಿ ಎಂಬ ಅಧಿಕಾರದಿಂದ ಎಲ್ಲಕಡೆಯ ಸೈನ್ಯಗಳ ಸಂಖ್ಯೆ ಮತ್ತು ಸ್ಥಿತಿ ಗತಿಗಳನ್ನು ತರಿಸಿಕೊಂಡನು. ಬೇರೆಬೇರೆ ತುರ್ಕ ಸೈನ್ಯಾಧಿಕಾರಿ ಗಳನ್ನು ಒಂದೆಡೆ ಸೇರಿಸಿದನು. ಪರಿಸ್ಥಿತಿಯನ್ನು ಅವರ ಮುಂದೆ ಬಿಚ್ಚಿ ಟ್ಟನು. ಸುಲ್ತಾನನು ಸಹಾಯ ಮತ್ತು ಸೈನ್ಯಗಳಿಲ್ಲದುದಕ್ಕಾಗಿ ಈಗ ಪರಕೀಯರ ಸೆರೆಯಾಳುವಿನಂತೆ ವರ್ತಿಸಬೇಕಾಗಿದೆ—ಎಂದು ಹೇಳಿ ಎಲ್ಲರನ್ನೂ ಸೈನಿಕರನ್ನು ಕೂಡಿಸುವ ಹಂಚಿಕೆಗೆ ಒಪ್ಪಿಸಿದನು. ಕೊನೆಗೆ ಎಲ್ಲರೂ ಕೂಡಿ ಸಿವಸ ಎಂಬಲ್ಲಿ ಪ್ರತಿನಿಧಿಗಳ ಸಮ್ಮೇಳನ ವೊಂದನ್ನು ಕರೆಯಿಸಬೇಕೆಂದು ಗೊತ್ತುಮಾಡಿದರು. ಇಷ್ಟಾದ ಕೂಡಲೆ ಕೆಮಾಲನು ಕಾರ್ಯವನ್ನಾರಂಭಿಸಿದನು. ತುಸು ತಡವಾದಲ್ಲಿ ಇಲ್ಲವೆ ತಪ್ಪಿದಲ್ಲಿ ಬ್ರಿಟಿಶರಿಗೆ ಸುಳಿವು ಹತ್ತಿ ಅವರು ತಮ್ಮ ಪ್ರಯತ್ನಗಳನ್ನು

ಮೊಳಕೆಯೊಡೆಯುವ ಮುಂಚೆಯೆ ಹಿಚುಕುವರೆಂದು ಅವನು ಖಂಡಿತ ವಾಗಿ ತಿಳಿದಿದ್ದನು. ಆದಕಾಗಿ ಹಗಲು-ರಾತ್ರಿ ಎನ್ನದೆ, ಹಸಿವೆ ನೀರಿನ ಪರಿವೆ ಇಲ್ಲದೆ ಪ್ರಾಂತದ ತುಂಬ ಸಂಚಾರ ಮಾಡಿದನು, ಪ್ರತಿ ಯೊಂದು ಕಡೆ ಸ್ಥಾನಿಕ ಸಮಿತಿಗಳನ್ನು ನಿರ್ಮಿಸಿದನು. ಕೆಮಾಲನ ವೀರವಾಣಿಯಿಂದ ಸೋತು ಹೆಣವಾದ ಜನರಲ್ಲೂ ಚೈತನ್ಯ ತುಂಬಿತು. ಕೊನೆಗೆ ಯಾರೂ ಇಷ್ಟರಲ್ಲಿ ಶಸ್ತ್ರಸಂನ್ಯಾಸವನ್ನು ಮಾಡಬಾರದೆಂದು ಸುಲ್ತಾನನ ಹೆಸರಿನಲ್ಲಿಯೇ ಆಜ್ಞೆಯನ್ನು ಹೊರಡಿಸಿದನು. ಇಷ್ಟರಲ್ಲಿ ಗ್ರೀಕರು ಸ್ಮರ್ನಾದಲ್ಲಿ ಅತ್ಯಾಚಾರಗಳನ್ನು ನಡೆಸಿದ್ದಾರೆ ಎಂಬ ಸುದ್ದಿ ಬಂದಿತು. ಸಾಕು, ಕೆಮಾಲನ ಕೈಯಲ್ಲಿ ಆದೊಂದು ಹೊಸ ಕೊಳ್ಳಿ ಯಾಯಿತು ದೇಶದಲ್ಲೆಲ್ಲ ಕೋಲಾಹಲವನ್ನೆಬ್ಬಿಸಲಿಕ್ಕೆ.

ಕೆಮಾಲನು ನಡೆಸಿದ ಈ ಪುಂಡಾಟಿಕೆಯು ಸುದ್ದಿಯು ಸುಲ್ತಾನ ನಿಗೆ ಮುಟ್ಟಿದಂದಿನಿಂದ ಅವನಿಗಾಗಲಿ ಮಂತ್ರಿಮಂಡಲಕ್ಕಾಗಲಿ ನಿದ್ರೆ ಎಷ್ಟೋ ದಿವಸಗಳ ವರೆಗೆ ಹತ್ತಲಿಲ್ಲವೆಂದು ಹೇಳಬಹುದು. ಬ್ರಿಟಿಶರು ತನ್ನನ್ನು ಯಾವ ರೀತಿಯಿಂದ ಗೋಳಾಡಿಸಬಹುದೆಂಬ ವಿಚಾರದಿಂದ ಸುಲ್ತಾನನ ಮೈ ನಡುಗಿತು. ಕೂಡಲೆ ಕೆಮಾಲನಿಗೆ ಪುಂಡಗಾರಿಕೆಯ ಚಟುವಟಿಕೆಗಳನ್ನು ತಡೆಯಲು ಹೇಳಿದನು. ಕೆಮಾಲನು ಕಿವಿಗೊಡ ಲಿಲ್ಲ; ಆಜ್ಞೆ ಕಳುಹಿಸಿದನು, ಕೆಮಾಲನು ಕಣ್ಣೆತ್ತಿ ನೋಡಲಿಲ್ಲ. ಕೆಮಾಲನು ಇಂದಿನಿಂದ ಸುಲ್ತಾನನ ಗೊಡವೆಯನ್ನೆ ಬಿಟ್ಟನು. ಸಿವಸ ದಲ್ಲಿ ಸೇರುವ ಸಮ್ಮೇಳನದ ವಿಷಯವಾಗಿಯೆ ಅವನ ಆತುರ. ನೆರೆದವ ರೆಲ್ಲರನ್ನು ತನ್ನ ಮತಕ್ಕೆ ಒಲಿಸಿಕೊಳ್ಳಬೇಕು, ಅವರೆಲ್ಲರಿಗೆ ಒಪ್ಪಿಗೆ ಯಾಗುವಷ್ಟೆ ತನ್ನ ವಿಚಾರಗಳನ್ನು ಬಿಚ್ಚಿ ಇಡಬೇಕು ಉಳಿದವುಗಳನ್ನು ಮುಚ್ಚಿಡಬೇಕು, ಈ ಚಟುವಟಿಕೆಗಳಲ್ಲಿ ಸುವ್ಯವಸ್ಥಿತತೆಯನ್ನೂ ಏಕ ಸೂತ್ರತೆಯನ್ನೂ ಇಟ್ಟುಕೊಳ್ಳಬೇಕು-ಮುಂತಾದ ವಿಚಾರಗಳಿಂದ ಅವನ ತಲೆ ತುಂಬಿತ್ತು. ಸಮ್ಮೇಳನವು ನೆರೆಯಿತು; ಪರಕೀಯರನ್ನು ಹೊಡೆದೋಡಿಸಬೇಕು, ಸುಲ್ತಾನನ್ನು ಸಂರಕ್ಷಿಸಬೇಕು, ಈಗಾದ ಒಪ್ಪಂದದ ಕರಾರುಗಳನ್ನು ಸಡಿಲಿಸಬೇಕು ಮುಂತಾಗಿ ಒಂದು

6

ರಾಷ್ಟ್ರೀಯ ಬೇಡಿಕೆಯು ( National pact ) ಸಮ್ಮೇಳನದಲ್ಲಿ ಸ್ವೀಕೃತವಾಯಿತು. ಸುಲ್ತಾನನು ಈ ಬೇಡಿಕೆಗೆ ಉತ್ತರವನ್ನೆ ಕೊಡಲಿಲ್ಲ. ಕೆಮಾಲನು ರಾಷ್ಟ್ರದ ಶಕ್ತಿಯನ್ನು ತೋರಿಸಬೇಕೆಂದು ಎನಾಟೊಲಿಯಾ ಮತ್ತು ಕಾನಸ್ಟಾಂಟಿನೋಪಲಿನ ನಡುವೆ ಇದ್ದ ತಂತಿ ಮುಂತಾದ ವ್ಯವಹಾರಸಂಬಂಧವನ್ನು ನಾಶಗೊಳಿಸಿ ಆ ಪ್ರಾಂತದ ಕರಗಳನ್ನೆಲ್ಲ ಸಮ್ಮೇಳನದವರು ಆರಿಸಿದ ಕಾರ್ಯನಿರ್ವಾಹಕ ಮಂಡಳಕ್ಕೆ ಮುಟ್ಟುವಂತೆ ಮಾಡಿದನು; ವಾಸ್ತವಿಕವಾಗಿ ಎನಾಟೊಲಿಯಾ ಎಂಬುದೊಂದು ಸ್ವತಂತ್ರ ರಾಷ್ಟ್ರವಾಯಿತೆಂದೇ ಹೇಳಬಹುದು.

ಈಗ ಮಾತ್ರ ಸುಲ್ತಾನನು ಬೆದರಿದನು. ರಾಷ್ಟ್ರೀಯ ಬೇಡಿಕೆಯನ್ನು ಸ್ವೀಕರಿಸಿ ತನ್ನ ಮಂತ್ರಿಮಂಡಳವನ್ನು ರದ್ದುಗೊಳಿಸಿದನು. ಜನರಿಗಾಗಿಯೆ ತನ್ನ ಸಹಾನುಭೂತಿ ಇದೆ ಎಂದು ತೋರಿಸುವವನಂತೆ ಚುನಾವಣೆಗಳನ್ನು ನಡೆಸಿದನು. ಆರಿಸಿ ( ಚುನಾಯಿತರಾಗಿ ) ಬಂದವರೆಲ್ಲ ಜನರ ಪ್ರತಿನಿಧಿಗಳೆಂದೂ, ಅವರೆಲ್ಲರೂ ಕಾನಸ್ಟಾಂಟಿನೋಪಲಿನಲ್ಲಿ ಕಾಯುದೆಮಂಡಳ ( Parliament ) ವಾಗಿ ಕೂಡಬೇಕೆಂದೂ ಆಜ್ಞೆ ಹೊರಡಿಸಿದನು. ಸುಲ್ತಾನನು ಸೋತನೆಂದು ಸದಸ್ಯರು ಆರೆಗಳಿಗೆಯಲ್ಲಿ ಸೊಕ್ಕಿದರು. ಆದರೆ ಕೆಮಾಲನಿಗೆ ಮಾತ್ರ ಇದು ಸುಲ್ತಾನನ ಸೋಗು ಎಂಬ ಸಂಶಯವಿದ್ದಿತು. ಕಾಯುದೆಮಂಡಳವು ಎನಾಟೊಲಿಯಾ ಪ್ರಾಂತದ ಅಂಗೋರಾ ಎಂಬಲ್ಲಿ ಕೂಡಬೇಕು, ಸದಸ್ಯರು ಕಾನಸ್ಟಾಂಟಿನೋಪಲಿಗೆ ಹೋಗುವುದು ಸುರಕ್ಷಿತವಲ್ಲ ಎಂದು ಅವನು ಹೇಳಿದನು. ಆದರೆ ಸದಸ್ಯರಿಗೆ ಹುರುಪಿನ ಭರದಲ್ಲಿ ಇದು ಕೆಮಾಲನ ಹೆದರಿಕೆ ಎಂದು ತೋರಿತು. ಕಾನಸ್ಟಾಂಟಿನೋಪಲಿಗೆ ಹೋದರು, ಕಾಯುದೆಮಂಡಳವೆಂದು ಕೂಡಿದರು, ಹುರುಪಿನಿಂದ ಹೋರಾಡಿದರು, ಹಟದಿಂದ ರಾಷ್ಟ್ರೀಯ ಬೇಡಿಕೆಯ ಪ್ರತಿಯೊಂದು ಮಾತಿಗೆ ಮನ್ನಣೆ ಬೇಕೆಂದರು. ಕುಟಿಲನಾದ ಸುಲ್ತಾನನು ಈ ಮಾತುಗಾರರನ್ನು ಅಕಸ್ಮಾತ್ತಾಗಿ ಮುತ್ತಿ ಬಂಧನದಲ್ಲಿರಿಸಿದನು. ಕೆಲವರು ಓಡಿ ಪಾರಾದರು, ಕರು ತಾಯಿಗಾಗಿ ಹಂಬಲಿಸುವಂತೆ ಕನಕರಿಸುತ್ತ ಕೆಮಾಲನಿದ್ದಲ್ಲಿಗೆ ಧಾವಿಸಿದರು.

ಆದರೆ ಸುಲ್ತಾನನು ಸುಮ್ಮನಿರಲಿಲ್ಲ. ಈ ಸದಸ್ಯರೆಲ್ಲ ಬಂಡುಗಾರರು, ಸುಲ್ತಾನನು ಧರ್ಮಗುರುವು, ಆದುದರಿಂದ ಇವರೆಲ್ಲ ಧರ್ಮ ದ್ರೋಹಿಗಳು ಎಂದು ಸಾರಿ ದೇಶದ ತುಂಬ ಕಾಯ್ದು, ಮೌಲಾನಾ ಮೊದಲಾದ ಧರ್ಮಾಧಿಕಾರಿಗಳನ್ನು ಆತ್ಮಸಮರ್ಥನೆಯ ಚಳವಳಿಗಾಗಿ 'ಛೂ' ಬಿಟ್ಟನು. ಮೊದಮೊದಲು ಸುಲ್ತಾನನಿಗೆ ಜಯ ದೊರಕಿದರೂ ಸ್ವಲ್ಪಾವಧಿಯಲ್ಲಿಯೆ ಜನತೆಯ ಬೆಂಬಲವೂ ಮೊದಲು ಗಳಿಸಿದ ಕೀರ್ತಿಯೂ ಕೆಮಾಲನಿಗೆ ಸಹಾಯವನ್ನೊದಗಿಸಿದುವು. ಕ್ರಮೇಣ ಅನೇಕ ಸದಸ್ಯರು ಕಾನಸ್ಟಾಂಟಿನೋಪಲಿನಿಂದ ಅಂಗೋರಾಕ್ಕೆ ಜಾರಿದರು. ಅಲ್ಲಿ ನಡೆಯುದಿದ್ದ ಪಾರ್ಲಮೆಂಟನ್ನು ಇಲ್ಲಿ ಮುಂದುವರಿಸಿದರು. ಕೆಮೊಲನೆ ಪಾರ್ಲಮೆಂಟಿನ ಅಧ್ಯಕ್ಷ, ಆವನ ನೇತೃತ್ವದಲ್ಲಿ ಈ ಪಾರ್ಲಮೆಂಟವು ತಾನೇ ತುರ್ಕಸ್ತಾನದ ಅಧಿಕೃತ ಸರಕಾರವು ಎಂಬ ಗೊತ್ತುವಳಿಯನ್ನು ಸ್ವೀಕರಿಸಿತು. ಈ ಪಾರ್ಲಮೆಂಟಕ್ಕೆ ಮಹಾ-ರಾಷ್ಟ್ರೀಯ ಸಭೆ ( Grand National Assembly ) ಎಂಬ ಹೆಸರು ಕೊಡಲ್ಪಟ್ಟಿತು. ಈ ಸಭೆಗೆ ಅಧ್ಯಕ್ಷನು—ಎಂದರೆ ಸರಕಾರದ ನಾಯಕನು-ಮುಸ್ತಾಫಾ ಕೆಮಾಲ ಪಾಶಾ ಎಂಬ ಗೊತ್ತುವಳಿಯು ಸರ್ವಾನುಮತದಿಂದ ಸ್ವೀಕೃತವಾಯಿತು.

---

# ೭ ಪ್ರೌಢ ಪುಂಡಾಟಿಕೆ

ಮಹಾರಾಷ್ಟ್ರೀಯ ಸಭೆಯ ಅಧ್ಯಕ್ಷನಾದ ಮುಸ್ತಾಫಾ ಕೆಮಾಲನು ತನ್ನ ಅತ್ಯಂತ ತೀಕ್ಷ್ಣವಾದ ಬುದ್ಧಿಮತ್ತೆಯ, ಕುಶಾಗ್ರ ವಾದ ಚಾತುರ್ಯದ ಸದುಪಯೋಗವನ್ನು ಮಿಂಚಿನಂತೆ ಪ್ರಾರಂಭಿಸಿದನು. ಒಂದು ಕಡೆ ಸುಲ್ತಾನ, ಒಂದು ಕಡೆ ಸಹಾಯಕ ರಾಷ್ಟ್ರಗಳು ಬಾಯ್ದೆರೆದು ನೋಡುತ್ತಲಿವೆ. ಒಮ್ಮೆ ಮಿಂಚು– ಏನೊ ಕಾಣಿಸಿದಂತಾಗುವುದು; ಮರುಗಳಿಗೆಯಲ್ಲಿ ಕುಕ್ಕಿದ ಕಣ್ಣುಗಳು ಕುರುಡಾಗುವುವು. ಕೂಡಲೆ ಮತ್ತೊಂದು ಮಿಂಚು– ಮತ್ತೊಂದು ಅದ್ಭುತವು ಆ ಬೆಳಕಿನಲ್ಲಿ ಕಾಣುವುದು; ಹೀಗೆ ಐದಾರು ನಿಮಿಷಗಳ ಮಿಂಚು ಮುಗಿದು ಹಗಲು ಬೆಳಕು ಬಂದಾಗ ನೋಡಿದರೆ– ಇದೇನು ಜಾದುಗಾರಿಕೆಯ ಪರಮಾವಧಿಯೊ ಎನುವಂತಿದೆ! ಹೊಸತೊಂದು ಪರಿಸ್ಥಿತಿಯೆ ಮುತ್ತಿದೆ, ಹೊಸತೊಂದು ಸೃಷ್ಟಿಯೆ ನಿರ್ಮಾಣವಾಗಿದೆ! ಆ ನಿರ್ಮಾಣ ಕ್ರಿಯೆಯು ಮಿಂಚಿನ ವೇಗದಿಂದ ನಡೆದುದರಿಂದ ಯಾರಿಗೆ ಏನನ್ನೂ ಮಾಡಲು ಬರುವಂತಿಲ್ಲ. ಕೆಮಾಲನ ನಿರ್ಮಾಣಶಕ್ತಿಯ ರಭಸವನ್ನಾಗಲಿ ಆವೇಗವನ್ನಾಗಲಿ ತಡೆಯುವುದು ಎಲ್ಲರಿಗೂ ಅಶಕ್ಯವಾಯಿತೆಂದು ಹೇಳಬಹುದು. ಕಾನಸ್ಟಾಂಟಿನೋಪಲಿನಲ್ಲಿ ಮುಗಿಯದಿದ್ದ ಪಾರ್ಲಮೆಂಟವು ಅಂಗೋರಾದಲ್ಲಿ ನೆರೆಯಿತು.– ಇದರ ಅರ್ಥವೇನು ?– ಎಂದು ನೋಟಕರು ತಲೆತುರಿಸುವಾಗ ರಾಷ್ಟ್ರೀಯ ಸಭೆಯು ಏಕಮತವಾಗಿ ಕೆಮಾಲನನ್ನೆ ಅಧ್ಯಕ್ಷನಾಗಿ ಆರಿಸಿತೆಂಬ ಸುದ್ದಿ! ರಾಷ್ಟ್ರೀಯ ಸಭೆಯ ಅಧ್ಯಕ್ಷನೆಂದರೆ ಅವನ ಉದ್ದಿಶ್ಯವೇನು–ಅಧಿಕಾರವೆಷ್ಟು–ಇನ್ನು ಮುಂದೆ ಮಾಡುವನೇನು– ಎಂದು ತಂತಮ್ಮೊಳಗೆ ಜನರು ಮಾತನಾಡುತ್ತಿರುವಷ್ಟರಲ್ಲಿಯೆ 'ರಾಷ್ಟ್ರೀಯ ಸಭೆಯ ಅಧ್ಯಕ್ಷನೆಂದರೆ ರಾಷ್ಟ್ರಪತಿ, ರಾಷ್ಟ್ರೀಯ ಸಭೆಯೆ ಜನತೆಯ ಸಭೆ, ಇನ್ನು ತುರ್ಕಸ್ತಾನದ ಸರಕಾರ

ವೆಂದರೆ ನಾನು ಮತ್ತು ಇಲ್ಲಿಯ ರಾಷ್ಟ್ರೀಯ ಸಭೆ. ಕಾನಸ್ಟಾಂಟಿನೋಪಲಿನಲ್ಲಿದ್ದ ಸುಲ್ತಾನನಿಗೆ, ಬ್ರಿಟಿಶ-ಫ್ರೆಂಚ ಅಧಿಕಾರಿಗಳ ಸೆರೆಯಾಳುವಿನಂತಿದ್ದ ಸುಲ್ತಾನನಿಗೆ, ರಾಷ್ಟ್ರದ ಸ್ವಾತಂತ್ರ್ಯವನ್ನು ಸ್ವಂತದ ಸುರಕ್ಷಿತತೆಗಾಗಿ ಮಾರಿಕೊಂಡಂತಿದ್ದ ಸುಲ್ತಾನನಿಗೆ ಸದ್ಯಕ್ಕೆ ತುರ್ಕಸ್ತಾನದ ಸರಕಾರವೆಂದುಕೊಳ್ಳಲು ಅಧಿಕಾರವೆ ಇಲ್ಲ' ಎಂದು ಮುಸ್ತಾಫಾನು ಜಗತ್ತಿಗೆಲ್ಲ ಗುಡುಗಿ ಸಾರಿದನು. ಸಹಾಯಕ ರಾಷ್ಟ್ರಗಳ ಮುತ್ಸದ್ದಿಗಳಿಗೆ ಇದೇನೊ ತುರ್ಕಸ್ತಾನದ ಒಳಜಗಳವೆಂದೂ ಈ ಜಗಳದಿಂದ ತುರ್ಕಸ್ತಾನವು ತಾನಾಗಿಯೆ ಹಣ್ಣಾಗುವುದೆಂದೂ ಸಂತೋಷವೆನಿಸಿತು. ತಮ್ಮ ವಿಜಯದ ಮದದಲ್ಲಿ ಅವರು ಸುಲ್ತಾನನನ್ನು ಮನಬಂದಂತೆ ಕಡೆಗಣಿಸಿದರು, ಕೊನೆಗೆ ತುರ್ಕಸ್ತಾನದಕೂಡ **ಸೇವ್ರದ ಒಪ್ಪಂದ** ಎಂಬ ಹೆಸರಿನ ಒಪ್ಪಂದವನ್ನು ಮಾಡಿಕೊಂಡರು. ಇದರ ಕರಾರುಗಳಿಂದ ತುರ್ಕಸ್ತಾನಕ್ಕೆ ತೀರ ಸಣ್ಣದಾದ ಒಂದು ಪ್ರದೇಶ ಮಾತ್ರ ಉಳಿಯಿತು; ಇಲ್ಲಿಯೂ ಕೂಡ ತುರ್ಕಸ್ತಾನಕ್ಕೆ ಸ್ವಾತಂತ್ರ್ಯವಿಲ್ಲ; ಸಹಾಯಕ ರಾಷ್ಟ್ರಗಳು ತುರ್ಕಸ್ತಾನದ ಧನ-ಸೇನೆ ಮೊದಲಾದ ಎಲ್ಲ ತಂತ್ರಗಳ ಸೂತ್ರಗಳನ್ನು ತಮ್ಮ ಕೈಯಲ್ಲಿಟ್ಟುಕೊಳ್ಳಬೇಕೆಂದು ಗೊತ್ತಾಗಿದ್ದಿತು. ಒಟ್ಟಿನಲ್ಲಿ ಹೇಳುವುದಾದರೆ ಸೇವ್ರದ ಒಪ್ಪಂದವೆಂದರೆ ತುರ್ಕಸ್ತಾನದ ದಾಸ್ಯದ ಡಂಗುರವೆನಿಸಿತು. ಕೆಮಾಲನಿಗೆ ಇದರಿಂದ ಬಹಳೇ ಆನಂದವಾಯಿತು. ಸುಲ್ತಾನನಲ್ಲಿ ಇನ್ನೂ ಯಾರಿಗಾದರೂ ಭಕ್ತಿ-ವಿಶ್ವಾಸಗಳು ಉಳಿದಿದ್ದರೆ ಅವರು ಈ ಒಪ್ಪಂದದಿಂದ ಸುಲ್ತಾನನು ದೇಶಕ್ಕೆ ತಂದ ಅಪಮಾನವನ್ನೂ ದಾಸ್ಯವನ್ನೂ ನೋಡಿ ಸ್ವೇಚ್ಛೆಯಿಂದ ತನ್ನನ್ನು ಕೂಡುವರೆಂದು ದೃಢವಾಗಿ ನಂಬಿದನು. ಸ್ವಲ್ಪಾವಧಿಯಲ್ಲಿಯೆ ಅವನ ನಂಬಿಗೆ ನಿಜವಾಯಿತು. ದೇಶಾಭಿಮಾನಿಗಳೆಲ್ಲ ಕೆಮಾಲನೆ ತಮ್ಮ ಉದ್ಧಾರಕನೆಂದು ಮನಗಂಡು ಆವನ ಆಜ್ಞೆಗೊಳಗಾಗಿ ಹೆಣಗಾಡಲು ಸಿದ್ಧರಾದರು. ಕೆಮಾಲನಾದರೂ ಪ್ರತಿಭಟಿಸಿ ನಿಂತನು. 'ತುರ್ಕಸ್ತಾನದ ರಾಜಧಾನಿಯು ಕಾನಸ್ಟಾಂಟಿನೋಪಲ ಅಲ್ಲ, ಅಂಗೋರಾ; ನಮ್ಮೊಡನೆ ಒಪ್ಪಂದ ಮಾಡಿಕೊಂಡರೆ ಅದನ್ನು ತುರ್ಕಸ್ತಾನವು ಮನ್ನಿಸುವುದಲ್ಲದೆ

ಸುಲ್ತಾನನ ಯಾವ ವ್ಯವಹಾರವನ್ನೂ ಯಾರೂ ಮನ್ನಿಸುವುದಿಲ್ಲ. ನಮ್ಮ ದೇಶದ ಸ್ವಾತಂತ್ರ್ಯ ಮತ್ತು ನಮ್ಮ ಜನರ ಸ್ವಾಭಿಮಾನ ಇವುಗಳಿಗೆ ತಕ್ಕಂತೆ ಒಪ್ಪಂದವನ್ನು ಮಾಡಿಕೊಳ್ಳಲು ನಾವು ಸಿದ್ಧರಿರುವೆವು. ಇದನ್ನು ನೀವು ಒಪ್ಪದಿದ್ದರೆ ಸಾಯುವ ವರೆಗೆ ಹೋರಾಡಲು ಇಡಿಯ ತುರ್ಕಸ್ಥಾನವೆ ಸನ್ನನ್ನು ಮುಂದೆ ಮಾಡಿ ಸಡ್ಡು ಹೊಡೆದು ನಿಂತಿದೆ' ಎಂದು ಸಹಾಯಕ ರಾಷ್ಟ್ರಗಳ ಮುತ್ಸದ್ದಿಗಳಿಗೆ ಮುಸ್ತಾಫಾನು ಹೇಳಿ ಕಳುಹಿದನು. ತಾವು ಗೆದ್ದ ವೀರರೆಂಬ ಹೆಮ್ಮೆಯಿಂದ ಗದ್ದುಗೆಯನ್ನೇರಿದ ಆ ಮುದಿ ಮುತ್ಸದ್ದಿಗಳಿಗೆ ಸೋತು ಹಣ್ಣಾದರೂ ಸೆಟೆದು ನಿಂತ ಈ ದೇಶದ ಪರಿಸ್ಥಿತಿಯನ್ನು ನೋಡಿ ಆಶ್ಚರ್ಯವಾಯಿತು. ಆದರೆ ಬರಿಯ ಆಶ್ಚರ್ಯದಿಂದ ಕೆಮಾಲನು ಬೆದರುವನೆ? ಸೇವ್ರದ ಒಪ್ಪಂದವಂತೂ ಹುಡುಗರಿಗೆ ಗಾಳಿಪಟದ ಕಾಗದವಾಯಿತು. ಸುಲ್ತಾನನು ಅದನ್ನು ಜಾರಿಯಲ್ಲಿ ತರಬಹುದೆಂಬ ಆಶೆಯನ್ನು ಕನಸು-ಮನಸುಗಳಲ್ಲಿ ಎಣಿಸುವಂತಿಲ್ಲ. ಕೆಮಾಲನ ಕೂಡ ಯುದ್ಧವನ್ನು ಪ್ರಾರಂಭಿಸಬೇಕೆ?-ಯಾರಿಗೂ ಉತ್ಸಾಹವಿಲ್ಲ. ಇಂಗ್ಲಂಡ, ಫ್ರಾನ್ಸ, ಅಮೇರಿಕೆಗಳಲ್ಲಿ ಜನರು ನಿರ್ವಿಣ್ಣರಾಗಿದ್ದಾರೆ. ಇಟಲಿ-ರಶಿಯಾಗಳಂತೂ ಅಂತಃಕಲಹದಿಂದ ವ್ಯಾಕುಲವಾಗಿವೆ. ಮುಂದೆ ಉಪಾಯವೇನು?-ಎಂದು ಈ ಮುತ್ಸದ್ದಿಗಳು ತಲೆ ಹಿಡಿದುಕೊಂಡು ಕುರ್ಚಿಗಳಲ್ಲಿ ಕುಕ್ಕರಿಸಿದರು. ಇಷ್ಟರಲ್ಲಿ ಗ್ರೀಸದ ಮುಖ್ಯಮಂತ್ರಿಯಾದ ವೆನಿಝೆಲೊಸ್ ಎಂಬವನಿಗೆ ಹಂಚಿಕೆಯೊಂದು ಹೊಳೆಯಿತು. ಅನೇಕ ನೂರು ವರ್ಷಗಳಿಂದ ತುರ್ಕಸ್ಥಾನವು ತನ್ನ ಅಧೀನರಾಗಿದ್ದ ಗ್ರೀಕ ಜನರನ್ನು ಪರಿಪರಿಯಾಗಿ ಪೀಡಿಸಿದ್ದಿತು, ಆ ಸೇಡನ್ನು ತೀರಿಸಬೇಕು; ಗ್ರೀಕ ಸಾಮ್ರಾಜ್ಯವು ಪುರಾತನ ಕಾಲದಲ್ಲಿ ಜಗತ್ತಿನ ಆದರ್ಶವಾಗಿತ್ತು, ಸ್ಫೂರ್ತಿಯಾಗಿತ್ತು, ಅದರ ಪುನರುತ್ಥಾಪನೆಯನ್ನು ಕೈಕೊಳ್ಳಬೇಕು; ಮಹಾಯುದ್ಧದಲ್ಲಿ ಹಣ್ಣಾಗದೆ ಉಳಿದಿದ್ದ ಸೈನ್ಯವೆಂದರೆ ಗ್ರೀಕರದೊಂದೆ, ಆದುದರಿಂದ ತುರ್ಕಸ್ಥಾನವನ್ನು ಗೆಲ್ಲುವುದು ಕೆಲವು ದಿವಸಗಳ ಮಾತು; ಸಹಾಯಕರಾಷ್ಟ್ರಗಳು ಗ್ರೀಸಕ್ಕೆ ಗೆದ್ದ ಪ್ರದೇಶದ ಬಹುಭಾಗವನ್ನು ಬಿಟ್ಟುಕೊಡುವಂತಿದ್ದರೆ

ವೆನಿಝೆಲೊಸ್‌ಸು ಕೆಮಾಲನ ಸೊಕ್ಕು ಅಡಗಿಸಲು ಸಿದ್ಧನಿದ್ದನು. ಯಾರಾದರೂ ಆ ಕೆಲಸಕ್ಕೆ ಮುಂದೆ ಬಂದರೆ ಸಾಕು ಎಂಬ ಮನಃಸ್ಥಿತಿಯಲ್ಲಿದ್ದ ಮುದಿಮುತ್ಸದ್ದಿಗಳಿಗೆ ಮೈಮೇಲಿನ ಒಂದು ಭಾರ ಇಳಿದಂತಾಯಿತು.

ಗ್ರೀಕ ಸೈನ್ಯವು ತುರ್ಕಸ್ತಾನವನ್ನು ನುಗ್ಗುವ ಸಿದ್ಧತೆಯನ್ನು ನಡೆಸಿದುದು ಕೆಮಾಲನಿಗೆ ಅತ್ಯಂತ ಅನುಕೂಲವಾಗಿ ಪರಿಣಮಿಸಿತು. ಇದುವರೆಗೆ ಇಂಗ್ಲಂಡ, ಫ್ರಾನ್ಸ ಮೊದಲಾದ ದೊಡ್ಡ ರಾಷ್ಟ್ರಗಳೊಡನೆ ಹೋರಾಟವಾಗಿದ್ದಿತು. ಈಗ ಅದೇ ರಾಷ್ಟ್ರಗಳು ಮತ್ತೆ ಯುದ್ಧವನ್ನು ಹೂಡಿದರೆ ಕೆಮಾಲನ ಸಂಗಡಿಗರಿಗಾಗಲಿ ದೇಶದ ಸಾಮಾನ್ಯಜನತೆಗಾಗಲಿ ಎಷ್ಟು ಉತ್ಸಾಹ-ಧೈರ್ಯಗಳು ಬರಬಹುದಾಗಿತ್ತೆಂಬುದು ಸಂಶಯಾಸ್ಪದವಾಗಿತ್ತು. ಆದರೆ ಗ್ರೀಸ ಸಣ್ಣ ದೇಶ; ಇದಲ್ಲದೆ ಅನೇಕ ವರ್ಷಗಳಿಂದ ತುರ್ಕರಿಗೂ ಗ್ರೀಕರಿಗೂ ಬೆಳೆದ ದ್ವೇಷ. 'ನಿನ್ನಿನವರೆಗೆ ನಿಮ್ಮ ಗುಲಾಮರಾಗಿದ್ದವರಿಗೆ ಇಂದು ಶರಣೆನ್ನುವಷ್ಟು ಷಂಢರೇ ನೀವು ? ಧೈರ್ಯ ತನ್ನಿರಿ, ಒಂದಾಗಿರಿ, ಜಯಮಾಲೆಯು ಇದ್ದಲ್ಲಿಂದ ನಿಮ್ಮ ಕೊರಳಿಗೆ ಇಳಿಯುವುದು' ಎಂದು ಕೆಮಾಲನು ತನ್ನ ದೇಶಬಾಂಧವರನ್ನು ಹೊಡೆದೆಬ್ಬಿಸಿದನು. ಬಡತನ, ಅಜ್ಞಾನ, ಹೋರಾಟಗಳಿಂದ ತೀರ ಹಣ್ಣಾಗಿದ್ದರೂ ಕೆಮಾಲನ ಸ್ಫೂರ್ತಿದಾಯಕ ನೇತೃತ್ವದಲ್ಲಿ ತುರ್ಕಸ್ತಾನದ ಸೈನ್ಯವು ಮತ್ತೆ ಸಜ್ಜಾಗತೊಡಗಿತು. ಸೈನಿಕರನ್ನು ಹುರಿದುಂಬಿಸುವಂತೆ ಯೋಗ್ಯ ಸೈನ್ಯಾಧಿಕಾರಿಗಳನ್ನು ಹುಡುಕುವ ಕಲೆಯೂ ಕೆಮಾಲನಿಗೆ ಸಾಧಿಸಿತ್ತು. ಹಿಂದಕ್ಕೊಮ್ಮೆ ಕಾಕೇಸಸದಲ್ಲಿ ತನ್ನ ದಳದಲ್ಲಿ ಕೆಚ್ಚೆದೆಯಿಂದಲೂ ಕೌಶಲ್ಯದಿಂದಲೂ ಕಾದಿದ ಇಸ್ಮೆತ್‌ಪಾಶಾನನ್ನು ಕೆಮಾಲನು ಅಂದಿನಿಂದಲೂ ಲಕ್ಷ್ಯದಲ್ಲಿಟ್ಟುಕೊಂಡಿದ್ದನು. ಕೆಲವು ದಿವಸ ಮಂತ್ರಿಯಾಗಿ ಮುಂದೆ ರಾಷ್ಟ್ರೀಯ ಸಭೆಯು ಕಾನಸ್ಟಾಂಟಿನೋಪಲಿನಲ್ಲಿ ಕೂಡಿದಾಗ ಅದರಲ್ಲಿ ಒಬ್ಬನಾಗಿ ಇಸ್ಮೆತ್‌ಪಾಶಾನು ಮುಸ್ತಾಫಾನ ವಿಷಯವಾಗಿ ಸ್ನೇಹವನ್ನೂ ಸಹಾನುಭೂತಿಯನ್ನೂ ತೋರಿಸಿದ್ದನು. ಸುಲ್ತಾನನು ರಾಷ್ಟ್ರೀಯ ಸಭೆಯ ಪ್ರತಿನಿಧಿಗಳನ್ನು ಸೆರೆಹಿಡಿದಾಗ

ಇಸ್ಮೆತ್‌ನು ತಪ್ಪಿಸಿಕೊಂಡು ಕೆಲವು ದಿವಸ ಅತ್ತಿತ್ತ ಸದ್ದಿಲ್ಲದೆ ಸುಳಿದಾಡಿ ಕೊನೆಗೆ ಅಂಗೋರಾದಲ್ಲಿ ಕೆಮಾಲನನ್ನು ಕೂಡಿಕೊಂಡಿದ್ದನು. ಈ ಇಸ್ಮೆತ್‌ನನ್ನು ಈಗ ಕೆಮಾಲನು ಸೈನ್ಯದ ಮುಖ್ಯಾಧಿಕಾರಿಯನ್ನಾಗಿ ಮಾಡಿ ಗ್ರೀಕರ ದಾಳಿಯನ್ನು ಎದುರಿಸಲು ಸಿದ್ಧನಾದನು.

ಈ ಯುದ್ಧದಲ್ಲಿ ನಡೆದ ಅನೇಕ ಸಂಗತಿಗಳು ಕೆಮಾಲನ ಜೀವನಕ್ಕೆ ಮತ್ತು ಸ್ವಭಾವಕ್ಕೆ ಸಂಬಂಧಿಸಿವೆ; ಅವುಗಳನ್ನು ಪೂರ್ತಿಯಾಗಿ ಬಣ್ಣಿಸ ದಿದ್ದರೆ ಈ ನರಕೇಸರಿಯ ಚರಿತ್ರಚಿತ್ರವು ಪೂರ್ತಿಯಾಗುವಂತಿಲ್ಲ. ಆದರೂ ಇಂತಹ ಚಿಕ್ಕ ಗ್ರಂಥದಲ್ಲಿ ಆ ಅನೇಕ ವಿವರಗಳಿಗೆ ಎಡೆ ದೊರೆಯು ಲಾಗದು. ಎಲ್ಲ ಸಿದ್ಧತೆಯಿಂದ ಬಂದ ಗ್ರೀಕರು ಪ್ರಾರಂಭಕ್ಕೆ ತುರ್ಕ ಸೈನ್ಯವನ್ನು ಬೂರಲದರಳಿಯಂತೆ ಚದರಿಸಿದರು; ಇದುವರೆಗೆ ಜಯದ ಆಸ್ವಾದವನ್ನು ಕಂಡ ಅಂಗೋರಾದ ರಾಷ್ಟ್ರೀಯ ಸಭೆಯ ಸದಸ್ಯರು ಸೋಲಿನಿಂದ ಸಿಡುಕುಗೊಂಡರು; ಎಲ್ಲಿಂದಲೊ ಒಮ್ಮೆಲೆ ಬಂದ ಇಸ್ಮೆತ್ ನಿಗೆ ಮುಖ್ಯಾಧಿಕಾರವನ್ನು ಕೊಟ್ಟುದಕ್ಕಾಗಿ ಕೆಮಾಲನ ಅನೇಕ ಸಹ-ಕಷ್ಟಭಾಗಿಗಳು ಅಸೂಯೆಪಟ್ಟರು; ಯುದ್ಧವನ್ನು ಹೀಗೆ-ಹೀಗೆ ನಡೆಸಲೇ ಬೇಕೆಂದು ರಾಷ್ಟ್ರೀಯ ಸಭೆಯು ಹಟತೊಟ್ಟಿತು; ಯುದ್ಧವು ಒಬ್ಬನ ಕೆಲಸ, ಅನೇಕರು ಅಧಿಕಾರಗಳನ್ನು ನಡೆಸಿದರೆ ಸಂಘಟನೆ–ಶಿಸ್ತುಗಳು ಉಳಿಯುವುದಿಲ್ಲ, ಆದಕಾಗಿ ತನ್ನನ್ನು ಯುದ್ಧದ ಸರ್ವಾಧಿಕಾರಿ ಮಾಡಿ ದರೆ ಅನುಕೂಲವಾಗುವುದೆಂದು ಕೆಮಾಲನ ಹಟ; ಕೆಮಾಲನ ಕೈಯಲ್ಲಿ ಹೆಚ್ಚಿನ ಅಧಿಕಾರವನ್ನು ಕೊಡಲು ಪ್ರತಿನಿಧಿಗಳ ಅವಿಶ್ವಾಸ; ಇತ್ತ ದಿನ ದಿನಕ್ಕೆ ಪಟ್ಟಣಗಳನ್ನು ಸುಡುತ್ತ, ಜನರನ್ನು ತುಂಡರಿಸುತ್ತ, ಧನಧಾನ್ಯ ಹಾಳುಗೆಡಹುತ್ತ ಜಯಭೇರಿಯನ್ನು ಹೊಡೆಯುವ ಗ್ರೀಕರು; ಹೀಗೆ ಪ್ರಾರಂಭದಲ್ಲಿ ಪಾರ್ಲಮೆಂಟಿನೊಡನೆಯೂ ಪರಕೀಯ ಸೈನ್ಯದೊಡ ನೆಯೂ ಹೋರಾಡಿದ ಕೆಲವು ಸನ್ನಿವೇಶಗಳು ಅತ್ಯಂತ ಸಂಸ್ಮರಣೀಯ ವಾಗಿವೆ; ಕೊನೆಗೆ ಕೆಮಾಲನು ಗೆದ್ದನು, ಪ್ರತಿನಿಧಿಗಳಿಂದ ಸರ್ವಾಧಿಕಾರ ವನ್ನು ಪಡೆದುಕೊಂಡನು, ಗ್ರೀಕಸೈನ್ಯವನ್ನು ಸೋಲಿಸಿ, ತುಂಡರಿಸಿ, ಬೆನ್ನಟ್ಟಿ ಸಮುದ್ರದಾಚೆಗೆ ಓಡಿಸಿದನು.

ಗ್ರೀಕ ಸೈನಿಕರು ಗೆದ್ದ ಭೂಪ್ರದೇಶವೆಲ್ಲ ಮರಳಿ ತುರ್ಕಸ್ತಾನಕ್ಕೆ ಒರತಕ್ಕುದೆಂದೂ, ಬ್ರಿಟಿಶ-ಫ್ರೆಂಚ ಸೈನಿಕರು ಕಾನಸ್ಟಾಂಟಿನೋಪಲನ್ನು ಬಿಟ್ಟು ಹೋಗತಕ್ಕುದೆಂದೂ ಕೊನೆಗೆ ಸಹಾಯಕ ರಾಷ್ಟ್ರಗಳು ಮುಸ್ತಾಫಾನ ಕೂಡ ಒಪ್ಪಂದವನ್ನು ಮಾಡಿಕೊಳ್ಳಬೇಕಾಯಿತು. ಕಾನಸ್ಟಾಂಟಿನೋಪಲ್ ! ತುರ್ಕಸ್ತಾನದ ಸಾಮ್ರಾಜ್ಯವೈಭವದ ಸಂಕೇತ! ನೂರಾರು ವರ್ಷಗಳ ವರೆಗೆ ಪರಕೀಯರು ಅಧಿಕಾರ ನಡೆಸಿದ ತುರ್ಕಸ್ತಾನದ ದೌರ್ಬಲ್ಯದ ಸಂಕೇತ! ಇಂದು ಕಾನಸ್ಟಾಂಟಿನೋಪಲದಿಂದ ಪರಕೀಯರೆಲ್ಲರೂ ಹೊರಹೊರಟರು. ತುರ್ಕಸ್ತಾನದ ಸ್ವಾತಂತ್ರ್ಯಧ್ವಜವು ಧಕ್ಕೆ ಇಲ್ಲದೆ ಕೊನೆಗೊಮ್ಮೆ ನಿಂತಿತು! ಇದೆಲ್ಲವೂ ಅದ್ಭುತವೆ! ಮಹಾಯುದ್ಧದಲ್ಲಿ ಜರ್ಮನಿಯ ಬೆನ್ನುಕಟ್ಟಿ ತುರ್ಕಸ್ತಾನವು ಸೋತ ರಾಷ್ಟ್ರ ಎಂದು ಯಾರಿಗಾದರೂ ಈಗ ವಿಶ್ವಾಸವಾಗುವಂತಿರಲಿಲ್ಲ. ಮಹಾಯುದ್ಧದ ವೀರ-ವಿಜಯಿ ರಾಷ್ಟ್ರಗಳನ್ನು ಪ್ರತಿಭಟಿಸಿ, ಎದುರಿಸಿ, ಚದರಿಸಿ ಸ್ವಾತಂತ್ರ್ಯವಿಜಯಧ್ವಜವನ್ನು ನಿಲ್ಲಿಸಿದ ಮುಸ್ತಾಫಾ ಕೆಮಾಲನು ವೈಭವದಿಂದ, ಮೆರವಣಿಗೆಯಿಂದ ಕಾನಸ್ಟಾಂಟಿನೋಪಲಿಗೆ ಬರಲು ನಗರದ ಜನಸಮೂಹವೆಲ್ಲ 'ಗಾಝಿ, ಗಾಝಿ' (ಜಯಶೀಲ) ಎಂದು ಭಯ-ನಯ-ಭಕ್ತಿಗಳಿಂದ ಅವನ ದರ್ಶನಕ್ಕಾಗಿ ನುಗ್ಗಿದುದರಲ್ಲಿ ಆಶ್ಚರ್ಯವೇನು? ಗ್ರೀಕರೊಡನೆ ಹೋರಾಡುವಾಗ ಎಂತಹ ಎಡರುಗಳನ್ನು ಕೆಮಾಲನು ಎದುರಿಸಿದನೆಂಬುದನ್ನು ಲಕ್ಷ್ಯದಲ್ಲಿಟ್ಟರೆ ಇಡಿಯ ತುರ್ಕಸ್ತಾನವೆ ಗಾಝಿಗೆ ಮನಸೋತುದರ ರಹಸ್ಯವು ತಿಳಿದು ಒರುವುದು. ಗಾಝಿಯ ಧೈರ್ಯ-ಸಾಹಸಗಳ ಪ್ರದೀಪದಿಂದಲೆ ಅವನ ಅನುಯಾಯಿಗಳ ಸಾಹಸಪ್ರದೀಪವು ಪ್ರಜ್ವಲಿಸಿತು. ತನ್ನ ಗುಣಗಳಿಂದ ಅನ್ಯರು ತಂತಮ್ಮ ಗುಣಗಳನ್ನು ಗುರುತಿಸುವಂತಹ ಆತ್ಮವಿಶ್ವಾಸವನ್ನು ಕೆಮಾಲನ ಒಂದು ದೃಷ್ಟಿಪಾತವು ಹುಟ್ಟಿಸುತ್ತಿತ್ತಂತೆ. ಕೆಮಾಲನ ಒಂದೊಂದು ದೃಷ್ಟಿಪಾತವೆಂದರೆ ವಿದ್ಯುತ್ತಿನ ಸಂಚಾರದಂತೆ, ಒಂದೊಂದು ಮಾತು ಎಂದರೆ ಅಮೃತಧಾರೆಯಂತೆ ಸಂಜೀವನೀ, ಒಂದೊಂದು ಕೃತಿ ಎಂದರೆ ಜಗತ್ತನ್ನು ಬೆಳಗಿಸಿ ಮಾರ್ಗದರ್ಶಕನಾಗುವ ಸೂರ್ಯನಂತೆ.

ಸಕಾರಿಯಾ ನದಿಯ ದಡದಲ್ಲಿ ಗ್ರೀಕ ಸೈನ್ಯವಿದೆ. ಮುಸ್ತಾಫಾನು ಅನೇಕ ತಿಂಗಳುಗಳ ವರೆಗೆ ಸರ್ವಸನ್ನಾಹುವನ್ನು ಮಾಡಿಕೊಂಡು ಇಂದು ಕೊನೆಯ ಯುದ್ಧವನ್ನು ಹೂಡುವವನಿದ್ದಾನೆ. . ಈ ಸಲ ಗೆದ್ದರೆ ತುರ್ಕಸ್ತಾನವು ಉಳಿಯುವುದು ಖಂಡಿತ; ಸೋತರೆ— ಅಥವಾ ಆ ಪ್ರಶ್ನೆಯನ್ನೆ ಕೆಮಾಲನು ಬದಿಗೊತ್ತಿದ್ದಾನೆ. ಸೋಲುವಂತಿಲ್ಲ— ಎಂದು ಹಟತೊಡುತ್ತ ಸೈನಿಕರನ್ನು ಹುರಿದುಂಬಿಸುತ್ತಿದ್ದಾನೆ. ಬೆಳಗಿನ ಜಾವದಲ್ಲಿ ಸ್ವತಃ ದಳದಿಂದ ದಳಕ್ಕೆ ತಿರುಗಾಡುತ್ತ ಎಲ್ಲ ಸಿದ್ಧತೆಯನ್ನೂ ಕೊನೆಯ ಸಲ ನಿರೀಕ್ಷಿಸುತ್ತಿದ್ದಾನೆ. ಸೈನಿಕರ ದೃಷ್ಟಿ ತಮ್ಮ ಪ್ರೀತಿಯ ವೀರನಾಯಕನ ಕುದುರೆಯ ಸವಾರಿಯ ಮೇಲೆ. ಇಷ್ಟರಲ್ಲಿ ಒಮ್ಮೆಲೆ ಕೋಲಾಹಲವೆದ್ದಿತು. ಕುದುರೆಯ ಖುರದ ಕೆಳಗೆ ಕಲ್ಲು ಸರಿಯಿತು, ಕುದುರೆ ಜಾರಿತು, ಕೆಮಾಲನು ಉರುಳಿಬಿದ್ದಿರುವನು; ಪಕ್ಕದೆಲುಬು ಮುರಿದಿದೆ! ಸೈನ್ಯದ ತುಂಬ ಹಾಹಾಕಾರ! ಇದೊಂದು ಅಶುಭ ಶಕುನವೆಂದು ಸೈನಿಕರ ಕಾಲ್ಗಳು ಸಡಿಗಿದುವು, ಆಯುಧಗಳು ಜಾರಿದುವು. ಕೆಮಾಲನನ್ನು ಡಾಕ್ಟರರು ಆಸ್ಪತ್ರಿಗೆ ಕರೆದೊಯ್ದರು. ಶಸ್ತ್ರಕ್ರಿಯೆಯನ್ನು ಮಾಡಿದರು. ಕೆಮಾಲನು ೨–೩ ದಿವಸ ಹಾಸಿಗೆಯನ್ನು ಬಿಟ್ಟೇಳಕೂಡದೆಂದು ಕಟ್ಟಪ್ಪಣೆ ವಿಧಿಸಿವರು. ಇತ್ತ ಯುದ್ಧವು ಪ್ರಾರಂಭವಾಯಿತು. ಸೈನಿಕರ ಹುರುಪು ಬಾಡಿದೆ. ನಾಯಕನಿಗೆ ಅಶುಭ ಶಕುನವಾದುದೆ ಅವರ ಕಣ್ಣುಕಟ್ಟಿ ನಿಂತಿದೆ. . ಗ್ರೀಕ ಸೈನಿಕರು ರಭಸದಿಂದ ಮುಂದೆ ಸುಗ್ಗುತ್ತಿದ್ದಾರೆ. . ಇಷ್ಟರಲ್ಲಿ ಒಮ್ಮೆಲೆ ತುರ್ಕದಳದಲ್ಲಿ ಒಂದು ಆನಂದೋದ್ಗಾರದ ಜಯಘೋಷ! ಸೈನಿಕರು ತಿರುಗಿ ನೋಡಿದರು. ಕುದುರೆಯ ಮೇಲೆ ಕೆಮಾಲನ ಸವಾರಿ! ಪಕ್ಕದೆಲುಬನ್ನು ಫಲಕಗಳಿಂದ ಕಟ್ಟಿಕೊಂಡರೂ, ಅತ್ಯಂತ ವೇದನೆಯಿಂದ ಶರೀರವು ಮುದುಡಿ ಮುರಿದಂತೆನಿಸುತ್ತಿದ್ದರೂ, ಕುದುರೆಯನ್ನೇರಿ ಅತ್ತಿಂದಿತ್ತ ತಿರುಗಾಡುತ್ತ ಸೈನಿಕರನ್ನು ಹುರಿದುಂಬಿಸುತ್ತಿದ್ದಾನೆ! ಬೆಳಗಿನಲ್ಲಿ ಕುದುರೆಯು ಕಾಲುಜಾರಿದ ಸ್ಥಳಕ್ಕೆ ಬಂದು ನಿಂತು 'ಇಲ್ಲಿ ನನ್ನ ಪಕ್ಕದೆಲುಬು ಮುರಿದಿದೆ, ಇದೇ ಸ್ಥಳದಲ್ಲಿ ಶತ್ರುಗಳ ಬೆನ್ನೆಲುಬನ್ನು ಮುರಿಯೋಣ, ಏಳಿರಿ, ಏಳಿರಿ' ಎಂದು ಸಂದೇಶವನ್ನು ಕಳುಹಿಸುತ್ತಲಿದ್ದಾನೆ.

ಕೆಮಾಲನು ಮುಂದಾಳಾಗಿ ಸಾಗುವಾಗ ಅವನಿಗೆ ತನ್ನ ಜೀವದ ಪರಿವೆಯಾದರೂ ಇರುತ್ತಿದ್ದಿತೊ ಇಲ್ಲವೊ ಎಂದು ಎಷ್ಟೋ ಸಂದರ್ಭಗಳಲ್ಲಿ ಸಂದೇಹಪಡುವಂತಿದೆ. ಸಾಮಾನ್ಯಬುದ್ಧಿಯುವರಾದ ಸೈನಿಕರಿಗೆ ಕೆಮಾಲನು ದೈವೀಮಾನವನೆಂದು ತೋರಿರಬಹುದು. ಆದರೆ ಸ್ವತಃ ಕೆಮಾಲನಿಗೆ ತಾನು ದೈವೀಮಾನುಷ, ಅವತಾರಪುರುಷ, ದೇವನ ಸಂದೇಶವನ್ನು ಸಾರುವವ ಮುಂತಾದ ಅಲ್ಪಸಂಸ್ಕೃತಿಯ ವಿಚಾರಗಳಿದ್ದಿಲ್ಲವೆಂಬುದನ್ನು ಅವನ ಮಾತುಗಳಿಂದಲೆ ತಿಳಿಯಬಹುದು. ದೇವನ ಹೆಸರಿನಿಂದ ನಾಯಕತ್ವವನ್ನು ವಹಿಸಿದ ಕಾಝಿ ಮೊದಲಾದವರ ಬಗ್ಗೆ ಅವನಿಗೆ ಯಾವ ವಿಚಾರಗಳಿದ್ದುವೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ತಾನು ಅವತಾರಪುರುಷನೆಂದರೆ ಕೆಮಾಲನಿಗೆ ಅಪಮಾನವೆನಿಸಬಹುದಿತ್ತೆಂದು ಖಂಡಿತವಾಗಿ ಹೇಳಬಹುದು. ಕೆಮಾಲನು ಮಾನವನು, ಮಾನವನೆಂಬ ಅಭಿಮಾನವಿದ್ದಿತು ಅವನಿಗೆ; ತನ್ನ ದೇಶಬಾಂಧವರೂ ಮಾನವರೆನಿಸಬೇಕು, ಇದ್ದ ಶಕ್ತಿಗಳ ಉಪಯೋಗವನ್ನರಿತುಕೊಂಡು ಸೃಷ್ಟಿಯಲ್ಲಿ ಪ್ರಭುತ್ವದಿಂದ ಸೌಖ್ಯದಿಂದ ಬಾಳಬೇಕು, ಪಶುಗಳಂತೆ ಅಜ್ಞಾನ-ದಾರಿದ್ರ್ಯ-ಪಾರತಂತ್ರ್ಯಗಳಿಗೆ ತುತ್ತಾಗಬಾರದು ಎಂದು ಅವನ ಆಸೆ; ಕೆಮಾಲನು ಮಾನವನು, ಮಾನವೀಯತೆಯ ಯೋಗ್ಯತೆಯನ್ನರಿತ ಮಾನವನು, ಕರ್ತವ್ಯದಕ್ಷನಾದ ಮಾನವನು, ಕರ್ತವ್ಯಜ್ಞಾನವುಳ್ಳ ಮಾನವನು. ಜೀವದ ಹಂಗುದೊರೆವ ವೃತ್ತಿ ಅವನದಲ್ಲ; ಕರ್ತವ್ಯವನ್ನು ನೆರವೇರಿಸುವಾಗ ಜೀವ ಕಳೆದರೆ ಅದರ ಗೊಡವೆ ಅವನಿಗಿಲ್ಲ; ತನ್ನದು ಯೋಗ್ಯತೆಯ ಜೀವ, ಅದು ಬಹುದಿವಸ ಬಾಳಬೇಕೆಂಬ ಹಟ; ಸಾಯಕೂಡದು ಎಂಬ ಹಟ; ಸಾಯಕೂಡದು ಎಂದರೆ ಬಾಳುವ ಯೋಗ್ಯತೆಯನ್ನು ಪಡೆಯುವುದು, ಬಾಡುವ ದೇಹವನ್ನು ಅಡಗಿಸುವದಲ್ಲ. ಅಷ್ಟೊಂದು ಜೀವದ ಹಟ ಇದ್ದುದರಿಂದಲೆ ಕೆಮಾಲನು ಎಂತೆಂತಹ ಅಪಾಯಗಳಿಂದ ಪಾರಾಗಿರಬಹುದು. ಮಹಾಯುದ್ಧದ ಗ್ಯಾಲಿಪೋಲಿ ಕದನದ ವೇಳೆಗೆ ಒಮ್ಮೆ ಕೆಮಾಲನು ಒಂದು ತೋಡಿ ( trench ) ನ ಮುಂದೆ ಒಡ್ಡಿದ ಮಣ್ಣುದಿನ್ನೆಯ ಮೇಲೆ ಕುಳಿತಿದ್ದನು. ಎದುರು

ಶತ್ರುಗಳನ್ನು ನಿರೀಕ್ಷಿಸುತ್ತಿದ್ದಾನೆ. ಇಷ್ಟರಲ್ಲಿ ಒಂದು ಗುಂಡು ಹಾರಿ ಬಿದ್ದು ದಿನ್ನೆಯ ಬದಿಗೆಯೆ ಸಿಡಿಯಿತು. ಇಬ್ಬರು ಸೈನಿಕರು ಓದರ ಬೇಕೆಂದರೆ ಹೆದರಿಕೆಯಿಂದ ದನಿ ಸಾಲದೆ ಹಾಗೆಯೆ ಬಾಯ್ದೆರೆದು ನಿಂತರು. ಮರುಗಳಿಗೆಯಲ್ಲಿ ಮತ್ತೊಂದು ಗುಂಡು ಮೊದಲಿಗಿಂತ ಕೆಮಾಲನ ಸಮೀಪಕ್ಕೆ ಬಿದ್ದು ಸಿಡಿಯಿತು. ಕೆಮಾಲನಂತೂ ಕದಲಲಿಲ್ಲ. ಈ ಸಲ ಮಾತ್ರ ಅವನನ್ನು ಒದರಬೇಕೆಂದು ಸೈನಿಕರು ಧೈರ್ಯತಂದುಕೊಳ್ಳು ವಷ್ಟರಲ್ಲಿ ಮೂರನೆಯ ಗುಂಡು ಕೆಮಾಲನ ತೀರ ಸಮೀಪಕ್ಕೆ ಬಿದ್ದು ಸಿಡಿಯಿತು. ಇನ್ನೊಂದು ಗುಂಡು ಹಾರಿಬಂದರೆ ಕೆಮಾಲನನ್ನೆ ಖಂಡಿತ ವಾಗಿ ಹಾರಿಸುತ್ತಿತ್ತು. ಸೈನಿಕರು 'ಜೋಕೆ! ಜೋಕೆ! ಮರೆಯಾಗು!' ಎಂದು ಚೀರಿದರು. ಕೆಮಾಲನು ಸಮಾಧಾನದಿಂದ ಅವರ ಕಡೆಗೆ ಮುಖ ತಿರುಗಿಸಿ 'ಇಲ್ಲಿಂದ ಓಡಿಹೋಗಿ ನಿಮಗೊಂದು ಕೆಟ್ಟ ಉದಾಹರಣೆ ಯನ್ನು ಹಾಕಿಕೊಡಲಿಕ್ಕೆ ಇನ್ನು ಸಮಯವೆ ಇಲ್ಲ' ಎಂದು ಕುಳಿತ ಲ್ಲಿಯೆ ಕುಳಿತುಬಿಟ್ಟನು! ಇಷ್ಟರಲ್ಲಿ ಇನ್ನೊಂದು ಗುಂಡು ಹಾರಿತು, ಸೈನಿಕರ ಜೀವ ಹಾರಿದಂತಾಯಿತು, ಹೊಗೆ ಎದ್ದಿತು, ದೂಳು ಮುಸು ಕಿತು, ಮುಂದೆ ಎಲ್ಲವೂ ಸ್ಪಷ್ಟವಾದ ಮೇಲೆ ನೋಡಲು ಕೆಮಾಲನು ಕೂದಲ ಕೂಡ ಕೊಂಕದೆ ಕುಳಿತಿದ್ದಾನೆ! ಶತ್ರುಗಳ ಕಡೆ ಮೂರು ತೋಫುಗಳಿದ್ದುವೆಂದೂ, ನಾಲ್ಕನೆಯದಿದ್ದರೆ ಕೆಮಾಲನ ಜೀವಕ್ಕೆ ಅಪಾ ಯವಾಗಬಹುದಾಗಿತ್ತೆಂದೂ, ನಾಲ್ಕನೆಯ ಸಲ ಹಾರಿದ ಗುಂಡು ಮೊದ ಲನೆಯ ತೋಫಿನಿಂದಲೆ ಬಂದುದರಿಂದ ದೂರದಲ್ಲಿಯೆ ಸಿಡಿಯಿತೆಂದೂ ಆ ಮೇಲೆ ತಿಳಿದು ಬಂದರೂ ಸೈನಿಕರಿಗೇನೊ ಇದೊಂದು ದೇವನ ಲೀಲೆ ಎನಿಸಿಬಿಟ್ಟಿತು. ಆದರೆ ಎದುರು ಶತ್ರುವಾದ ಮಾನವನ ತೋಫುಗಳ ಲೀಲೆ ಕೆಮಾಲನಿಗೆ ಗೊತ್ತಿದ್ದಿತು, ತಾನು ಸಾಯುವದಿಲ್ಲವೆಂಬ ಹಟವೂ ಇದ್ದಿತು.

ಜನರ ದೃಷ್ಟಿಯಿಂದ ಕೆಮಾಲನು ದೈವೀ 'ಗಾಝಿ' ಎನಿಸಿದನು, ಆದರೆ ಗಾಝಿ (=ಜಯಶೀಲ) ಆಗುವ ಯೋಗ್ಯತೆಯು ಕೆಮಾಲನಲ್ಲಿಯೆ ಇದ್ದಿತೆಂದು ಹೇಳಬಹುದು. ಯಾವುದನ್ನೆ ಮಾಡುವ ಮುಂಚಿತ ಅದರ

ವಿಷಯುವಾಗಿ ಸಾರಾಸಾರ-ವಿಚಾರವನ್ನು ಮಾಡುವನು, ಸ್ವತಃಕ್ಕೆ ಸಮಾಧಾನವಾದರೆ ಅದನ್ನು ಮಾಡಬೇಕೆಂಬ ನಿರ್ಣಯ ಮಾಡುವನು, ಆ ಮೇಲೆ ತನ್ನ ಕೆಲಸಕ್ಕೆ ಸಹಾಯುವು ಯಾರಿಂದಾಗಬಹುದು ವಿರೋಧವು ಯಾರಿಂದ ಬರಬಹುದೆಂಬುದನ್ನರಿತುಕೊಳ್ಳುವನು, ವಿರೋಧವು ಸಾತ್ವಿಕ ಹಟದಿಂದ ಜೋರಾದರೆ ತನ್ನ ನಿರ್ಣಯುವನ್ನು ಯೋಗ್ಯವೇಳೆಯ ವರೆಗೆ ಧೈರ್ಯದಿಂದ ತಡೆಯುುವನು, ವಿರೋಧವು ಪೊಳ್ಳಾಗಿದ್ದರೆ ಅಸತ್ಯ-ಅಸೂಯೆಗಳಿಂದ ಕೂಡಿದ್ದಾಗಿದ್ದರೆ ಆ ವಿರೋಧಿಗಳನ್ನು ಅವಶ್ಯವೆನಿಸಿದರೆ ಬಲದಿಂದ ಬಗ್ಗುಬಡೆಯುುವನು. ರಣಾಂಗಣದ ಮೇಲೆಯಾಗಲಿ ಮಹಾ ರಾಷ್ಟ್ರೀಯ ಸಭೆಯಲ್ಲಾಗಲಿ ಕೆಮಾಲನು ಇದೇ ಮನೋವೃತ್ತಿಯನ್ನು ತಪ್ಪದೆ ತಾಳುತ್ತಿದ್ದನು. ಜಯದಿಂದಾಗಲಿ ಸ್ತುತಿಯಿಂದಾಗಲಿ ಅವನು ಮೈಮರೆಯುುತ್ತಿರಲಿಲ್ಲ, ವಿರೋಧ-ಅಪಜಯ-ನಿಂದೆಗಳಿಂದ ಸಿಟ್ಟಿಗೆದ್ದು ಬುದ್ಧಿಯನ್ನು ಕಳೆದುಕೊಳ್ಳುತ್ತಿರಲಿಲ್ಲ. ಅದಕಾಗಿಯೆ ಅವನಿಗೆ ಕೈಹಾಕಿ ದಲ್ಲೆಲ್ಲ ಜಯುಮಾಲೆಗಳೇ ಕೈತುಂಬ ದೊರಕುತ್ತಿದ್ದುವು. ಅವನ ಇಡಿಯ ಜೀವನದಲ್ಲಿ ಅಪವಾದವೆಂದು ಒಂದೇ ಒಂದು ವಿಷಯದಲ್ಲಿ ಅವನ ಹಟ ಸಾಧಿಸಲಿಲ್ಲ. ಗ್ರೀಕರನ್ನು ಓಡಿಸಿ ಕೆಮಾಲನು ವಿಜಯಯಾತ್ರೆಯಿಂದ ಕಾನಸ್ಟಾಂಟಿನೋಪಲಿಗೆ ಬಂದಾಗ ಒಂದು ದಿನ ಲತೀಫಾ ಎಂಬ ಯುವತಿಯು ಅವನ ಕಡೆ ಬಂದಳು. ನಗರದಲ್ಲೆಲ್ಲ ಯುದ್ಧದ ಪರಿಣಾಮ ವಾಗಿ ಅವ್ಯವಸ್ಥೆ ಇದ್ದುದರಿಂದ ಅವಳು ಊರಹೊರಗಿನ ತನ್ನ ಶಾಂತ ಮತ್ತು ವಿಶಾಲವಾದ ಭವನದಲ್ಲಿ ಕೆಮಾಲನು ಬಂದು ವಾಸಮಾಡ ಬೇಕೆಂದು ಕೇಳಿಕೊಂಡಳು. ಕೆಮಾಲನು ಅಲ್ಲಿ ಹೋಗಿ ವಾಸಮಾಡು ವಾಗ ಅವನ ಆರೈಕೆ-ಆದರ-ಸತ್ಕಾರಗಳನ್ನು ಲತೀಫಾ ಇವಳು ಅತ್ಯಂತ ಸ್ನೇಹಪೂರ್ವಕವಾಗಿ ಮತ್ತು ಸುಖಕರವಾಗಿ ಮಾಡಿದಳು. ಲತೀಫಾ ಇವಳು ಯುರೋಪೀಯ ಶಿಕ್ಷಣವನ್ನು ಪಡೆದುದರಿಂದ ಸ್ವಭಾವದಿಂದ ದಿಟ್ಟೆಯಾಗಿದ್ದಳು. ವಿಚಾರಗಳಿಂದ ಉದಾರಮತವಾದಿಯಾಗಿದ್ದಳು. ಕೆಮಾಲನಿಗೆ ಅವಳಲ್ಲಿ ಅನುರಾಗವು ಹುಟ್ಟಿತು, ಆದರೆ ಅವಳು ಮದಿವೆ ಯಾಗದೆ ತನ್ನ ಕೂಡ ಇರಬೇಕೆಂದು ಕೇಳಿದನು.

'ಮದಿವೆಯ ಸಂಪ್ರದಾಯದಲ್ಲಿ ನನ್ನ ವಿಶ್ವಾಸವಿಲ್ಲ. ಗಡ್ಡದ ಮುದುಕರು ಒರಟುವ ಗೊಡ್ಡು ಮಾತುಗಳ ಸಾಕ್ಷಿಯಾಗಿ ಮದಿವೆ ಯಾಗುವುದೆಂದರೆ ಬುದ್ಧಿವಂತರಿಗೆ ಅಪಮಾನ. ಇದಲ್ಲದೆ ದೇಶಕಾರ್ಯವು ಮುಗಿಯುವವರೆಗೆ ಮದಿವೆಯಾಗಬಾರದೆಂದು ನನ್ನ ಪ್ರತಿಜ್ಞೆ ಇದೆ' ಎಂದನು;

ಅವಳೂ ಹೇಳಿದಳು, 'ಮದಿವೆಯಾಗದೆ ಸಂಸಾರವನ್ನು ಮಾಡ ಬಾರದೆಂದು ನನ್ನದೂ ಪ್ರತಿಜ್ಞೆ ಇದೆ.'

ಕೊನೆಗೆ ಕೆಮಾಲನೆ ಸೋತನು, ಮದಿವೆಯಾದನು, ಆದರೆ ಮದಿವೆಯೂ ಅವನಿಗೊಂದು ಸೋಲು ಆಯಿತು. ಇಬ್ಬರೂ ಹಟದವರು, ಇಬ್ಬರೂ ನೇತೃತ್ವವನ್ನು ವಹಿಸುವ ಯೋಗ್ಯತೆ ಇದ್ದವರು. ಸ್ವಲ್ಪಾವಧಿ ಯಲ್ಲಿಯೆ ತೀವ್ರ ಮತಭೇದವಾಗಿ ಇವರ ವಿವಾಹವಿಚ್ಛೇದವಾಯಿತು. ಮನೆಯ ಹೆಂಡತಿಯನ್ನು ಕಾಯ್ದುಕೊಳ್ಳುವ ಕಲೆ ಇಲ್ಲದಿದ್ದರೂ, ದೇಶವನ್ನು ಕಾಯ್ದುಕೊಂಡನು; ಹೆಂಡತಿಯ ಪ್ರೇಮವನ್ನು ದೊರಕಿಸ ದಿದ್ದರೂ, ಜನತೆಯ ಭಕ್ತಿಯನ್ನು ದೊರಕಿಸಿದನು; ತನ್ನ ಸಂಸಾರವನ್ನು ಸಾಗಿಸದಿದ್ದರೂ, ತನ್ನ ದೇಶಬಾಂಧವರ ಲಕ್ಷಾವಧಿ ಸಂಸಾರಗಳಿಗೆ ಶಾಂತಿಯನ್ನೂ ಸುಖವನ್ನೂ ತಂದುಕೊಟ್ಟನು. ಚಿಕ್ಕವನಿದ್ದಾಗ ಅವನಿಗೆ ಹೆಂಡತಿಯನ್ನು ಮಾಡಿಕೊಂಡು ಅವಳ ಪ್ರೇಮವನ್ನು ಸಂಪಾದಿಸಬೇಕು ಎಂಬ ಧ್ಯೇಯವಿದ್ದಿರಲಿಲ್ಲ; ಎಲ್ಲರಿಗಿಂತಲೂ ಮೇಲಿನವನಾಗಬೇಕು, ದೇಶವನ್ನೂ ಮೇಲ್ದಾಣಕ್ಕೆ ಮುಟ್ಟಿಸಬೇಕು ಎಂಬ ಧ್ಯೇಯ ಮಾತ್ರ ವಿದ್ದಿತು. ಯಾವನೊಬ್ಬನ ಜೀವನವನ್ನು ಅವನ ಧ್ಯೇಯಕ್ಕನುಸರಿಸಿಯೆ ಪರೀಕ್ಷಿಸಬೇಕಲ್ಲವೆ? ಹಾಗೆ ಪರೀಕ್ಷಿಸಿದಲ್ಲಿ ಕೆಮಾಲನು ನಿಜವಾಗಿಯೆ ಗಾಝಿ (ಜಯಶೀಲ) ಎಂದು ಹೇಳಬಹುದು.

---

# ೧ ಪ್ರಜಾಪ್ರಭುತ್ವದ ಅಂಕುರ

ಜಗತ್ತಿನಲ್ಲಿ ಪ್ರಜಾಪ್ರಭುತ್ವಕ್ಕೆ ಅವಕಾಶವನ್ನುಂಟುಮಾಡಲು (To make the world safe for democracy) ಮಹಾಯುದ್ಧವನ್ನಾಡಬೇಕಾಯಿತೆಂದು ಸಹಾಯಕರಾಷ್ಟ್ರಮುತ್ಸದ್ದಿಗಳು ಹೇಳುತ್ತಿದ್ದರು. ಆ ಯುದ್ಧವು ಮುಗಿದ ಇಪ್ಪತ್ತುವರುಷಗಳಲ್ಲಿಯೆ ಆ ಮಾತು ದಂತಕಥೆ ಏನೊ ಎಂದು ಎನಿಸುವಂತಿದೆ. ಮಹಾಯುದ್ಧದಲ್ಲಿ ಭಾಗವನ್ನು ತೆಗೆದುಕೊಂಡ ಅನೇಕ ರಾಷ್ಟ್ರಗಳಲ್ಲಿ ಇಂದು (ಉಳಿದ ರಾಷ್ಟ್ರಗಳಲ್ಲಿರುವಂತೆ) ತೋರಿಕೆಗೆ ಕೂಡ ಪ್ರಜಾಪ್ರಭುತ್ವದ ಆಡಳಿತವಿಲ್ಲ. ರಶಿಯಾದಲ್ಲಿ ಬಡವರ, ಕೂಲಿಕಾರರ ಹೆಸರಿನಿಂದಲೂ ಹಿತಕ್ಕಾಗಿಯೂ ಕ್ರಾಂತಿಯಾಗಿ ಇಂದು ಸ್ಟಾಲಿನ ಎಂಬುವವನ ಏಕಪ್ರಭುತ್ವವು ವ್ಯವಹಾರದಲ್ಲಿ ನಡೆದಿದೆ. ಇಟಲಿಯಲ್ಲಿ ಸಮತಾವಾದಿಗಳೂ ಸಾಮ್ರಾಯಿಕತಾವಾದಿಗಳೂ ಕ್ರಾಂತಿಯನ್ನೆಬ್ಬಿಸಿ ದೇಶದಲ್ಲಿ ಅವ್ಯವಸ್ಥೆಯನ್ನು ಹರಡಿ ಮುಸೋಲಿನಿ ಎಂಬ ಮಹಾಪುರುಷನಿಗೆ ಅನಿಯಂತ್ರಿತಪ್ರಭುತ್ವವನ್ನು ನಡೆಸಲು ಅವಕಾಶವನ್ನುಂಟುಮಾಡಿದರು; ಇಂದಿಗೂ ಇಟಲಿ ಎಂದರೆ ಮುಸೋಲಿನಿ ಎಂಬ ಅರ್ಥವು ವ್ಯವಹಾರದಲ್ಲಿದೆ. ಜರ್ಮನಿಯಲ್ಲಿ ಪ್ರಜಾಪ್ರತಿನಿಧಿತ್ವವು ಸುಮಾರು ಹದಿನೈದುವರುಷಗಳವರೆಗೆ ಹಾಗೂ ಹೀಗೂ ಹೆಳವನಂತೆ ಸಾಗಿದಾಗ ಹಿಟ್ಲರನು ಬಂದು ಅದನ್ನು ನೂಕಿ ತನ್ನ ಸರ್ವಾಧಿಕಾರಿತ್ವವನ್ನು ಸ್ಥಾಪಿಸಿದನು. ಸ್ಪೇನದಲ್ಲಿ ಬಹುದಿವಸಗಳಿಂದ ಯಾರ ಅಧಿಕಾರವೂ ನಡೆದೇ ಇಲ್ಲ. ತುರ್ಕಸ್ತಾನದಲ್ಲಿ ಸುಮಾರು ೧೯೨೨ರಿಂದ ಇಂದಿನವರೆಗೆ ಮುಸ್ತಾಫಾ ಕೆಮಾಲ ಪಾಶಾನ ಸರ್ವಾಧಿಕಾರಿತ್ವವೆ ನೆಲೆಗೊಂಡಿದೆ. ಈ ದೃಷ್ಟಾಂತಗಳೆಲ್ಲ ನಮ್ಮ ಕಣ್ಣನ್ನು ತಿವಿಯುತ್ತಿರುವಾಗ ಪ್ರಜಾಪ್ರಭುತ್ವದ (Democracy) ಆಳಿಕೆಯು ಪ್ರಚಾರದಲ್ಲಿದೆ ಎಂದು ಹೇಳುವ ಧೈರ್ಯ ಯಾವನಿಗಾಗಬಹುದು? ಒಬ್ಬನ ಅನಿಯಂತ್ರಿತಾಧಿಕಾರದ ಕೆಳಗೆ ಪ್ರಜೆಗಳು ದಾಸ್ಯದಲ್ಲಿಯೆ ಕೊಳೆಯುತ್ತಿದ್ದಾರೆ

ಎಂದು ಹೇಳುವಂತಿವೆ. ಆದರೂ ತುರ್ಕಸ್ತಾನದ ವಿಷಯವಾಗಿ ಮಾತ ನಾಡುವಾಗ ಕೆಮಾಲ ಪಾಶಾನು ಹಿಟ್ಲರ-ಮುಸೋಲಿನಿಯವರಂತೆ ಪ್ರಜೆಗಳನ್ನು ದಾಸ್ಯದಲ್ಲಿ ಕೊಳೆಸುತ್ತ ಅನಿಯಂತ್ರಿತನಾಗಿರಬಹುದೆ- ಎಂದು ಸಂಶಯಬರುವಂತಿದೆ. ತಾರುಣ್ಯದಿಂದಲೂ ಮುಸ್ತಾಫಾನು ಸುಲ್ತಾನನ ಅಧರ್ಮ-ಅನ್ಯಾಯ-ಅನಿಯಂತ್ರಿತಾಧಿಕಾರಗಳ ವಿರುದ್ಧ ಹೇಗೆ ಬಂಡಾಯವನ್ನೆಬ್ಬಿಸುವ ಯೋಜನೆಗಳಲ್ಲಿ ತೊಡಗಿದ್ದನೆಂದೂ, ಪರಕೀಯರ ಪ್ರಭುತ್ವವು ತನ್ನ ದೇಶದ ಆಳಿಕೆಯಲ್ಲಿ ನಡೆಯುತ್ತಿರುವುದು ಅವನಿಗೆ ಎಷ್ಟು ಅಸಹ್ಯವೆನಿಸಿತ್ತೆಂದೂ, ದೇಶದ ಸ್ವಾತಂತ್ರ್ಯಕ್ಕಾಗಿ ಅವನು ಹೇಗೆ ಜೀವದ ಹಂಗುದೊರೆದು ಕಾದಿದನೆಂದೂ ಇದುವರೆಗಿನ ಇತಿಹಾಸ ಸಂಗತಿಗಳಿಂದ ತಿಳಿಯುವುದು. ಈ ವಿಚಾರಗಳಿಂದ ಕಾದಿದ ಕೆಮಾಲನು ಕೊನೆಗೆ ತನ್ನವರನ್ನೆ ತನ್ನ ದಾಸ್ಯದಲ್ಲಿರಿಸುವಷ್ಟು ಸ್ವಾರ್ಥಿ ಇಲ್ಲವೆ ಅಧಿಕಾರಮದಾಂಧನಾದನೆ? 'ನಾನು ಎಷ್ಟೋ ರಾಷ್ಟ್ರಗಳನ್ನು ಕಂಡಿದ್ದೇನೆ.. ಆದರೂ ನನ್ನ ದೇಶಬಾಂಧವರ ಆತ್ಮಬಲವು ವಿುಕ್ಕ ಎಲ್ಲರ ಆತ್ಮಬಲಕ್ಕಿಂತ ಶ್ರೇಷ್ಠವಾದುದು ಎಂದು ನಾನು ಆಣೆ ಇಟ್ಟು ಹೇಳಬಲ್ಲೆ.. ನನ್ನ ಜನರಲ್ಲಿ ತಮ್ಮದನ್ನು ನಡೆಸುವ ಶಕ್ತಿ ಬರುವವರೆಗೆ ನಾನು ಅವರ ಮುಂದಾಳು; ಒಮ್ಮೆ ಆ ಶಕ್ತಿ ಅವರಲ್ಲಿ ಬಂದಿತೆಂದರೆ ನಾನು ನನ್ನ ಅಧಿಕಾರಾಸನದಿಂದ ಕೆಳಗಿಳಿಯುವೆ..' ಎಂದು ಕೆಮಾಲನೆ ಒಂದೆಡೆ ಸಂದೇಶವನ್ನು ಕೊಟ್ಟಿದ್ದಾನೆ. ವಿುಕ್ಕ ಸರ್ವಾಧಿಕಾರಿಗಳಂತೆ ಕೆಮಾಲನು ತನ್ನವರ ಸ್ವಾತಂತ್ರ್ಯದ ಪಾದಪೀಠವನ್ನು ಮಾಡುವ ವೃತ್ತಿ ಯವನಲ್ಲ ಎನಲು ಅವನ ಅನೇಕ ಕೃತಿಗಳೇ ಸಾಕ್ಷಿಯಾಗಿವೆ. ಸರ್ವಾಧಿ ಕಾರಿಯು ತನ್ನ ಉನ್ಮತ್ತ ಉಚ್ಚಸ್ಥಾನವನ್ನು ಭದ್ರವಾಗಿರಿಸಿಕೊಳ್ಳಲು ಯಾವಾಗಲೂ ಎರಡು ಉಪಾಯಗಳನ್ನು ಸಾಧಿಸಿಕೊಳ್ಳುವನು: (೧) ಹೊತ್ತು ಬಂದಾಗೆಲ್ಲ ಯುದ್ಧವನ್ನಾಡಿ ಜನರ ಲಕ್ಷ್ಯವೆಲ್ಲ ತನ್ನ ಜಯದ ಕಡೆ ಇಲ್ಲವೆ ಯುದ್ಧದ ಕಡೆ ಹೋಗುವಂತೆ ಮಾಡುವುದು. ತಾನೇ ಸರ್ವಗುಣಸಂಪನ್ನ, ಲೋಕೈಕವೀರ, ಆರ್ತತ್ರಾಣ, ದೇಶದ ಸಂರಕ್ಷಣವು ತನ್ನಿಂದಲೆ ಎಂದು ತೋರಿಸುವುದಕ್ಕಾಗಿ ಯುದ್ಧದ

ನೆವದಿಂದ ದೇಶವನ್ನು ಯಾವಾಗಲೂ ಗಂಡಾಂತರದಲ್ಲಿರಿಸುವುದು ಸ್ವಾರ್ಥ ಪರದೋನ್ಮತ್ತ ಸರ್ವಾಧಿಕಾರಿತ್ವದ ಯುಕ್ತಿ. (೨) ದೇಶದ ಜನರನ್ನು ಹೆಚ್ಚಾಗಿ ಅಜ್ಞಾನದಲ್ಲಿಡುವುದು. ಮುಸ್ತಾಫಾ ಕೆಮಾಲನ ಜೀವನ ದಲ್ಲಿ ಇವೆರಡೂ ಉಪಾಯುಗಳು ಕಂಡು ಬರುವುದಿಲ್ಲ. ಕೆಮಾಲನು ಸರ್ವಾಧಿಕಾರಿಯಾಗುವ ಮುಂಚೆಯೆ ಯುದ್ಧಗಳನ್ನಾಡಿ ಜಯಶೀಲ ನಾಗಿದ್ದನು; ಸರ್ವಾಧಿಕಾರಿಯಾದ ಮೇಲೆ ಯುದ್ಧವನ್ನೆ ಹೂಡಿಲ್ಲ ಎನ ಬಹುದು; ಇದಲ್ಲದೆ ಹಿಟ್ಲರ–ಮುಸೋಲಿನಿಯರಂತೆ ಕೆಮಾಲನು ಸಾಮ್ರಾಜ್ಯಲಾಲಸೆಯನ್ನು ತೋರಿಸಿಲ್ಲ. ಗ್ರೀಕರೊಡನೆ ಯುದ್ಧವನ್ನಾ ಡುವ ವೇಳೆಗೆ ಸಂಧಾನವನ್ನು ಮಾಡಬಂದ ಫ್ರೆಂಚಸರಕಾರದ ಪ್ರತಿನಿಧಿಗೆ ಅವನು ಹೇಳಿದ ಮಾತುಗಳು ಮನನೀಯವಾಗಿವೆ. 'ಸೀರಿಯಾ ದೇಶ ವನ್ನು ತೆಗೆದುಕೊಳ್ಳಿರಿ, ಅರಬಸ್ತಾನವನ್ನೂ ನೀವೇ ತೆಗೆದುಕೊಳ್ಳಿರಿ. ಆದರೆ ತುರ್ಕಸ್ತಾನಕ್ಕೆ ನಿಮ್ಮ ನೆರಳು ಸೋಂಕುವುದು ಬೇಡ. ಪ್ರತಿ ಯೊಂದು ರಾಷ್ಟ್ರಕ್ಕೆ ಯಾವ ಅಧಿಕಾರವಿದೆಯೊ ಅದು ನಮಗೂ ಇದೆ ಎಂದು ನಮ್ಮ ಹಟ, ಆದೆಂದರೆ ಸ್ವಾತಂತ್ರ್ಯದಲ್ಲಿ ಬಾಳುವ ಅಧಿಕಾರ. ತುರ್ಕಸ್ತಾನವು ನಮ್ಮದು, ತುರ್ಕಸ್ತಾನವಷ್ಟೆ ನಮ್ಮದು. ಒಂದು ಅಂಗುಲ ಕಡಮೆಯಾದರೆ ಕೂಡದು, ಒಂದು ಅಂಗುಲ ಹೆಚ್ಚು ನಾವು ಬೇಡೆವು.' ಸರ್ವಾಧಿಕಾರಿತ್ವದ ಎರಡನೆಯ ಉಪಾಯವೂ ಕೆಮಾಲ ನಲ್ಲಿಲ್ಲ. ತನ್ನ ಅಧಿಕಾರವು ನೆಲೆಗೊಂಡಂದಿನಿಂದ ಕೆಮಾಲನು ತನ್ನ ದೇಶದಲ್ಲಿ ಪ್ರತಿಯೊಬ್ಬನಿಗೂ ಶಿಕ್ಷಣವನ್ನೂ ಜ್ಞಾನಸಾಧನೆಯನ್ನೂ (ಅವಶ್ಯವಿದ್ದಲ್ಲಿ) ಒತ್ತಾಯದಿಂದ ಕೊಡಿಸುತ್ತಲಿದ್ದಾನೆ. ಕೇವಲ ತನ್ನ ವೈಭವವನ್ನೂ ಅಧಿಕಾರವನ್ನೂ ಮೆರೆಯಿಸಲು, ಅದಕಾಗಿ ಏಕ್ಯವ ರನ್ನೆಲ್ಲ ದಾಸ್ಯದಲ್ಲಿರಿಸಲು ಕೆಮಾಲನು ಮುಂದೆ ಬಂದಿದ್ದಾನೆಂದು ಹೇಳು ವಂತಿಲ್ಲ. ಹಾಗೆ ಹೇಳುವ ಜನರೂ ಇದ್ದಾರೆ. ಪರಕೀಯರು ಹೊಟ್ಟೆ ಕಿಚ್ಚಿನಿಂದ ಹೇಳಬಹುದೆಂದರೆ, ಕೆಮಾಲನ ಎಷ್ಟೋ ದೇಶಬಾಂಧವರೆ ಹಾಗೆ ಹೇಳಿದ್ದಾರೆ. ಪ್ರಾರಂಭಕ್ಕಂತೂ ಮುಸ್ತಾಫಾನ ಮಹತ್ಕಾ ರ್ಯಕ್ಕೆ ಇದೊಂದು ತೊಡಕೇ ಆಯಿತೆನಬಹುದು. ಜಯಶೀಲನಾದ

ಮುಸ್ತಾಫಾನು ಜನರಿಗೆಲ್ಲ ಪ್ರಿಯನಾಗಿದ್ದನು; ಆ ಪ್ರೇಮದ ಸೊಕ್ಕಿನಿಂದಲೂ ಧೈರ್ಯದಿಂದಲೂ ಇವನು ಎಲ್ಲರನ್ನು, ತನ್ನ ಜೊತೆಗಾರರನ್ನು ಮುರಿದು ಅವರ ಎಲಬುಗಳಿಂದ ತನ್ನ ಸಿಂಹಾಸನವನ್ನು ಕೆತ್ತಿಸಬಹುದೆಂದು ಇವನ ಸಹವಾಸದಲ್ಲಿಯೆ ಇದ್ದ ಅನೇಕ ಮುಂದಾಳುಗಳು ಹೆದರಿದ್ದರು; ಅದನ್ನು ತಪ್ಪಿಸಬೇಕೆಂದು ಇವನ ಕೆಲಸಕ್ಕೆ, ಇವನಿಗೆ ಜಯದೊರೆಯುವ ಪ್ರಸಂಗಕ್ಕೆ ಅಡ್ಡಬರಲು ಕೂಡ ಹಿಂದು ಮುಂದೆ ನೋಡಲಿಲ್ಲ. ಗ್ರೀಕ-ಫ್ರೆಂಚ-ಬ್ರಿಟಿಶ ಮುಂತಾದ ಪರಕೀಯರನ್ನೆಲ್ಲ ಹೊಡೆದೋಡಿಸಿ ತುರ್ಕಸ್ತಾನದಲ್ಲಿ ಸ್ವಾತಂತ್ರ್ಯಧ್ವಜವನ್ನು ನಿಲ್ಲಿಸಿದ ಮೇಲೆ ಒಂದು ಸಮಯದಲ್ಲಿ ಹಾಲಿದೆ ಎದೆಬ ಎಂಬ ಮಹಿಳೆ (ಈಕೆ ಕೆಮಾಲನ ಪಕ್ಷಕ್ಕೆ ಸೇರಿದ ಪ್ರತಿಭಾಸಂಪನ್ನೆ) ಕೆಮಾಲನನ್ನು ಹೀಗೆ ಕೇಳಿದಳು;

'ಇನ್ನು ಒಪ್ಪಂದವಾಗುವುದು ಖಂಡಿತ, ಆ ಮೇಲಾದರೂ ಇಷ್ಟೊಂದು ಕಷ್ಟವನ್ನು ಸಹಿಸಿದ ನೀವು ವಿಶ್ರಾಂತಿಯನ್ನು ಪಡೆಯುವಿರಲ್ಲವೆ?'

'ವಿಶ್ರಾಂತಿ!' ಎಂದು ಕೆಮಾಲನು ಆಶ್ಚರ್ಯದಿಂದ ದನಿಯನ್ನೆಳೆದು 'ಗ್ರೀಕರ ಕೂಡ ಕಾದುವುದಾಯಿತು, ಇನ್ನು ನಮ್ಮನಮ್ಮೊಳಗೆ ಕಾದಾಡಬೇಕಲ್ಲವೆ?' ಎಂದನು.

ಹಾಲಿದೆ ಇವಳಿಗೆ ಆಶ್ಚರ್ಯವಾಯಿತು. 'ನಮ್ಮನಮ್ಮೊಳಗೆ ಕಾದಾಡುವುದೇಕೆ?' ಎಂದಳು.

'ನಮ್ಮನಮ್ಮೊಳಗೆ ಕಾದಾಡುವುದೇಕೆ! ಹಾಗೆಂದರೆ ನನ್ನನ್ನು ಅತ್ಯಂತವಾಗಿ ವಿರೋಧಿಸಿದ ಜನರನ್ನು ಮರೆಯಬೇಕೆ?'

ತಾನು ಕಾದಾಡದಿದ್ದರೂ ತನ್ನ ವಿರೋಧಿ ದೇಶಬಾಂಧವರೆ ಕಾದಾಟವನ್ನು ಹೂಡುವರೆಂದು ಕೆಮಾಲನ ಮನವರಿಕೆ. ಇದೇ ಮಾತನ್ನೆ ಕೆಮಾಲನು ತನ್ನ ಜನರಿಗೆ-ಊರೂರಿಗೆ ಸಂಚಾರ ಮಾಡುವಾಗ ಸಭೆ ಸೇರಿಸಿ ನೆರೆದ ಸಾಮಾನ್ಯ ಜನರಿಗೆ- ಹೇಳಿದನು. 'ನಿಮ್ಮ ಸಂಘಟನೆಯನ್ನು ಮುರಿದುಕೊಳ್ಳಬೇಡಿರಿ. ಪರಕೀಯ ಶತ್ರುವು ನಾಶಹೊಂದಿದರೂ

ಯುದ್ಧವಿನ್ನೂ ಮುಗಿದಿಲ್ಲ. ದೇಶದತುಂಬ ದ್ರೋಹಿಗಳಿದ್ದಾರೆ. ಒಳಗಿನಿಂದೊಳಗೆಯೆ ಚುಚ್ಚಿ ಇರಿದು ಕೊಲ್ಲಬೇಕೆನುವವರ ಎಲ್ಲ ಪ್ರಯತ್ನಗಳನ್ನು ನಿಷ್ಫಲಮಾಡುವಂತೆ ಕಲ್ಲೆದೆಯವರಾಗೋಣ, ನಮ್ಮ ದೇಶವನ್ನೂ ಗಟ್ಟಿಗೊಳಿಸೋಣ.'

ಕೆಮಾಲನು ಇಷ್ಟೊಂದು ಒಡನುಡಿದು ಹೇಳುವಾಗಲೆ ಒಳಜಗಳವು ಪ್ರಾರಂಭವಾಗಿತ್ತು. ಸ್ವಾತಂತ್ರ್ಯಯುದ್ಧವು ಮುಗಿಯಿತು; ಸುಲ್ತಾನನನ್ನೆದುರಿಸಿದ ಕ್ರಾಂತಿಯೂ ಯಶಸ್ವಿಯಾಯಿತು; ಇನ್ನು ವಾಡಿಕೆಯಂತೆ ಈ ಸುಲ್ತಾನನನ್ನು ಪದಚ್ಯುತಮಾಡಿ ಇನ್ನೊಬ್ಬ ಆನುವಂಶಿಕ ಸುಲ್ತಾನನನ್ನು ಸಿಂಹಾಸನದಲ್ಲಿರಿಸಬೇಕೆಂದು ಕೆಲವರ ಹಟ. ಸುಲ್ತಾನಿಕೆಯ ಆಳಿಕೆಯಿಂದಲೆ ದೇಶಕ್ಕೆ ಇಂತಹ ಅವನತಿ ಪ್ರಾಪ್ತವಾಗಿತ್ತೆಂದೂ, ಆನುವಂಶಿಕ ಸುಲ್ತಾನಿಕೆಯಿಂದ ಬುದ್ಧಿಶಾಲಿ ಮತ್ತು ಪ್ರಾಮಾಣಿಕ ಸುಲ್ತಾನರೆ ದೊರಕುವರೆಂಬ ಭರವಸೆ ಇಲ್ಲದ್ದರಿಂದ ಸುಲ್ತಾನ ಪದ್ಧತಿಯನ್ನೆ ತೆಗೆದದೊಗೆಯಬೇಕೆಂದೂ ಯಾರಿಗೂ ವಿಚಾರ ಬಂದಿರಲಿಲ್ಲ. ಸುಲ್ತಾನನು ಖಲೀಫನೂ ಆಗಿದ್ದನು. ಸುಲ್ತಾನಿಕೆಯನ್ನೆ ತೆಗೆದರೆ ಧರ್ಮಗುರುವನ್ನೂ ಪದಭ್ರಷ್ಟ ಮಾಡಿದಂತಾಗುತ್ತಿತ್ತು. ಅದಕಾಗಿ ಒಪ್ಪಿಗೆಯಾಗಲಿ ಧೈರ್ಯವಾಗಲಿ ಬಹುಜನರಿಗಿರಲಿಲ್ಲ. ಕೆಮಾಲನು ಮಾತ್ರ ಮೊದಲಿನಿಂದಲೆ ಸುಲ್ತಾನಿಕೆಯನ್ನೆ ತೆಗೆದೊಗೆಯಬೇಕೆಂಬ ನಿರ್ಣಯವನ್ನು ಮಾಡಿಕೊಂಡಿದ್ದನು. ಧೈರ್ಯದಿಂದ ಮಿಕ್ಕವರ ಮುಂದೆ ತನ್ನ ಮಾತನ್ನೂ ಸಮರ್ಥಿಸಿದನು. ಸುಲ್ತಾನನೆಂದರೆ ಯಾರು? ಅವನಿಗೆ ಅಧಿಕಾರ ಎಲ್ಲಿಂದ ಬಂದಿತು? ಅಜ್ಞಜನರನ್ನು ಹೆದರಿಸಿ, ಅವರ ಸ್ವಾತಂತ್ರ್ಯವನ್ನು ಬಲಾತ್ಕಾರದಿಂದ ಕಸಿದುಕೊಂಡು, ಅವರ ಮೇಲೆ ರಾಜ್ಯಾಧಿಕಾರವನ್ನು ನಡೆಸಿದ್ದಾನೆ ಸುಲ್ತಾನನು. ಇಂದು ಜನರು ಬಲಾತ್ಕಾರದಿಂದಲೆ ತಮ್ಮದಾದ ಅಧಿಕಾರವನ್ನು ಸುಲ್ತಾನನಿಂದ ಕಸಿದುಕೊಂಡಿದ್ದಾರೆ. ಅವನು ಧರ್ಮಗುರುವಾಗಿದ್ದರೆ ಇರಲಿ, ಆದರೆ ರಾಜ್ಯಾಧಿಕಾರ ಮಾತ್ರ ಅವನದಲ್ಲ, ಯಾರೂ ಅವನಿಗೆ ಸ್ವಸಂತೋಷದಿಂದ ಕೊಟ್ಟಿಲ್ಲ. ಆದುದರಿಂದ ಕುರಾಣದ ಆಧಾರ ಬೇಡ, ಕಾಯಿದೆ ಕಾನೂನಗಳ ಖಂಡನ—

ಮುಂಡನ ಬೇಡ, ಈ ಸುಲ್ತಾನನೂ ಬೇಡ ಎಂದು ಕೆಮಾಲನು ತನ್ನ ನಿರ್ಣಯವನ್ನು ಸಾರಿದನು.

ಕೆಮಾಲನ ಅನೇಕ ಜೊತೆಗಾರರಿಗೆ ಈ ನಿರ್ಣಯದ ಅರ್ಥವೆ ಆಗಿರಲಿಲ್ಲ. ಯುದ್ಧದಲ್ಲಿ ಜಯಶಾಲಿ ಎನಿಸಿ, ಸೈನ್ಯಾಧಿಕಾರವನ್ನು ತನ್ನ ಕಡೆ ಗಿಟ್ಟಿಕೊಂಡು ಅಧಿಕಾರಮದಲಾಲಸೆಯಿಂದ ಕೆಮಾಲನು ಹೀಗೆ ಅಭಿಪ್ರಾಯಪಡುತ್ತಾನೆಂದು ಅವರ ಗ್ರಹಿಕೆ. ನಿಜವಾಗಿ ನೋಡಿದರೆ ಎಷ್ಟೋ ಜನರಿಗೆ ಕೆಮಾಲನ ಆಳವನ್ನು ತಿಳಿದುಕೊಳ್ಳುವದು ನೈಸರ್ಗಿಕವಾಗಿಯೆ ಶಕ್ಯವಿದ್ದಿರಲಿಲ್ಲ ಎಂದು ಹೇಳಬಹುದು. ಸುಲ್ತಾನರು ಅನೇಕ ನೂರು ವರ್ಷಗಳಿಂದ ತುರ್ಕಸ್ತಾನವನ್ನು ಆಳಿದ್ದು ಸುಲ್ತಾನರಿಲ್ಲದ ತುರ್ಕಸ್ತಾನವನ್ನು ಕಲ್ಪಿಸಲು ಬಹುಜನ ವಿಚಾರವಂತರಿಗೆ ಕೂಡ ಸಾಧ್ಯವಿರಲಿಲ್ಲ. ತುರ್ಕಸ್ತಾನದ ಸಾಮ್ರಾಜ್ಯವೈಭವದ ಸಂಕೇತಚಿಹ್ನವೆಂದರೆ ಸುಲ್ತಾನ; ಮುಹಮ್ಮದೀಯ ಧರ್ಮಪ್ರಸಾರದ ಪುಣ್ಯಸಂಚಯವೆಂದರೆ ಸುಲ್ತಾನ-ಖಲೀಫ; ಗತವೈಭವವಮಂದಿರದ ಕಳಸವೆಂದರೆ ಸುಲ್ತಾನ—ಮುಂತಾಗಿ ಈ ಜನರಿಗೆ ಅಭಿಮಾನದ ಮಾತಾಗಿತ್ತು. ಯಾವ ಕಾರಣಗಳಿಗಾಗಿ ಸುಲ್ತಾನಿಕೆಯ ಅಭಿಮಾನವು ಈ ಜನರಿಗಿದ್ದಿತೊ ಅವೇ ಕಾರಣಗಳಿಗಾಗಿ ಸುಲ್ತಾನಿಕೆಯನ್ನು ನಿರ್ಮೂಲಗೊಳಿಸಬೇಕೆಂದು ಕೆಮಾಲನ ಹಟ. ಸಾಮ್ರಾಜ್ಯವೈಭವ! ವಯಸ್ಸಿನ ಹದಿನೆಂಟನೆಯ ವರ್ಷದಿಂದ ಸುಲ್ತಾನನ ಸೈನ್ಯದಲ್ಲಿ ಮೃತ್ಯುಸೇವಕನಾದ ಮುಸ್ತಾಫನಿಗೆ ಈ ಸಾಮ್ರಾಜ್ಯವೈಭವದ ಕಲ್ಪನೆಯೂ ಸಾಕಷ್ಟಿದ್ದಿತು. ಹಾಗೆ ನೋಡಿದರೆ ಸುಲ್ತಾನನಿಗೆ ಸಾಮ್ರಾಜ್ಯವೆ ಇದ್ದಿಲ್ಲ ಎಂದು ಅವನ ಅಭಿಪ್ರಾಯ. ಇಂದು ಇಜಿಪ್ತದಲ್ಲಿ ದಂಗೆಯಾದರೆ ನಾಳೆ ಸೀರಿಯಾದಲ್ಲಿ, ನಾಡದು ಅರಬಸ್ತಾನದಲ್ಲಿ, ಅದರ ಮೂರನೆಯ ದಿನ ಇನ್ನೊಂದೆಡೆಗೆ ಹೀಗೆ ಯಾವಾಗಲೂ ದಂಗೆಗಳಿಂದ ತೊಂದರೆ ಕೊಡಲು ಮಾತ್ರ ಸಾಮ್ರಾಜ್ಯವಿದ್ದಿತೆಂದು ದಿನದಿನಕ್ಕೆ ಸೈನ್ಯದೊಡನೆ ಇತ್ತಿಂದತ್ತ ಓಡಾಡುವ ಕೆಮಾಲನು ಮನಗಂಡಿದ್ದನು. ಸುಲ್ತಾನನ ಸಾಮ್ರಾಜ್ಯವೆಂದರೆ ಬಡವನ ದೊಡ್ಡ ಕುಟುಂಬವಿದ್ದಂತೆ; ತಂದೆಗೂ ಸಾಕಷ್ಟು ಬಟ್ಟೆ-ಬಕ್ಕರಿಯಿಲ್ಲ, ಮಕ್ಕಳಿಗೂ

ಸಾಕಷ್ಟಿಲ್ಲ, ಉರಿಯುವ ಹೊಟ್ಟೆಯಿಂದ ಪರಸ್ಪರ ಕಡಿದಾಡಲು ಅಧಿಕಾರ ವಿದ್ದುದಕ್ಕೆ ಮಾತ್ರ ಅದು ಕುಟುಂಬವೆನಿಸುವುದು. ಹಾಗೆಯೇ ಈ ಗತಿ ಗೇಡಾದ ಸಾಮ್ರಾಜ್ಯ. ಸಂತತಿನಿಯಮನದ ಹೊರತು ಬಡವನಾದ ತಂದೆಗೆ ಸದ್ಯದ ಉಪಾಯವಿಲ್ಲದಂತೆ ಸಾಮ್ರಾಜ್ಯನಿಯಮನದ ಹೊರತು ತನ್ನ ದೇಶಕ್ಕೆ ತಾರಣೋಪಾಯವೇ ಇಲ್ಲವೆಂದು ಕೆಮಾಲನು ಯೋಚಿಸಿದನು. ಮಹಾಯುದ್ಧದಲ್ಲಿ ಸೋತುದಕ್ಕಾಗಿ ತುರ್ಕಸ್ತಾನದ ಸಾಮ್ರಾಜ್ಯವು ಹರಿದು ಚೂರುಚೂರಾಯಿತೇನೊ ನಿಜ. ಆದರೂ ಸುಲ್ತಾನನು ಇದ್ದನೆಂದರೆ ಅವನೊಡನೆ ಸಾಮ್ರಾಜ್ಯದ ಕಲ್ಪನೆಯೂ ಉಳಿಯಬಹುದಲ್ಲವೆ? ಸಾಮ್ರಾಜ್ಯಲಾಲಸೆಯ ಚಟುವಟಿಕೆಗಳಿಗೆ ಮತ್ತು ಚೆಂಡಾಡಿಗರಿಗೆ ಸುಲ್ತಾನನು ಪೂರಕವಾದ ನಿಮಿತ್ತನೆನಿಸಬಹುದಲ್ಲವೆ? ಇಂದಿಲ್ಲ ನಾಳೆ ಸುಲ್ತಾನನೊಬ್ಬನು ಶೌರ್ಯದಿಂದ, ಅಧಿಕಾರದ ಏಕಸೂತ್ರತೆಯಿಂದ ಸಾಮ್ರಾಜ್ಯವನ್ನು ಮತ್ತೆ ಬೆಳೆಸಿದರೆ? ಆದರಲ್ಲೂ ನಷ್ಟ ವಿದೆ ಎಂದೇ ಕೆಮಾಲನ ಹಟ. ತುರ್ಕಸ್ತಾನಕ್ಕೆ ಪರರಾಷ್ಟ್ರಗಳನ್ನು ದಾಸ್ಯದಿಂದ ಅಂಕಿತದಲ್ಲಿಟ್ಟುಕೊಳ್ಳುವ ಸಾಮ್ರಾಜ್ಯದ ಆವಶ್ಯಕತೆಯೆ ಇಲ್ಲ. ಕೆಮಾಲನು ಅನೇಕರಾಷ್ಟ್ರಗಳ ಇತಿಹಾಸವನ್ನು ಓದಿಕೊಂಡಿದ್ದನು. ಅನೇಕ ಸಾಮ್ರಾಜ್ಯಗಳ ಬೆಳೆಗಾಲ—ಅಳಿಗಾಲಗಳನ್ನು ಅರಿತುಕೊಂಡಿದ್ದನು. ಸಾಮ್ರಾಜ್ಯಶಾಹಿತ್ವದ ತತ್ವವಿವೇಚನೆಯನ್ನೆ ಮಾಡಿರಬಹುದೆಂದು ಊಹಿಸುವಂತಿದೆ. ಒಂದು ರಾಷ್ಟ್ರವು ಇನ್ನೊಂದು ರಾಷ್ಟ್ರವನ್ನು ಗೆದ್ದು ಅದರ ಮೇಲೆ ತನ್ನ ಅಧಿಕಾರವನ್ನು ನಡೆಸುವುದೇಕೆ? ಪೂರ್ವಕಾಲದಿಂದಲೂ ಈ ಪ್ರವೃತ್ತಿಗೆ ಒಂದೇಒಂದು ಕಾರಣವಿದ್ದಿತು; ಅದೆಂದರೆ ಆತ್ಮಪ್ರೌಢಿ. ಸೀಝರನು ಮಿಕ್ಕ ದೇಶಗಳನ್ನು ಗೆದ್ದುದೂ, ಅಶೋಕನನಂತರರು ಸಾಮ್ರಾಜ್ಯವನ್ನು (ಮೊದಮೊದಲು) ಬೆಳೆಸಿದುದೂ ಇಂತಹ ಸಾಮ್ರಾಜ್ಯಶಾಹಿತ್ವ. ಇದಕ್ಕೆ ಸಾಮ್ರಾಜ್ಯಶಾಹಿತ್ವದ ಶೈಶವಾವಸ್ಥೆ ಎನಬಹುದು. ಚಿಕ್ಕಮಕ್ಕಳಿಗೆ ಇನ್ನೊಂದು ಮಗುವಿನ ಕೈಯಲ್ಲಿದ್ದ ಆಟಿಗೆಯನ್ನು ಕಸಿದುಕೊಳ್ಳುವ ಮನೋವೃತ್ತಿಯೂ ಈ ಸಾಮ್ರಾಜ್ಯಸಂಪಾದನೆಯ ಮನೋವೃತ್ತಿಯೂ ಒಂದೇ

ಎನಬಹುದು. ಕಸಿದುಕೊಳ್ಳುವ ವರೆಗೆ ಆಟಿಗೆಯ ಮಹತ್ತ್ವ; ಕಸಿದು ಕೊಂಡ ಮೇಲೆ ಅದನ್ನು ಬೀಸಾಡುವುದು. ಅದರಂತೆಯೇ ಇನ್ನೊಂದು ರಾಷ್ಟ್ರವನ್ನು ಗೆಲ್ಲುವ ವರೆಗೆ ಉತ್ಸಾಹ; ಗೆದ್ದ ಮೇಲೆ ಕುಗ್ಗಿತು ಆ ಉತ್ಸಾಹ. ಬಹಳವಾದರೆ ಇನ್ನೊಬ್ಬನಿಂದ 'ಸೋತೆ' ಎಂದು ಎನಿಸಿ ಕೊಳ್ಳುವ ಬಾಲಿಶತನದಿಂದ ಕಪ್ಪ-ಕಾಣಿಕೆಗಳನ್ನೆತ್ತುವುದು. ತುರ್ಕ ಸ್ಥಾನದ ಸಾಮ್ರಾಜ್ಯವು ಶೈಶವಾವಸ್ಥೆಯಲ್ಲಿಯೆ ಇದ್ದಿತು ಎಂದು ಹೇಳ ಬಹುದು. ಇಜಿಪ್ತ ಮೊದಲಾದ ಮಾಂಡಲಿಕ ಪ್ರಾಂತಗಳು ಸುಲ್ತಾನ ನಿಗೆ ಕಪ್ಪ-ಕಾಣಿಕೆಗಳನ್ನು ಸಲ್ಲಿಸುತ್ತಿದ್ದುವು. ಆದರೆ ಈ ಶೈಶವಾ ವಸ್ಥೆಯ ಸಾಮ್ರಾಜ್ಯಶಾಹಿತ್ವವು ಇಪ್ಪತ್ತನೆಯ ಶತಮಾನದಲ್ಲಿ ನಡೆ ಯದು ಎಂದು ಕೆಮಾಲನು ಕಂಡಿದ್ದನು. ಒಂದು ದೇಶದ ಕೂಡ ಯುದ್ಧವನ್ನಾಡುವಾಗ ಇನ್ನೊಂದು ದೇಶವನ್ನು ಸುಮ್ಮನಿರಿಸುವುದು ಕಷ್ಟ; ಒಂದುವೇಳೆ ಅದು ಸಾಧ್ಯವಾದರೂ ಸೋತ ದೇಶವು ಕಪ್ಪ-ಕಾಣಿಕೆಗಳನ್ನು ಕೊಡದಿದ್ದರೆ ಮಾಡಬೇಕೇನು? ಮತ್ತೊಮ್ಮೆ ಯುದ್ಧ ವನ್ನು ಹೂಡುವುದೆಂದರೆ ತನ್ನ ದೇಶದ ಜನರೇ ವೆಚ್ಚವನ್ನು ವಹಿಸ ಬೇಕಾಗುವುದು. ಯಾವಾಗಲೂ ಯುದ್ಧಕ್ಕಾಗಿಯೆ ಹಣದ ವಿನಿ ಯೋಗವನ್ನು ಮಾಡಿದರೆ ದೇಶದ ವ್ಯವಸಾಯಗಳು ಕುಗ್ಗಿ ಪ್ರಜೆಗಳು ಬಡವರಾಗುವರು. ಇದಲ್ಲದೆ ಯಾವಾಗಲೂ ಯುದ್ಧದಲ್ಲಿ ಆಸಕ್ತನಾ ಗುವ ದೊರೆಗೆ ತಕ್ಕ ಮತ್ತು ದೊಡ್ಡ ಸೈನ್ಯ ಇರುವುದು; ಪ್ರಜೆಗಳು ಯುದ್ಧದ ವೆಚ್ಚಕ್ಕಾಗಿ ಹೆಚ್ಚಿನ ಕರಗಳನ್ನು ಕೊಡಲು ಒಪ್ಪದ ಪಕ್ಷದಲ್ಲಿ ಈ ಸೈನ್ಯವನ್ನು ಪ್ರಜೆಗಳ ಮೇಲೆಯೆ ಸುಗ್ಗಿಸುವುದು. ಅಂತೂ ಪರ ರಾಷ್ಟ್ರಗಳನ್ನು ಗೆಲ್ಲುವ ಹವಣಿಕೆಯಲ್ಲಿ ಸ್ವದೇಶದ ಪ್ರಜೆಗಳನ್ನ ದಾಸ್ಯ ದಲ್ಲಿ, ದಾರಿದ್ರ್ಯದಲ್ಲಿ ಮುಳುಗಿಸಬೇಕಾಗುವುದು. ಇಲ್ಲವಾದರೆ ತುರ್ಕ ಸ್ಥಾನದ ಸುಲ್ತಾನರು ಮಾಡಿದಂತೆ ಪರದೇಶಗಳಿಂದ ಸಾಲವನ್ನು ತೆಗೆಯುವುದು, ಅದನ್ನು ಮುಟ್ಟಿಸುವ ನೆವದಲ್ಲಿ ಪರಕೀಯರಿಗೆ ಅಧಿ ಕಾರಸೂತ್ರವನ್ನು ಒಪ್ಪಿಸುವುದು. ಶೈಶವಾವಸ್ಥೆಯ ಸಾಮ್ರಾಜ್ಯ ಲಾಲ ಸೆಯ ಸುಲ್ತಾನರಿಂದಲ್ಲವೆ ತುರ್ಕಸ್ಥಾನವು ನಿರಾಶಕ್ಕೆ ಗುರಿಯಾದುದು?

ಸುಲ್ತಾನರೆಂದರೆ ತನ್ನ ದೇಶದ ಅಧಃಪತನದ ಅಶುಭಸೂಚಕರೆಂದೆ ಕೆಮಾಲನು ಗಟ್ಟಿ-ಗಟ್ಟಿಯಾಗಿ ತಿಳಿದಿದ್ದನು.

ಹಿಂದಣಕಾಲದಲ್ಲಿ ಸಾಮ್ರಾಜ್ಯಶಾಹಿತ್ವಕ್ಕೆ ಇನ್ನೂ ಒಂದು ಕಾರಣವಿದ್ದಿತು. ಅದೆಂದರೆ ಧರ್ಮದ ಸಂರಕ್ಷಣೆ ಇಲ್ಲವೆ ಧರ್ಮದ ಪ್ರಸಾರ. ಹತ್ತು-ಹನ್ನೆರಡನೆಯ ಶತಮಾನಗಳವರೆಗೆ ಕೆಲವು ಕ್ರೈಸ್ತಮತಾನುಯಾಯಿ ರಾಜರು ತಮ್ಮ ಮತವನ್ನು ವಿಸ್ತಾರಗೊಳಿಸುವುದಕ್ಕೆ ಅನೇಕ ಜನಾಂಗಗಳನ್ನು ತಮ್ಮ ಏಕಚ್ಛತ್ರದ ಕೆಳಗೆ ತಂದಿರಿಸಲು ಹವಣಿಸಿದರು. ನಮ್ಮ ದೇಶದಲ್ಲಿ ವಿಜಯನಗರದ ಮತ್ತು ಶಿವಾಜಿಯ ಸಾಮ್ರಾಜ್ಯಗಳು ಇದೇ ಧೋರಣೆಯಿಂದ ನೆಲೆಗೊಂಡುವೆಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ತುರ್ಕಸ್ತಾನದಲ್ಲಿ ಸುಲ್ತಾನನೆ ಖಲೀಫ ಇಲ್ಲವೆ ಖಲೀಫನೆ ಸುಲ್ತಾನ ಎಂಬ ಪರಿಸ್ಥಿತಿ ಬಂದಂದಿನಿಂದ ಧರ್ಮಪ್ರಸಾರವೂ ಸಾಮ್ರಾಜ್ಯತ್ವಕ್ಕೆ ಕಾರಣವೆನಿಸಿತು. ಮುಹಮ್ಮದೀಯ ರಾಷ್ಟ್ರಗಳನ್ನಂತೂ ಸುಲ್ತಾನನ ಆಧಿಪತ್ಯದಲ್ಲಿ ಮೊದಲು ತರಲೇಬೇಕು; ಇದಲ್ಲದೆ ಅನ್ಯಮತಾನುಯಾಯಿ ಜನಾಂಗಗಳನ್ನು ಗೆದ್ದು ಅಲ್ಲಿ ಮುಹಮ್ಮದೀಯ ಮತವನ್ನು ಪ್ರಸಾರಮಾಡತಕ್ಕದ್ದು. ಇಂತಹ ವಿಚಾರವು ತೀರ ಹಿಂದಣ ಕಾಲದಲ್ಲಿದ್ದುದು ಎನುವಂತಿಲ್ಲ; ೧೯೧೪ರಿಂದ ಜರ್ಮನಿಯ ಕೈಸರನು ಇದೇ ಮಾತನ್ನು ಮುಹಮ್ಮದೀಯ ಜನಾಂಗಗಳನ್ನುದ್ದೇಶಿಸಿ ಪ್ರಕಟಿಸಿದನು. ತುರ್ಕಸ್ತಾನವೂ ಎಷ್ಟೋ ಮುಹಮ್ಮದೀಯರೂ ಮಹಾಯುದ್ಧದಲ್ಲಿ ಕೈಸರನ ಬೆನ್ನು ಕಟ್ಟಿದ್ದಕ್ಕೆ ಇದೇ ಸಂಗತಿಯು ಕಾರಣವಾಗಿದ್ದಿತು. ಆದಕಾಗಿಯೆ ಕೆಮಾಲನು ಈ ವಿಚಾರವನ್ನು ನಿರಾಕರಿಸಿದನೆಂದು ಹೇಳಬಹುದು. ಇಂದಿನ ಕಾಲದಲ್ಲಿ ಧರ್ಮದ ತಳಹದಿಯ ಮೇಲೆ ರಾಷ್ಟ್ರರಚನೆಯನ್ನು ಮಾಡುವುದು ಮೂರ್ಖತನವೆಂದು ಅವನ ಅಭಿಪ್ರಾಯ. ಸಾರಾಸಾರ ವಿಚಾರವಿಲ್ಲದೆ, ವಸ್ತುಸ್ಥಿತಿಯ ಅನುಭವವಿಲ್ಲದೆ ಬರಿಯ ಆವೇಶದಿಂದ ನಡೆಯುವ ತರುಣನು ಎಷ್ಟು ಹಾಸ್ಯಾಸ್ಪದನೆನಿಸುವನೊ ಅಷ್ಟೆ ಧರ್ಮಪ್ರಸಾರಕ್ಕಾಗಿ ಮಾಡುವ ಸಾಮ್ರಾಜ್ಯಸಂಕಲ್ಪವು ಹಾಸ್ಯಾಸ್ಪದವೆನಿಸುವುದು. ಧರ್ಮಪ್ರಸಾರದ ಈ ವೃತ್ತಿಯು ಸಾಮ್ರಾಜ್ಯ

ಶಾಹಿತ್ವದ ಯೌವನಮದಾವಸ್ಥೆ ಎನಬಹುದು. ಆವೇಶದ ಯುವಕನಿಗೆ ಆಡಂಬರದ ಆತ್ಮವಿಶ್ವಾಸವಿರುವುದು. ತನ್ನದೆ ಸತ್ಯ, ಅನ್ಯರದು ಅಸತ್ಯ ಎಂದು ಹಟದ ಆವೇಶ. ಅದರಂತೆಯೆ ಧರ್ಮದಲ್ಲಿಯ ಮನೋವೃತ್ತಿ. ತನ್ನ ಧರ್ಮವೆ ಸತ್ಯವಾದುದು, ಅನ್ಯರ ಧರ್ಮವೆಂದರೆ ಅವಿಚಾರ ಎಂಬ ಕಲ್ಪನೆಯೆ ವ್ಯವಹಾರದಲ್ಲಿ ಕಂಡುಬರುವುದು. ತನ್ನ ಧರ್ಮವನ್ನು ಖಡ್ಗದ ಸಹಾಯದಿಂದ ಬೆಳೆಸಬೇಕೆಂದರೆ ಯುದ್ಧದ ಪ್ರಸಂಗಗಳೆ ಹೆಚ್ಚಾಗಿ ಶೈಶವಾವಸ್ಥೆಯ ಸಾಮ್ರಾಜ್ಯಶಾಹಿತ್ವದಲ್ಲಿ ತೋರಿಸಿದ ದೋಷಗಳೆ ಇದರಲ್ಲೂ ಉದ್ಭವಿಸುವುವು. ಇನ್ನು ಹೊಸತಾಗಿ ಜನರನ್ನು ಮತಾಂತರಿಸದೆ, ಇದ್ದ ತನ್ನ ಮತಾನುಯಾಯಿಗಳನ್ನು ಏಕಚ್ಛತ್ರದಲ್ಲಿ ನೆರೆಸಬೇಕೆಂದರೆ ಇಂದಿನ ಜಗತ್ತಿನಲ್ಲಿ ಅದೂ ಸಾಧ್ಯವಿಲ್ಲ. ಈಗಾಗಲೆ ಒಂದೇ ಮತದ ಅನುಯಾಯಿಗಳು ಅನೇಕ ನೂರುವರುಷಗಳವರೆಗೆ ಬೇರೆ ಬೇರೆ ದೇಶಗಳಲ್ಲಿ ನೆಲೆಗೊಂಡಿದ್ದಾರೆ; ಆಯಾ ದೇಶಗಳಲ್ಲಿ ಅವರ ಅಧಿಕಾರ-ಕರ್ತವ್ಯ-ಸಂಬಂಧಗಳು ಸ್ಥಿರವಾಗಿ ಶಾಸನಬದ್ಧವಾಗಿ ನಿಂತಿವೆ. ಯುದ್ಧದ ಬಲದಿಂದಲ್ಲದೆ ಇನ್ನಾವ ಉಪಾಯದಿಂದಲೂ ಅವರನ್ನು ಒಂದುಗೂಡಿಸುವುದು ಶಕ್ಯವಿಲ್ಲ. ಹೀಗಾಗಿ ಯೌವನಮದಾವಸ್ಥೆಯ ಸಾಮ್ರಾಜ್ಯಶಾಹಿತ್ವಕ್ಕೂ ಯುದ್ಧದ ಅಪಾಯಕಾರಕ, ಅನಿಷ್ಟದಾಯಕ ಪ್ರಸಂಗವು ಬಿಟ್ಟಿಲ್ಲ ಎಂದು ಹೇಳಬಹುದು. ಇದಲ್ಲದೆ ತುರ್ಕಸ್ತಾನದ ಧರ್ಮಪ್ರಸಾರಕ ಸಾಮ್ರಾಜ್ಯಶಾಹಿತ್ವಕ್ಕಾಗಿ ಕೆಮಾಲನಲ್ಲಿ ಅತ್ಯಂತವಾಗಿ ದ್ವೇಷವಿದ್ದಿತು; ಅದಕ್ಕೆ ಯೋಗ್ಯ ಕಾರಣಗಳೂ ಇದ್ದುವೆಂಬುದನ್ನು ಮುಂದೆ ಪ್ರಸಂಗಾನುಸಾರ ಹೇಳುವವರಿದ್ದೇವೆ. *

ಕೊನೆಯದಾಗಿ ಇಂದಿನ ಯಂತ್ರಯುಗದಲ್ಲಿ ಪ್ರೌಢಾವಸ್ಥೆಯ ಸಾಮ್ರಾಜ್ಯಶಾಹಿತ್ವವಿದೆ. ಈ ಪದ್ಧತಿಯು ಇಂಗ್ಲಂಡಿನಿಂದ ಪ್ರಚಾರದಲ್ಲಿ ಬಂದಿತೆಂದು ಹೇಳಬಹುದು. ಇದರಲ್ಲಿ ಕಪ್ಪ-ಕಾಣಿಕೆಗಳ ಹುಡುಗಾಟವೂ ಇಲ್ಲ, ಧರ್ಮಪ್ರಸಾರವೆಂಬ ಹರೆಯದ ಹುಚ್ಚೂ ಇಲ್ಲ. ಇದು ವ್ಯವಹಾರ

* ಈ ಭಾಗದ ಮೂರನೆಯ ಪ್ರಕರಣ (ಪ್ರಜಾಪ್ರಭುತ್ವದ ಶತ್ರು) ವನ್ನು ನೋಡಿರಿ.

ಜ್ಞಾನದಿಂದ, ಪ್ರಪಂಚದ ಅನುಭವದಿಂದ ಪ್ರೇರಿತವಾದುದು. ಇದಲ್ಲದೆ ಇಂಗ್ಲಂಡಿನ ವಿಶಿಷ್ಟಪರಿಸ್ಥಿತಿಯೂ ಇದಕ್ಕೆ ಕಾರಣೀಭೂತವಾಗಿದೆ. ಯಂತ್ರಶಕ್ತಿಯ ಶೋಧದಿಂದ, ಆ ಶಕ್ತಿಯ ಉಪಯೋಗಜ್ಞಾನದಿಂದ ಇಂಗ್ಲಂಡಿನಲ್ಲಿ ಕೆಲವು ವ್ಯವಸಾಯಗಳು ಬೆಳೆದುವು, ವ್ಯಾಪಾರವು ಹೆಚ್ಚಿತು, ಜನಸಂಖ್ಯೆ (ವಿಶೇಷವಾಗಿ ಕೂಲಿಕಾರ ಸ್ಥಿತಿಯಲ್ಲಿದ್ದವರು) ಹೆಚ್ಚಾಯಿತು. ಕೆಲವೊಂದು ಕಾಲಕ್ಕೆ ಈ ಬೆಳೆದ ಜನಸಂಖ್ಯೆಯ ಹೊಟ್ಟೆಗೂ ವಸತಿಗೂ ಸಾಲದ ಪರಿಸ್ಥಿತಿ ಬಂದಿತು. ಆಗ ವಸತಿ ಕಡಮೆ ಇದ್ದ ಭೂಪ್ರದೇಶಗಳನ್ನು ಆಕ್ರಮಿಸುವ ಹಂಚಿಕೆ ಅನೇಕ ಉಪಾಯಾಂತರ ಗಳಿಂದ ತೋಚಿತು. ಇದೇ ಕಾಲಕ್ಕೆ ಭಾರತದಲ್ಲಿ ವ್ಯಾಪಾರವನ್ನು ಬೆಳೆಸುವ ಯತ್ನಗಳಲ್ಲಿ ಕೆಲವೊಂದು ಪ್ರಾಬಲ್ಯವು ಇಂಗ್ಲಿಶ ವ್ಯಾಪಾರ ಕಂಪನಿಗೆ ದೊರೆತಿತ್ತು. ದೇಶದ ಯಾಂತ್ರಿಕ ಉತ್ಪತ್ತಿಯ ವಿನಿಯೋಗಕ್ಕೆ ಭಾರತವು ಆವಶ್ಯಕವೆನಿಸಿತು. ಅದಕಾಗಿ ದೇಶದ ಅಧಿಕಾರಸೂತ್ರವನ್ನು ಇಂಗ್ಲಂಡವು ಕ್ರಮೇಣ ತನ್ನ ಕೈಯಲ್ಲಿ ತೆಗೆದುಕೊಂಡಿತು. ಇಂದಿ ಗಾದರೂ ಭಾರತದೇಶದಲ್ಲಿ ಈ ಪರಿಸ್ಥಿತಿ ಇದೆ. ಭಾರತೀಯರಿಗೆ ಸಾಮಾನ್ಯವಾಗಿ ವ್ಯವಹಾರದ ಯಾವ ಕೆಲಸದಲ್ಲಿಯೂ ಅಡ್ಡಿ ಬರು ವಂತಿಲ್ಲ, ದಾಸ್ಯಕ್ಕಾಗಿ ಕಪ್ಪ-ಕಾಣಿಕೆಗಳನ್ನು ಕೊಡುವಂತಿಲ್ಲ, ಯುದ್ಧ ದಲ್ಲಿ ಸೋತುದಕ್ಕಾಗಿ ಧರ್ಮಾಂತರವನ್ನು ಮಾಡಬೇಕಾಗಿಲ್ಲ, ತನ್ನ ಧರ್ಮ-ತನ್ನ ಸಂಸ್ಕೃತಿ-ತನ್ನ ದಿನದ ವ್ಯವಹಾರ ಇವುಗಳಲ್ಲಿ ಭಾರತೀ ಯನಿಗೆ ಸಾಕೆನಿಸುವಷ್ಟು ಸ್ವಾತಂತ್ರ್ಯವಿದೆ. ಆದರೆ ಅಧಿಕಾರಮೂಲವು ಇಂಗ್ಲಂಡಿನ ಪಾರ್ಲಮೆಂಟ; ಅಧಿಕಾರಸೂತ್ರವೆಲ್ಲ ಬ್ರಿಟಿಶ ಜನರಲ್ಲಿ; ಈ ಬ್ರಿಟಿಶ ಜನರು ಅಧಿಕಾರಿಗಳಿರುವ ವರೆಗೆ ಮಾತ್ರ ಭಾರತದಲ್ಲಿಯೇ ಇರ ತಕ್ಕುದು. ಇಂತಹ ಯೋಜನೆಯಿಂದ ಅನೇಕ ಬ್ರಿಟಿಶರಿಗೆ ವಸತಿ-ಸೌಕರ್ಯವೂ, ಒಟ್ಟು ಬ್ರಿಟನ್ನಿಗೆ ವ್ಯಾಪಾರಸಂಪತ್ತೂ ಲಭಿಸಿದೆ. ಮತ್ತು ಇಂದು ಬ್ರಿಟಿಶ ದೇಶವು ಜಗತ್ತಿನ ರಾಷ್ಟ್ರಗಳಲ್ಲಿ ಮೇಲಿನ ಸ್ಥಾನವನ್ನು ಪಡೆದಿದೆ. ಇದುವರೆಗೂ ಈ ಸಾಮ್ರಾಜ್ಯದ ಉತ್ಕರ್ಷವೆ ನಡೆದಿದೆ. ಆದರೆ ತುರ್ಕಸ್ಥಾನಕ್ಕೆ ಇಂತಹ ಸಾಮ್ರಾಜ್ಯಶಾಹಿತ್ವವು ಲಭಿಸುವುದು ಹೇಗೆ? ಇಂದಿನಕಾಲದಲ್ಲಿ ಅದನ್ನು ಸ್ಥಾಪಿಸಬೇಕಾದರೆ

ಈಗಾಗಲೆ ಅಲ್ಲಲ್ಲಿ ನೆಲೆಗೊಂಡ ಇಂಗ್ಲಂಡ-ಫ್ರಾನ್ಸಗಳೊಡನೆ ಹೋರಾಡುವ ಪ್ರಸಂಗ ಬರುವುದು. ಜರ್ಮನಿಯಂತಹ ಪ್ರಬಲ ಮತ್ತು ಸುಸಂಘಟಿತ ರಾಷ್ಟ್ರವು ಕೂಡ ಇಂತಹ ಹೋರಾಟದಲ್ಲಿ ಬಿದ್ದು ಹಣ್ಣಾಗಿರುವಾಗ ತುರ್ಕಸ್ತಾನದ ಪಾಡೇನು? ಇದಲ್ಲದೆ ಈ ಪ್ರೌಢಾವಸ್ಥೆಯ ಸಾಮ್ರಾಜ್ಯಶಾಹಿತ್ವಕ್ಕೆ ಸುಶಿಕ್ಷಿತ ಅಧಿಕಾರವರ್ಗವು ಬೇಕು. ತುರ್ಕಸ್ತಾನದಲ್ಲಿ ಶಿಕ್ಷಣವೆಂದರೇನೆಂಬುದೆ ಗೊತ್ತಿಲ್ಲ! ಇನ್ನು ಶಿಕ್ಷಣವನ್ನು ಪಡೆದಮೇಲೆ ಅವರು (ಗೆದ್ದ) ಪರದೇಶಗಳಲ್ಲಿ ವಸತಿಯನ್ನು ಮಾಡಿಕೊಂಡಿರಬೇಕು. ಆದರೆ ತುರ್ಕಸ್ತಾನವನ್ನೆ ಇನ್ನೂ ಬೇಕಾದಷ್ಟು ಬೆಳೆಸುವಂತಿದೆಯಲ್ಲ? ತನ್ನ ದೇಶದ ಧನಮೂಲವನ್ನೆ ಬೇಕಾದಷ್ಟು ಉಪಯೋಗಿಸುವಂತಿದೆಯಲ್ಲ? ಅದನ್ನೆಲ್ಲ ಬಿಟ್ಟುಕೊಟ್ಟು ಅನ್ಯ ರಾಷ್ಟ್ರಗಳೊಡನೆ ನಿರಂತರವಾಗಿ ಹೋರಾಡಬೇಕಾಗುವಂತಹ ಪ್ರಸಂಗಗಳನ್ನು ತಂದೊಡ್ಡುವ ಈ ಸಾಮ್ರಾಜ್ಯಶಾಹಿತ್ವದ ಒಣಮೋಹವೇಕೆ? ಸಾಮ್ರಾಜ್ಯಶಾಹಿತ್ವವೂ ಬೇಡ, ಗತವೈಭವವನ್ನು ಪುನರುದ್ಧಾರಗೊಳಿಸುವ ಹಂಬಲವೂ ಬೇಡ. ಗತವೈಭವವನ್ನು ನೆನೆಯುವುದೆಂದರೆ ಕೆಮಾಲನಿಗೆ ಕಿಡಿಯಾದ ಕೋಪ. ಗತವೈಭವವನ್ನು ನೆನೆಯುತ್ತ ಕುಳಿತರೆ ಅದೇ ನಮ್ಮ ಗುರಿಯಾಗಬಹುದಲ್ಲವೆ? ಇಂದಿನ ಜಗತ್ತಿನಲ್ಲಿ ನಮ್ಮ ಜೀವನ-ವ್ಯವಹಾರಗಳು ಬೇರೆಯಾಗಿವೆ, ಅದರಂತೆ ನಮ್ಮ ಗೊತ್ತು-ಗುರಿಗಳೂ ಬೇರೆಯಾಗಿವೆ. ಹಿಂದಿನ ಕಾಲವನ್ನೆ ಇಂದು ಗುರಿಯಾಗಿಟ್ಟುಕೊಂಡರೆ ನಾವು ಮುಂದೆ ಹೆಜ್ಜೆಯನ್ನಿಡುವುದೆಂತು, ನಮ್ಮ ಜಗತ್ತಿನಲ್ಲಿ ಬೆಳೆಯುವುದೆಂತು? ಇದಲ್ಲದೆ ಗತವೈಭವವನ್ನು ಅಲೌಕಿಕ ಆದರ್ಶವೆಂದು ತಿಳಿದು ಇಂದು ನಾವು ಅಭಿಮಾನಶೂನ್ಯರಾಗಿದ್ದೇವೆ, ಹೇಡಿಯಾಗಿದ್ದೇವೆ. ನಮ್ಮಲ್ಲಿ ಕರ್ತೃತ್ವವಿದೆ ಎಂಬ ಆತ್ಮವಿಶ್ವಾಸವು ನಮ್ಮಲ್ಲಿ ಹುಟ್ಟಬೇಕಾದರೆ ಗತವೈಭವವು ಅತಿಮಾನುಷವಾದುದು ಎಂಬ ಕಲ್ಪನೆಯನ್ನು ನಾವು ಕಿತ್ತೊಗೆಯಬೇಕು. ನಮ್ಮ ಸುಲ್ತಾನನೆಂದರೆ ಯಾವಾಗಲೂ ಗತವೈಭವವನ್ನು ಸ್ಮರಣೆಗೆ ತಂದುಕೊಡುವ ವಿಧವೆಯ ಬರಿದಾದ ಹಣೆಯಂತೆ, ಅವನನ್ನೆ ಕಿತ್ತೊಗೆದರೆ ನಮ್ಮ ಮನೋವೃತ್ತಿಯು ತಾನಾಗಿಯೆ ಬದಲಾಯಿಸುವುದು. ಇಷ್ಟೇಕೆ? ಇಂದು ನಾವು ಉಳಿದು ಬೆಳೆಯಬೇಕಾದರೆ ಕೊಳೆತ

ಸುಲ್ತಾನಿಕೆಯನ್ನೆ ನಮ್ಮೊಳಗಿನಿಂದ ತೆಗೆದು ದೂರ-ಅತಿದೂರ ಬೀಸಾಡ ಬೇಕು ಎಂದು ಗಾಝಿ ಮುಸ್ತಾಫಾ ಕೆಮಾಲನು ಸಿದ್ಧಾಂತವನ್ನು ಮಾಡಿಕೊಂಡಿದ್ದನು.

ಆದರೆ ಪಂಡಿತರೂ ಮುತ್ಸದ್ದಿಗಳೂ ಬೇರೊಂದು ತಾತ್ತ್ವಿಕವಾದ ಚರ್ಚೆಯನ್ನೆ ನಡೆಸಿದ್ದರು. ದೇವನ ಸಾಕ್ಷ್ಯವಾಯಿತು, ಧರ್ಮದ ಸಾಕ್ಷ್ಯವಾಯಿತು, ಇತಿಹಾಸದ ಸಾಕ್ಷ್ಯವಾಯಿತು-ಚರ್ಚೆ ಇನ್ನೂ ನಡೆದೇ ಇದೆ! ಕೊನೆಗೆ ಕೆಮಾಲನು ಬೇಜಾರದ ಸಿಡುಕಿನಿಂದ ಪುಟಿದೆದ್ದನು. 'ನಿಮ್ಮ ದೇವ-ಧರ್ಮ-ಇತಿಹಾಸಗಳ ಸಾಕ್ಷ್ಯ ನನಗೆ ಬೇಕಾಗಿಲ್ಲ. ಜನರನ್ನು ದಾಸ್ಯದಲ್ಲಿ ಮುಳುಗಿಸಿ ಅವರ ಸ್ವಾತಂತ್ರ್ಯ-ಸುಖಗಳನ್ನು ಸುಲ್ತಾನನು ಬಲಾತ್ಕಾರದಿಂದ ಕಸಿದುಕೊಂಡಿದ್ದಾನೆ; ಇಂದು ನಾವು—ಜನತೆಯ ಪತಿಯಿಂದ ಕಾದಿದವರು—ಜಯಶೀಲರಾಗಿದ್ದೇವೆ. ಕಸಿದುಕೊಂಡ ಸ್ವಾತಂತ್ರ್ಯ-ಸುಖಗಳನ್ನು ಇಂದು ನಾವು ಬಲಾತ್ಕಾರದಿಂದ ತಿರುಗಿ ತೆಗೆದುಕೊಳ್ಳುವವರಿದ್ದೇವೆ. ಈ ಮಾತು ಸರ್ವಸಮ್ಮತವಿದೆ-ಇಲ್ಲದಿದ್ದರೆ ಸರ್ವಸಮ್ಮತ ಆಗಲೇಬೇಕು' ಎಂದನು. 'ಆಗಬಹುದು' ಎಂದರು ಪಂಡಿತರು. ರಾಮಾಯ ಸ್ವಸ್ತಿ ರಾವಣಾಯ ಸ್ವಸ್ತಿ! ಆ ಮೇಲೆ ಮಹಾರಾಷ್ಟ್ರೀಯ ಸಭೆಯಲ್ಲಿ ಈ ವಿಷಯ ನಿರ್ಣಯಕ್ಕೆ ಬಂದಿತು. ಅಧ್ಯಕ್ಷನಾದ ಕೆಮಾಲನು ಅದನ್ನು ಸದಸ್ಯರ ಮುಂದಿಟ್ಟನು; 'ಇದಕ್ಕೆ ನಿಮ್ಮೆಲ್ಲರ ಅನುಮತಿ ಇದೆ ಎಂದು ತಿಳಿದಿದ್ದೇನೆ' ಎಂದನು. ಒಂದೆಡೆ ಕೆಲವರು 'ಇಲ್ಲ ಇಲ್ಲ' ಎಂದು ಕೂಗಿದರಂತೆ, ಇನ್ನೊಂದೆಡೆ ಅವರಿಗಿಂತ ಹೆಚ್ಚು ಜೋರಾಗಿ 'ಸರ್ವಸಮ್ಮತವಾಗಿ ಸ್ವೀಕೃತವಾಯಿತು' ಎಂದು ಅಧ್ಯಕ್ಷನಾದ ಕೆಮಾಲನು ಕೂಗಿದನಂತೆ! ಸಭೆಯಲ್ಲೆಲ್ಲ ಹಾಹಾಕಾರವೆದ್ದಿತು. ಸುಲ್ತಾನಿಕೆಯು ನಿದಿಗೆ ಕಟ್ಟಿದ್ದಕ್ಕೆ ತಕ್ಕಂತೆಯೆ ಅಲ್ಲೋಲ-ಕಲ್ಲೋಲವೆದ್ದಿದ್ದರೆ ಆಶ್ಚರ್ಯವೇನು? ಆಶ್ಚರ್ಯವೆನಿಸಲು ಅವಕಾಶ ಕೂಡ ಕೊಡದಂತೆ ಕೆಮಾಲನು ದರ್ಪೋದ್ಧತನಾಗಿ ಇಷ್ಟರಲ್ಲಿ ಸಭಾಗೃಹದಿಂದ ಹೊರಬಿದ್ದನು.

———

# ೨ ಪ್ರಜಾಸರ್ವಾಧಿಕಾರಿತ್ವ

'ದೇವನು ಇದ್ದಿಲ್ಲವಾದ ಪಕ್ಷಕ್ಕೆ ನಾವು ಒಬ್ಬ ದೇವನನ್ನು ಹುಟ್ಟಿಸುವುದಗತ್ಯ' ಎಂದು ಫ್ರೆಂಚ ಕ್ರಾಂತಿಕಾರಕ ಸಾಹಿತಿಯಾದ ವ್ಹಾಲ್‌ಟೇರನು ಒಂದೆಡೆಯಲ್ಲಿ ಹೇಳಿದ್ದಾನೆ. ಈ ಮಾತಿನ ಅರ್ಥವೇನು? ದೇವನಿಲ್ಲದೆ ನಡೆಯುವುದೆ ಶಕ್ಯವಿಲ್ಲೆಂದೊ? ಹಾಗಲ್ಲ. ಮನುಷ್ಯನಿಗೆ ಇನ್ನೂ ತನ್ನ ಶಕ್ತಿ-ಸಾಮರ್ಥ್ಯಗಳಲ್ಲಿಯೆ ವಿಶ್ವಾಸವಿಡುವ ಪರಿಸ್ಥಿತಿ ಯಿಲ್ಲ. ತನ್ನಲ್ಲಿಯ ಅಗಾಧವಾದ ಶಕ್ತಿಗಳನ್ನು ಮಾನವನು ತನ್ನ ಪ್ರಗತಿಗಾದರೂ ಉಪಯೋಗಿಸಬಹುದು, ಅಧೋಗತಿಗಾದರೂ ವಿನಿ ಯೋಗಿಸಬಹುದು. ಪ್ರಗತಿಗೆ ಇಂತಹದೆ ಒಂದು ಧ್ಯೇಯ ಎಂದು ಸರ್ವ ಸಮ್ಮತವಾಗಿಲ್ಲ; ಪ್ರಗತಿಯು ವೈಯಕ್ತಿಕ ಧೋರಣೆಯನ್ನು ತಾಳಬೇಕೆ ಇಲ್ಲವೆ ಸಾಮೂಹಿಕ ಧೋರಣೆಯನ್ನು ತಾಳಬೇಕೆ ಎಂಬುದರ ನಿರ್ಣಯ ವಿಲ್ಲ. ಪ್ರಜೆಗಳ ಪ್ರಗತಿಗಾಗಿ ಮುಂದಾಳಾಗಿ ಹೋರಾಡಿದ ನೆಪೋಲಿ ಯನ್ ಬೋನಾಪಾರ್ಟನು ಕೊನೆಗೆ ಸಮಯ ಸಾಧಿಸಿ ತಾನೇ ಸರ್ವಾಧಿ ಕಾರಗಳ ಸಮ್ರಾಟನಾದನು. ಇಂದು ಜನರಿಗೆ ದಿನನಿತ್ಯಜೀವನದ ಸೌಕರ್ಯಗಳನ್ನೆಲ್ಲ ಒದಗಿಸಿಕೊಡಲು ಸಾಧನವೆನಿಸಿದ ವಿಜ್ಞಾನಪರಿ ಶೋಧವೆ ಅಬಿಸಿನಿಯಾ-ಚೀನಾಗಳಲ್ಲಿ ಲಕ್ಷಾವಧಿ ನಿರುಪದ್ರವಿಗಳ ಪ್ರಾಣಹರಣದ ಸಾಧನವಾಗಿದೆ. ಹೀಗೆ ಮಾನವನ ಶಕ್ತಿಯು-ಕಲ್ಪನೆಯು ಪರಮಾತ್ಮನಂತೆ-ಸೃಷ್ಟಿ ಮತ್ತು ಲಯ ಇವುಗಳಿಗೆ ಸಾಧಾರಣವಾದ ಕಾರಣವೆನಿಸಿದೆ. ಆ ಶಕ್ತಿಯನ್ನು ಸೃಷ್ಟಿಯ ಸಲುವಾಗಿ, ವಿಧಾಯಕವಾಗಿ ಉಪಯೋಗಿಸುವ ಸಮಯ ಯಾವುದು; ಲಯದ ಸಲುವಾಗಿ, ವಿಘಾತುಕವಾಗಿ ಉಪಯೋಗಿಸುವ ಸಮಯ ಯಾವುದು? ಇದರ ನಿರ್ಣಯವನ್ನು ಕೊಡುವ ಅಧಿಕಾರವು ಯಾರದು? ಆ ನಿರ್ಣಯವನ್ನು ಕೊಟ್ಟರೆ ಅದನ್ನು ಮಾನವನು ಮನ್ನಿಸಬೇಕಲ್ಲ? ಇದಕಾಗಿ ಮಾನವ ನನ್ನು ಕೂಡ ಮೀರಿದ ಒಂದು ಶಕ್ತಿಯ ಅಗತ್ಯವಿದೆ ಎಂದು ಅನೇಕ

ಪಂಡಿತರು ಅಭಿಪ್ರಾಯ ಪಡುತ್ತಾರೆ. ಈ ಅಭಿಪ್ರಾಯವೆ ಮೇಲೆ ಕಾಣಿಸಿದ ವಾಲ್‌ಟೇರನ ಉದ್ಗಾರದ ಮರ್ಮ. ದೇವನೆಂಬ ಶಕ್ತಿಯನ್ನು ಕಲ್ಪಿಸೋಣ, ಈ ದೇವನು ಕಾಲ-ದೇಶ-ಪರಿಮಾಣಗಳಿಂದ ಅಬಾಧಿತನೆಂದು ಕಲ್ಪಿಸೋಣ; ಆಗ ಮಾನವನ ವ್ಯವಹಾರಕ್ಕೆ ಶಿಸ್ತು-ಸುಸಂರಕ್ಷಿತತೆ-ಸ್ಥಿರತೆಗಳು ಒದಗಬಹುದು. ಇಷ್ಟಾದರೂ ಪ್ರಗತಿಹೊಂದಿದ ಮನುಷ್ಯನಿಗೆ ಈ ದೇವನು ಕಾಲ್ಪನಿಕನೆಂದೂ ಅವನಿಗೆ ಹೆದರುವುದು ವ್ಯರ್ಥವೆಂದೂ ತೋರಬಹುದಲ್ಲ? ದೇವನು ಅಗೋಚರನೇನೊ ಸಹಜ; ಆದರೆ ಅವಶ್ಯವಿದ್ದಾಗ ಕೂಡ ಅವನು ಅಗೋಚರನೆ ಎನಿಸಿದರೆ ಇಂತಹ ದೇವನು ಪುಕ್ಕನೆಂದಾಗಲಿ, ಇಲ್ಲವೆ ಇಲ್ಲವೆಂದಾಗಲಿ ಅಸಂಸ್ಕೃತರಿಗೆ ಕೂಡ ಹೊಳೆಯಬಹುದು. ಅದಕಾಗಿ ಮಾನವನ ಸಮಾಜಬೆಳವಣಿಗೆಯಲ್ಲಿ, ಸಂಸ್ಥಾಪ್ರಧಾನವಾದ ಪ್ರಗತಿಯಲ್ಲಿ ಈ ಅಗೋಚರ ದೇವನ ಗೋಚರ ಪ್ರತೀಕಗಳು, ಈ ಆಕಾಶನಿವಾಸಿಯ ಭೂಮಿಯ ಪ್ರತಿನಿಧಿಗಳು ಉದಯವಾದರು. ಈ ಅನೇಕ ಪ್ರತಿನಿಧಿಗಳಲ್ಲಿ ರಾಜನೊಬ್ಬ, ಧರ್ಮಗುರು ಒಬ್ಬ. ರಾಜನಿಂದ ದೇಶಕ್ಕೆ ಶಿಸ್ತು ಒದಗುವುದು, ಪ್ರಜೆಗಳಿಗೆ ಸಂರಕ್ಷಣೆ ದೊರಕುವದು, ವ್ಯವಹಾರಕ್ಕೆ ಸ್ಥಿರತೆ ದೊರೆಯುವುದು. ಅದಕಾಗಿಯೆ ಇದ್ದಲ್ಲೆಲ್ಲ ಅರಸುತನವು ಆನುವಂಶಿಕವಾಗಿಯೆ ಇದೆ. 'The King is dead, Long live the King' ಎಂಬ ಇಂಗ್ಲಂಡದ ಘೋಷವು ಈ ಮಾತಿನ ಸತ್ಯತೆಯನ್ನು ಸಿದ್ಧಗೊಳಿಸುತ್ತಿದೆ. ಈಗಲಾದರೂ ಇಂಗ್ಲಂಡದಲ್ಲಿ ದೇಶವನ್ನಾಳುವ ಸರ್ವಾಧಿಕಾರವು ವ್ಯವಹಾರದಲ್ಲಿ ಪಾರ್ಲಮೆಂಟಿಗಿದ್ದರೂ ತತ್ತ್ವದಿಂದ ಅರಸನಿಗಿದೆ. ಇಂದಿನ ಪಾರ್ಲಮೆಂಟು ನಾಳೆ ಬದಲಾಗಬಹುದು; ಪ್ರತಿ ಐದೈದು ವರುಷಗಳಿಗಂತೂ ಹೊಸ ಚುನಾವಣೆ ಆಗಲೇಬೇಕು. ಅರಸುತನವಿರದಿದ್ದರೆ ಈ ಸ್ಥಿತ್ಯಂತರಗಳಿಂದ ವ್ಯವಹಾರಕ್ಕೆ ತಡೆಯಾಗುವ ಸಂಭವ ಹೆಚ್ಚು. ಇಷ್ಟೇಕೆ? ಮೂರು ಸಲ ಅರಸುತನವನ್ನು ಹೊಡೆದೋಡಿಸಿ ಕ್ರಾಂತಿ ಹೂಡಿದ ಪ್ರಜಾಸತ್ತಾತ್ಮಕ ಫ್ರಾನ್ಸದಲ್ಲಿ ಕೂಡ ದೇಶಾಧ್ಯಕ್ಷ (President of the Republic) ನೊಬ್ಬನಿದ್ದಾನೆ. ಪಾರ್ಲಮೆಂಟಕ್ಕೂ ಇವನಿಗೂ ಸಂಬಂಧವಿಲ್ಲ. ಮಂತ್ರಿಮಂಡಲಗಳು ಫ್ರಾನ್ಸದಲ್ಲಿ ರೇಶಿಮೆ

ಹುಳಗಳಂತೆ ದಿನದಿನಕ್ಕೆ ರೂಪಾಂತರವನ್ನು ಹೊಂದುತ್ತಿವೆ. ಈ ಅಸ್ಥಿರತೆಯಲ್ಲಿ ಸ್ಥಿರವಾಗಿ ವ್ಯವಹಾರವನ್ನು ನಡೆಸಲು ದೇಶಾಧ್ಯಕ್ಷನ ಅವಶ್ಯಕತೆ ಅತ್ಯಂತವಾಗಿದೆ. ಯಾವ ರಾಷ್ಟ್ರವೆ ಆಗಲಿ, ಅದರ ವ್ಯವಹಾರಕ್ಕೆ ಸ್ಥಿರತೆ ಬರಬೇಕಾದರೆ ಒಂದು ಸ್ಥಿರವಾದ **ಮತ್ತು ಅಧಿಕಾರಯುಕ್ತವಾದ** ವರಿಷ್ಠ ಆಧಿಪತ್ಯವಿರಬೇಕಾಗುವುದು.

ಸುಲ್ತಾನನನ್ನು ಹೊರದೂಡಿದ ಮೇಲೆ ಕೆಮಾಲನಿಗೆ ಇದೇ ಪ್ರಶ್ನೆ ಮುಂದೆ ಬಂದು ನಿಂತಿತು. ರಾಷ್ಟ್ರದ ವ್ಯವಹಾರಕ್ಕೆ ಸ್ಥಿರತೆಯನ್ನು ಕೊಡಲು ಸುಲ್ತಾನಿಕೆಯು ಉಪಯುಕ್ತವಾಗಿದ್ದಿತು. ಆದರೆ ಹಿಂದೆ ವಿವರಿಸಿದ ಅನೇಕ ಕಾರಣಗಳಿಗಾಗಿ ಕೆಮಾಲನು ಸುಲ್ತಾನನೊಬ್ಬನನ್ನೆ ಅಲ್ಲ, ಇಡಿಯ ಸುಲ್ತಾನಿಕೆಯನ್ನೇ ಕಿತ್ತೊಗೆದನು. ಈಗ ದೇಶದಲ್ಲಿ ವ್ಯವಹಾರವನ್ನು ನಡೆಸುವ ಅಧಿಕಾರವು ರಾಷ್ಟ್ರೀಯ ಸಭೆಗಷ್ಟೆ ಉಳಿಯಿತು. ಆದರೆ ಈಗ ರಾಷ್ಟ್ರೀಯ ಸಭೆಯು ( National Assembly ) ಮೊದಲಿನ ರಾಷ್ಟ್ರೀಯ ಸಭೆಯಾಗಿ ಉಳಿದಿರಲಿಲ್ಲ. ಮೊದಲು ರಾಷ್ಟ್ರೀಯ ಸಭೆ ಎಂದರೆ ಇಂದು ಹಿಂದುಸ್ತಾನದಲ್ಲಿದ್ದ ಕಾಂಗ್ರೆಸಿನಂತೆ ಎಂದು ಹೇಳಬಹುದು. ನೆರೆದವರೆಲ್ಲರಲ್ಲೂ ಉತ್ಸಾಹ, ಎಲ್ಲರಲ್ಲೂ ಆವೇಶ, ಎಲ್ಲರೂ ದೇಶಾಭಿಮಾನಿಗಳೆ, ಎಲ್ಲರ ಧ್ಯೇಯವು ಒಂದೆ, ಎಲ್ಲರ ಅಭಿಪ್ರಾಯಗಳು ಒಮ್ಮತಪ್ರಾಯವೆ. ಪರಕೀಯರನ್ನು ದೇಶದಿಂದೋಡಿಸುವುದಕ್ಕಾಗಿ, ಸ್ವಕೀಯರಲ್ಲಿ ಜಾಗ್ರತೆಯನ್ನು ಹುಟ್ಟಿಸುವುದಕ್ಕಾಗಿ, ದೇಶದಲ್ಲಿ ಸ್ವಾತಂತ್ರ್ಯಧ್ವಜವನ್ನು ನಿಲ್ಲಿಸುವುದಕ್ಕಾಗಿ ಜೀವದ ಆಹುತಿಯನ್ನು ಮಾಡಲು ಸಿದ್ಧರಾದ ವೀರರೆ ರಾಷ್ಟ್ರೀಯ ಸಭೆಯ ಸದಸ್ಯರಾಗಿದ್ದರು. ಆದರೆ ಈಗ? ಪರಕೀಯರು ಮರಳಿ ಬರದಂತೆ ಕಾಲ್ದೆಗೆದಿದ್ದಾರೆ, ಸ್ವಕೀಯರೆಲ್ಲ ಸ್ವಾತಂತ್ರ್ಯಯುದ್ಧದಲ್ಲಿ ಜಯಶಾಲಿಗಳಾದ ಸೈನಿಕರಾಗಿದ್ದಾರೆ, ದೇಶವು ಸ್ವತಂತ್ರವಾಗಿದೆ. ಈಗಿನ ಸದಸ್ಯರ ಮನೋವೃತ್ತಿಯು ಬೇರೆಯಾಗಿದೆ, ಪರಮಾರ್ಥಧ್ಯೇಯವು ಸಾಧಿಸಿದ್ದರಿಂದ ಸ್ವಾರ್ಥದ ಧೋರಣೆಯು ತಲೆ ಎತ್ತಿದೆ, ಸ್ವಾರ್ಥತ್ಯಾಗದ ಆವಶ್ಯಕತೆ ಕಡಮೆ ಎನಿಸಿ ಅಸೂಯಾಬುದ್ಧಿ ಬಯಲಿಗೆ ಬಂದಿದೆ, ತನ್ನ ದೇಶಬಾಂಧವರೆಂಬ ವಿಶಾಲ

ದೃಷ್ಟಿ ಮರೆಯಾಗಿ ತನ್ನ ಪಕ್ಷ ( Party ) ಎಂಬ ಸಂಕುಚಿತದೃಷ್ಟಿ ಪರೆ ಬಿಟ್ಟಿದೆ, ಯುದ್ಧದಲ್ಲಿ ದೇಹವಿಡಲು ಆತುರರಿದ್ದವರು ಇಂದು ಅಧಿಕಾರಾಸನಗಳಲ್ಲಿ ಕೂತು ಬಿಡಲು ಹಾತೊರೆಯುತ್ತಿದ್ದಾರೆ. ಈ ಕಾಲದಲ್ಲಿ ಕೆಮಾಲನು ರಾಷ್ಟ್ರೀಯ ಸಭಾಗೃಹದಲ್ಲಿ ಎಷ್ಟೋ ವಿಚಿತ್ರ ಪ್ರಸಂಗಗಳನ್ನು ಕಣ್ಣಾರೆ ಕಂಡನು. ಒಮ್ಮೊಮ್ಮೆ ಶಾಸನಸಭಾಗೃಹವು ಕುಸ್ತಿಯ ಕಣವಾಗುತ್ತಿದ್ದಿತು, ಒಮ್ಮೊಮ್ಮೆ ಕೊಲೆಗಡಕರ ಕುಟೀರವೆನಿಸುತ್ತಿದ್ದಿತು, ಒಮ್ಮೊಮ್ಮೆ ಅವಾಚ್ಯ ಬೈಗಳ ಪ್ರದರ್ಶನಮಂದಿರವೆನಿಸುತ್ತಿದ್ದಿತು! ಇದಲ್ಲದೆ ಇಂದು ಯಾರ ಹೆದರಿಕೆಯೂ ತಮಗಿಲ್ಲವೆಂದೂ, ಸುಲ್ತಾನಿಕೆ ಕೂಡ ಹೋದದ್ದರಿಂದ ತಾವೇ ಸರ್ವಸಮ್ರಾಟರೆಂದೂ, ಯುದ್ಧದಲ್ಲಿ ಗೆದ್ದ ವೀರ ಕೆಮಾಲನು ಇಂದು ತಮ್ಮ ದಾಸಾನುದಾಸನೆಂದೂ, ತಮ್ಮ ಉಸಿರು ಅಲುಗಾಡದೆ ದೇಶದ ವ್ಯವಹಾರವೆ ನಡೆಯುದೆಂದೂ ಈ ಸದಸ್ಯರು ಹೆಮ್ಮೆಯಿಂದ, ಹುಡುಗಾಟದಿಂದ, ಹೆದರಿಕೆ ಇಲ್ಲದೆ, ಹೊಣೆಗಾರಿಕೆ ಇಲ್ಲದೆ ವ್ಯವಹರಿಸತೊಡಗಿದರು. ದೇಶದ ಆಳಿಕೆಯಾಗಲಿ, ಪರದೇಶದವರೊಡನೆ ವ್ಯವಹಾರವಾಗಲಿ ನಡೆಯುವುದೆ ಅಸಾಧ್ಯವಾಯಿತು. ಸದ್ಯಕ್ಕೆ ಕೆಮಾಲನ ಅನುಯಾಯಿಗಳೆ ಮಂತ್ರಿಗಳಾಗಿದ್ದರು. ಇದಕಾಗಿ ಪ್ರತಿಸ್ಪರ್ಧಿಗಳಿಗೆ ಅಸೂಯೆ, ಅಸಹ್ಯ. ಯಾರು ಮಂತ್ರಿಯಾದರೇನು? ಶಾಸನ ಸಭೆಯಲ್ಲಿ ತೀರ್ಮಾನವಾಗದ ಹೊರತು ಯಾವ ಕೆಲಸವನ್ನೂ ಮಾಡುವಂತಿಲ್ಲ. ಇದೇ ಸದಸ್ಯರ ದರ್ಪೋಕ್ತಿ. ಇತ್ತ ಸುಲ್ತಾನನಿಲ್ಲ, ಇತ್ತ ಮಂತ್ರಿಗಳಿಗೆ ಶಾಸನ ಸಭೆಯ ಸಹಕಾರವಿಲ್ಲ. ಹೀಗಾಗಿ ರಾಜಕಾರಣದಲ್ಲಿ ಅಗ್ಗಂಟೇ ( deadlock ) ಪ್ರಾಪ್ತವಾಯಿತು.

ಕೆಮಾಲನಿಗೆ ಪರಿಸ್ಥಿತಿಯು ಸಂಪೂರ್ಣ ಅರಿವಿದ್ದಿತು; ಇಷ್ಟೆ ಅಲ್ಲ. ಈ ಪರಿಸ್ಥಿತಿಯನ್ನು ಸುಧಾರಿಸಲು ಯಾವ ಉಪಾಯಗಳನ್ನು ಕೈಕೊಳ್ಳಬೇಕೆಂಬುದನ್ನೂ ಅವನು ನಿರ್ಣಯಿಸಿಕೊಂಡಿದ್ದನು. ಕೆಮಾಲನ ಸ್ವಭಾವದ ಇದೊಂದು ವೈಶಿಷ್ಟ್ಯವೆಂದು ಹೇಳಬಹುದು. ಬೆಕ್ಕಿನಂತಹ ಸ್ವಭಾವ ಅವನದು; ಯಾವಾಗಲೂ ಹೊಂಚು ಹಾಕಿ, ಸಮಯ

ಕಾದುಕೊಂಡು ಕುಳಿತುಕೊಳ್ಳುವುದು. ಅಡುಗೆಯ ಮನೆಯಲ್ಲಿಯೆ ಕುಳಿತುಕೊಂಡ ಮೇಲೆ ಇಲಿಯು ಕಣ್ಣೆದುರು ಸುಳಿಯದೆ ಹೋದೀತೆ? ಸ್ವಲ್ಪ ವಿಲಂಬವಾಗುವುದು, ಸ್ವಲ್ಪ ಸಹಿಷ್ಣುತೆ ಬೇಕು; ನಿಜ. ಆದರೆ ತಾನಾಗಿಯೆ ಇಲಿಯನ್ನು ಹಿಡಿಯ ಹೋದರೆ ಇಲಿಯು ತಪ್ಪಿಸಿಕೊಳ್ಳಲು ಶಕ್ಯವಿದ್ದಷ್ಟು ಯತ್ನಿಸುವುದು; ಹಾಗೆಯೆ ಒಂದೇ ಸವನೆ ಬೆನ್ನುಹತ್ತಿದರೆ ಕೊನೆಗೆ ಆ ಇಲಿಯು ಆ ಕೋಣೆಯನ್ನು ಬಿಟ್ಟೇ ಹೋಗಬಹುದು. ಆದರೆ ತನಗೆ ಹಸಿವೆ ಆದಾಗ ಹೊರಬಿದ್ದ ಇಲಿಯು ಮೈಮರೆತಿರುವುದು. ಅನ್ನದ ವಾಸನೆಯ ಜೋರಿನಲ್ಲಿ ಮೂಲೆಯಲ್ಲಿ ಕುಳಿತ ಬೆಕ್ಕನ್ನು ಅದು ಅಲಕ್ಷಿಸಬಹುದು. ಇಂತಹ ಸಮಯದಲ್ಲಿ ಅನಾಯಾಸವಾಗಿ ಮತ್ತು ಗುರಿ ತಪ್ಪದೆ ಇಲಿಯು ತನ್ನ ಕೈಸೇರುವುದು. ಹೀಗಿರುವಾಗ ವ್ಯರ್ಥವಾಗಿ ಮನೆತುಂಬ ಓಡಾಡಿ ಮನೆಯವರಿಗೂ ಅಸಹ್ಯವಾಗುವ ಹುಚ್ಚು ಏಕೆ? ಶಕ್ತಿಯನ್ನು ಕಾದುಕೊಳ್ಳೋಣ, ಶತ್ರುವು ನಿರ್ಬಲನಿದ್ದಾಗ ಅವನನ್ನು ನುಂಗೋಣ ಎಂಬುದು ಯುದ್ಧವಿಶಾರದನಾದ ಕೆಮಾಲನ ಯುಕ್ತಿ. ಈಗಲಾದರೂ ಅವನು ಇದೇ ವೃತ್ತಿಯಿಂದ ಹೊತ್ತು ಕಾದು ಕುಳಿತನು. ಒಂದು ಕಡೆ ಅತರ್ಕಿತವಿಜಯಗಳನ್ನು ಸಂಪಾದಿಸಿ ಜನರ ಆರಾಧ್ಯದೇವತೆಯಾಗಿದ್ದಾನೆ; ಇನ್ನೊಂದು ಕಡೆ ಅದೇ ವಿಜಯಗಳಿಗಾಗಿ ಶಾಸನಸಭೆಯ ಅನೇಕ ಸದಸ್ಯರ ಅಸೂಯೆಗೊಳಗಾಗಿದ್ದಾನೆ. ಸುಲ್ತಾನಿಕೆಯನ್ನು ಕಿತ್ತೊಗೆದ ಮೇಲೆ, ಆಡಳಿತದಲ್ಲಿ ಅಸ್ಥಿರತೆ ಪಸರಿಸಿದ ಮೇಲೆ ಅನೇಕ ಜನರು ಕೈಕಟ್ಟಿಕೊಂಡು ಕೆಮಾಲನೆದುರಿಗೆ ಬಂದು ನಿಂತರು.

ನಮ್ಮನ್ನು ಉದ್ಧಾರಮಾಡಿದವನು ನೀನು; ನಮ್ಮನ್ನು ಉಳಿಸುವವನೂ ನೀನೇ ಆಗಬೇಕು. ನಮಗೆ ಬೇಡಾದ ಸುಲ್ತಾನನು ನಾಶವಾದನು; ಏಳು, ನೀನು ನಮಗೆ ಬೇಕಾದ ಸುಲ್ತಾನನಾಗು' ಎಂದರು. ಆದರೆ- ಉಹುಂ..ಸ್ವಾರ್ಥ ಸಾಧಿಸುವುದಕ್ಕಾಗಿ, ಅತ್ಯಂತ ವೈಭವವನ್ನು ಉಪಭೋಗಿಸುವುದಕ್ಕಾಗಿ ತಾನು ಇಷ್ಟೊಂದು ಪರಿಶ್ರಮ ಪಟ್ಟಿರುವನೆ? ಇಡಿಯ ಸೈನ್ಯವು ತನ್ನನ್ನು ಏಕನಿಷ್ಠತೆಯಿಂದ, ಶ್ರದ್ಧೆಯಿಂದ ಪೂಜಿಸುವಾಗ ತಾನು ಇಷ್ಟರಲ್ಲಿ ಬೇಕಾದ ಉಚ್ಚಸ್ಥಾನವನ್ನು ಆಕ್ರಮಿಸ

ಬಹುದಾಗಿತ್ತು. ಆದರೆ ತನ್ನ ಪ್ರಯತ್ನಗಳು ತನಗಾಗಿ ಅಲ್ಲ, ತನ್ನ ತರ್ಕ ಸ್ಥಾನವು ಉಚ್ಚಪದವಿಯನ್ನೇರಬೇಕೆಂದು; ತಾನು ಸಹಿಸಿದ ಕಷ್ಟಗಳಿಂದ ಬಡತನ–ದಡ್ಡತನಗಳಲ್ಲಿ ಕೊಳೆಯುವ ತನ್ನ ಬಾಂಧವರು ಬಲಿತು, ಬೆಳೆಯ ಬೇಕೆಂದು. ತನಗೆ ಯಾವ ಪದವಿಯೂ ಬೇಡ. ತನಗೆ ಪದವಿ ಬಿಡಲಿ, ಆದರೆ ತನ್ನ ದೇಶದ ಗತಿಯಾದರೂ ಸುಧಾರಿಸಿದೆಯೆ ? ತನ್ನ ದೇಶದ ಪ್ರಗತಿಯು ಸ್ಥಿರವಾದ ಮಾರ್ಗವನ್ನವಲಂಬಿಸಿದೆಯೆ ? ಅದು ತನ್ನ ಅಧಿಕಾರವಲ್ಲ ಎಂದನು ಕೆಮಾಲನು ! 'ಶಾಸನಸಭೆ ಇದೆ, ಸದಸ್ಯರಿದ್ದಾರೆ, ಅವರು ಧೀರರಿದ್ದಾರೆ, ವೀರರಿದ್ದಾರೆ, ಸ್ವಾರ್ಥತ್ಯಾಗಿಗಳಿದ್ದಾರೆ (!), ಇಂದು ಎಲ್ಲ ಅಧಿಕಾರವೂ ಅವರ ಕೈಯಲ್ಲಿದೆ, ಅವರನ್ನೆ ಕೇಳಿಕೊಳ್ಳಿರಿ. ನಾನು ಯಾರು ? ಮಿಕ್ಕವರಂತೆ ನಾನೊಬ್ಬ ದೇಶಸೇವಕ, ಸ್ವಾತಂತ್ರ್ಯ ಯುದ್ಧದಲ್ಲಿ ಸೈನಿಕ. ಶಾಸನಸಭೆಯು ನನಗೆ ಆಜ್ಞೆ ವಿಧಿಸಿದರೆ (!) ನಾನು ಸಿದ್ಧನಿದ್ದೇನೆ. ಅಲ್ಲಿಯವರೆಗೆ ಯಾವ ಅಧಿಕಾರದಿಂದ ನಾನು ಈ ಅವ್ಯವಸ್ಥೆಯಲ್ಲಿ ಕೈಹಾಕಲಿ ?' ಎನ್ನುತ್ತಿದ್ದನು ! ಹೀಗೆ ಹೇಳುವುದರಲ್ಲಿ ಕೆಮಾಲನಿಗೆ ಎರಡು ಉದ್ದೇಶಗಳಿದ್ದುವು; ಒಂದು, ತನ್ನ ವಿರೋಧಿಗಳು ತಮ್ಮತಮ್ಮೊಳಗೆ ಬಡಿದಾಡಿ ಹಣ್ಣಾಗಿ ಜನರ ದೃಷ್ಟಿಯಲ್ಲಿ ವರ್ಚಸ್ಸ ಕಳೆದುಕೊಳ್ಳಲು ಅವಕಾಶವನ್ನು ಕೊಡುವುದು; ಎರಡು, ತಾನು ಕೈಹಾಕುವ ಮುಂಚೆ ತನಗಾಗಿ ಜೀವನವನ್ನು ಕೊಡುವುದಕ್ಕಾಗಲಿ ತನ್ನ ವಿಚಾರಗಳನ್ನು ನಡೆಸುವುದಕ್ಕಾಗಲಿ ಒಂದು ಪಕ್ಷವನ್ನು ಸಿದ್ಧ ಪಡಿಸುವುದು.

ವಿರೋಧವು ಹೆಚ್ಚಾದಂತೆ ಕರ್ತೃತ್ವಶಕ್ತಿ ಚುರುಕಾಗುವುದು ಕೆಮಾಲನ ಸ್ವಭಾವದ ಒಂದು ವಿಶೇಷವಾಗಿತ್ತು. ಈಗಲಾದರೂ ಹಾಗೆಯೆ ಆಯಿತು. ಇದುವರೆಗೆ ಕೆಮಾಲನನ್ನು ನಂಬಿ ನಡೆಯುವ ಪಕ್ಷವೆಂದರೆ ಸೈನ್ಯವೊಂದೆ ಆಗಿತ್ತು. ತನಗೊಂದು ಪಕ್ಷಬಲವು ದೊರೆ ಯುವವರೆಗೆ ಕೆಮಾಲನು ಸೈನಿಕರನ್ನು ಸರ್ವದಾ ಸಂತುಷ್ಟಗೊಳಿಸಲು ಜಾಗರೂಕನಾಗಿದ್ದನು. ಆದರೆ ಸೈನ್ಯವನ್ನು ಸಂತುಷ್ಟಗೊಳಿಸುವುದೆಂದರೆ ಪೆಚ್ಚಿನ ಕೆಲಸ; ಇದಲ್ಲದೆ ಆಗಾಗ ಯುದ್ಧಗಳನ್ನೂ ಕೆಣಕುತ್ತ ಹೋಗ

ಬೇಕು. ಈ ಗೊಡವೆಯೆ ಬೇಡೆಂದು ಕೆಮಾಲನು ಸೈನ್ಯದ ಸಹಾಯ ದಿಂದ ಹೊಸತಾದ ಪಕ್ಷವನ್ನು ನಿರ್ಮಿಸತೊಡಗಿದನು. ಸ್ವತಃ ದೇಶದ ಸಂಚಾರವನ್ನು ಕೈಕೊಂಡನು. 'ಗಾಝಿ,' 'ವೀರ,' 'ಮಹಾವಿಭೂತಿ' 'ಪರಕೀಯರನ್ನು ಹೊಡೆದೋಡಿಸಿದ ವಿಜಯಶಾಲಿ' ಇಂತಹ ಕೆಮಾ ಲನು ಸ್ವತಃ ತಮ್ಮ ಕಡೆ ಬಂದನೆಂದು ಜನರಲ್ಲಿ ಅತ್ಯಂತ ಉತ್ಸಾಹ. ಆದರೆ ಗಾಝಿಯ ಮನಸಿನಲ್ಲಿ ಕುದಿಯುತ್ತಿದ್ದ ಕ್ರಾಂತಿಕಾರಕ ವಿಚಾರ ಗಳ ಸುಳುವಾದರೂ ಹತ್ತಿದ್ದರೆ ಕುರಿಗಳಂತೆ ಹಿಂಡುಗಟ್ಟಿ ನೆರೆಯುವ ಈ ಜನರು ಪಿಡುಗಿನಿಂದ ಓಡಿದಂತೆ ಓಡುತ್ತಿದ್ದರು. ಆದರೆ ಚಾಣಾಕ್ಷನಾದ ಕೆಮಾಲನು ತನ್ನ ವಿಚಾರಗಳನ್ನು ಸದ್ಯಕ್ಕೆ ತನ್ನಲ್ಲಿಯೆ ಇಟ್ಟುಕೊಂಡಿ ದ್ದನು. ಕೂಡಿದ ಜನರಿಗೆಲ್ಲ ದೇಶಕ್ಕೆ ಒದಗಿದ ಗಂಡಾಂತರಗಳ ಕಲ್ಪನೆ ಮಾಡಿಕೊಟ್ಟನು. 'ಪರಕೀಯ ಶತ್ರುಗಳು ಓಡಿಹೋದರೆ ನಮ್ಮ ಕೆಲಸ ಮುಗಿದಂತಾಗಲಿಲ್ಲ. ಅವರಿಗಿಂತ ಹೆಚ್ಚು ಅಪಾಯಕಾರಕವಾದ ಒಳಗಿನ ಶತ್ರುವನ್ನೂ ನಾವು ಹೊಡೆದೋಡಿಸದ ಹೊರತು ನಮ್ಮ ದೇಶಕ್ಕೆ ಸುಖ-ಶಾಂತಿಗಳಿಲ್ಲ. ನಮ್ಮ ಯುದ್ಧವಿನ್ನೂ ಮುಗಿದಿಲ್ಲ. ನಾವು ನಮ್ಮ ಸಂಘಟನೆಯನ್ನು ಬೆಳೆಸೋಣ.' ಮೊದಲಾಗಿ ಜನರನ್ನು ಹುರುಪುಗೊಳಿ ಸುತ್ತಿದ್ದನು. ಒಳಗಿನ ಶತ್ರುಯಾರು-ಎಂಬುದರ ಕಲ್ಪನೆ ಜನರಿಗೆ ಮಾತ್ರ ಇರಲಿಲ್ಲ. ನಮ್ಮ ಉದ್ಧಾರಕನಾದ ಕೆಮಾಲನು ಹೇಳಿದನೆಂದ ಮೇಲೆ ಒಳ ಗಿನ ಶತ್ರು ಇರಲೇಬೇಕೆಂದು ಈ ಭಾವಿಕರ ನಂಬುಗೆ. ಆದರಿಂದ ಅವರು ತಂಡು-ತಂಡಾಗಿ ಕೆಮಾಲನ 'ಪ್ರಜಾಪಕ್ಷ'ದ ಸದಸ್ಯರಾದರು. ಊರೂ ರಿಗೆ 'ಪ್ರಜಾಪಕ್ಷ'ದ ಸಂಘಟನೆ ಸ್ಥಾಪಿಸಲ್ಪಟ್ಟಿತು. ಪ್ರತಿಯೊಂದು ಊರೊಳಗೆ ಆಡಳಿತದ ಮತ್ತು ಅಧಿಕಾರದ ಸೂತ್ರಗಳು ಪ್ರಜಾಪಕ್ಷ (People's Party) ದವರ ಕೈಯಲ್ಲಿ. ದೇಶವನ್ನೆಲ್ಲ ಆಕಾಶದಂತೆ ಆವರಿಸಿ ನಿಂತ ಈ ಪ್ರಜಾಪಕ್ಷದ ಅಧ್ಯಕ್ಷ ಕೆಮಾಲನೆ. ಇತ್ತ ಶಾಸನ ಸಭೆಯ ಅಧ್ಯಕ್ಷನೂ ಕೆಮಾಲನೆ. ವಿರೋಧಪಕ್ಷದವರಿಗೆ ಮಾತ್ರ ಈಗ ಹೆದರಿಕೆಯಾಗತೊಡಗಿತು. ತಮ್ಮ ಸದ್ದನ್ನು ಅಡಗಿಸಲು ಮತ್ತು ತನ್ನ ಪ್ರಭುತ್ವವನ್ನು ಬೆಳೆಸಲು ಕೆಮಾಲನು ಇಷ್ಟೊಂದು ಪರಿಶ್ರಮ ನಡೆಸಿದ್ದಾ ನೆಂದು ಅವರಿಗೆ ಹೊಳೆಯದೆ ಹೋಗಲಿಲ್ಲ. ಕೊನೆಗೆ ವಿರೋಧಿಪಕ್ಷದ

ಕೆಲ ಜನರು ಕೆಮಾಲನ ಕಡೆ ತಮ್ಮ ದೂರನ್ನು ಒಯ್ದರು. ಕೆಮಾಲನು ಮಹಾರಾಷ್ಟ್ರೀಯ ಸಭೆ ( Grand National Assembly ) ಯ ಅಧ್ಯಕ್ಷನಿದ್ದುದರಿಂದ ಅವನು ಬೇರೆ ಬೇರೆ ಪಕ್ಷಗಳ ಪರಸ್ಪರ ತಿಕ್ಕಾಟದಿಂದ ಅಲಿಪ್ತನಾಗಿರಬೇಕೆಂದೂ, ಇದಲ್ಲದೆ ಅನೇಕ ಪಕ್ಷಗಳಲ್ಲಿ ಒಂದಾದ ಪ್ರಜಾಪಕ್ಷದ ಅಧ್ಯಕ್ಷನಾಗುವುದು ಉಚಿತವಲ್ಲವೆಂದೂ, ಹಿರಿಯನೆನಿಸಿ ತಾನು ನಿಷ್ಪಕ್ಷಪಾತಿಯಾಗಿ ಎಲ್ಲರ ನಡುವೆ ಸಮತೋಲದಂತಿರಬೇಕೆಂದೂ ಕೆಮಾಲನಿಗೆ ಅರಿಕೆ ಮಾಡಿಕೊಂಡರು. ಕೆಮಾಲನು ಚಕಿತನಾದವನಂತೆ ನಟಿಸಿದನು. ಬೇರೆ ಬೇರೆ ಪಕ್ಷಗಳ ಪರಸ್ಪರ ತಿಕ್ಕಾಟ! ಬೇರೆ ಬೇರೆ ಪಕ್ಷಗಳು ಇರಬಹುದೆಂಬ ಕಲ್ಪನೆಯೆ ತನಗಿದ್ದಿಲ್ಲ ಎಂದನು! ಇಷ್ಟೇಕೆ? ಬೇರೆ ಬೇರೆ ಪಕ್ಷಗಳು ಇರುವುದು ಅಶಕ್ಯ, ಅಯೋಗ್ಯ ಎಂದು ಅಭಿಪ್ರಾಯಪಟ್ಟನು. ತುರ್ಕಸ್ತಾನಕ್ಕೆ ಪ್ರಗತಿಗಾಗಿ ಏಕಮತ್ಯವು ಅವಶ್ಯ. ಅದಕಾಗಿ ತುರ್ಕಸ್ತಾನದಲ್ಲಿ ಒಂದೇ ಪಕ್ಷವಿರಬೇಕಾಗಿದೆ. ಇಡಿಯ ರಾಷ್ಟ್ರವೆ ಒಂದೇ ಒಂದು ಪಕ್ಷ. ಅದಕಾಗಿಯೆ ರಾಷ್ಟ್ರಾಧಿಪತಿಯಾದ ತಾನು ದೇಶವನ್ನೆಲ್ಲ ವ್ಯಾಪಿಸಿದ ಒಂದೇ ಒಂದು ಪಕ್ಷವಾದ ಪ್ರಜಾಪಕ್ಷದ ಅಧ್ಯಕ್ಷನಾದದ್ದು ಎಂದು ಉತ್ತರ ಕೊಟ್ಟನು. ಆಗ ವಿರೋಧಿಗಳಿಗೆ ಪೂರ್ಣ ಎಚ್ಚರವಾಯಿತು. ಕೆಮಾಲನು ಬುದ್ಧಿಪುರಸ್ಸರವಾಗಿ ಆಟವನ್ನು ಹೂಡಿದ್ದಾನೆಂದು ಅವರು ಕನಲಿದರು. ವಿರೋಧಿಪಕ್ಷದ ಮುಂದಾಳುವಾದ ರಾವುಫ್ ಎಂಬವನು ರೇಗಿದನು. ಇವನು ಮೊದಲಿನಿಂದಲೂ ಕೆಮಾಲನ ಜೊತೆಯಲ್ಲಿಯೆ. ಕ್ರಾಂತಿಯಲ್ಲಿ ನೆರವಾಗಿದ್ದರೂ ಇವನ ಸ್ವಭಾವಕ್ಕೆ ಕೆಮಾಲನ ಕ್ರಾಂತಿಕಾರಕ ವಿಚಾರಗಳು ತಡೆಯುತ್ತಿರಲಿಲ್ಲ. ಸುಲ್ತಾನಿಕೆಯನ್ನು ಕಿತ್ತೊಗೆದಂದಿನಿಂದಂತೂ ಇವನ ರಕ್ತವು ಕುದಿಯುತ್ತಲಿದ್ದಿತು. ಇದ್ದ ಸುಲ್ತಾನನ್ನು ತೆಗೆದು ಇನ್ನೊಬ್ಬ ಸುಲ್ತಾನನನ್ನು ಪಟ್ಟಗಟ್ಟಬೇಕೆಂದು ಇವನು ಹಟತೊಟ್ಟಿದ್ದನು. ಆದರೆ ಕೆಮಾಲನು ಇವನ ಮತವನ್ನು ಕಾಲ್ಕೆಳಗೆ ತುಳಿದಂತೆ ಮಾಡಿ ಸುಲ್ತಾನಿಕೆಯನ್ನೆ ಒರೆಸಿಬಿಟ್ಟನು. ಹಾಂ—ಇದೇನೊ ಕೆಮಾಲನ ಸ್ವಾರ್ಥದ ಕುಟಿಲತಂತ್ರವೆಂದು ಇವನು ಸಂಶಯಗೊಂಡನು. ಈಗ ಕೆಮಾಲನು ಕೊಟ್ಟ ಉತ್ತರದಿಂದ

ಇವನ ಸಂಶಯವು ದೃಢವಾಯಿತು. ಕೆಮಾಲನು ಸರ್ವಾಧಿಕಾರಿಯಾಗಲು ಹೊಂಚುಹಾಕಿದ್ದಾನೆ ಎಂದು ರಾವುಫನ ಮತ್ತು ಅವನ ಅನುಯಾಯಿಗಳ ಅಭಿಪ್ರಾಯ. ಕೆಮಾಲನಿಗೆ ಸರ್ವಾಧಿಕಾರಿಯಾಗಲು ಯಾವ ಅಧಿಕಾರ? ಯುದ್ಧದಲ್ಲಿ ಕುಶಲನಿದ್ದ ಮಾತ್ರಕ್ಕೆ ಮುತ್ಸದ್ದಿತನದಲ್ಲೂ ಕುಶಲನಿರುವನೆಂಬ ನಿಯಮವಿದೆಯೆ? ಇದಲ್ಲದೆ ಯುದ್ಧದಲ್ಲಾದರೂ ಕೆಮಾಲನು ಮಾಡಿದ ಮಹತ್ಕಾರ್ಯವೇನು? ಆಯಕಟ್ಟಿನ ಪ್ರಸಂಗಗಳಲ್ಲಿ ತಮ್ಮೆಲ್ಲರ ಸಹಾಯವಿಲ್ಲದಿದ್ದರೆ ಕೆಮಾಲನು ಜಯಶಾಲಿಯಾಗುವುದಂತೂ ದೂರದಲ್ಲಿರಲಿ, ಜೀವದಿಂದ ಕೂಡ ಉಳಿಯಲು ಶಕ್ಯವಿದ್ದಿಲ್ಲ. ಹೀಗಿರಲು, ತಮ್ಮೆಲ್ಲರ ಬೆನ್ನುಮೇಲಿಂದ ಮೇಲಕ್ಕೇರಿ ಈಗ ತಮ್ಮನ್ನೆ ನೆಲಕ್ಕೆ ಕುಗ್ಗಿಸಬೇಕೆಂದಿದ್ದಾನೆ. ಸ್ವಾರ್ಥಿ! ಕುಟಿಲ!

ರಾವುಫನ ವಿಚಾರಗಳಿಗೆ ಮೇರೆ ಮೀರಿ ಬೆಂಬಲ ದೊರೆಯಿತು. ದಿನದಿನಕ್ಕೆ ಶಾಸನಸಭೆಯಲ್ಲಿ ವಿರೋಧ ಬೆಳೆಯಿತು. ಮಂತ್ರಿಗಳು ಕೆಮಾಲನ ಕೈಗೊಂಬೆಗಳೆಂದು ಸಿಟ್ಟಿನಿಂದ ಅವರ ಯೋಜನೆಗಳಿಗೆಲ್ಲ ವಿರೋಧವಾಗಿ ಆಡಳಿತ ತಟಸ್ಥವಾದಂತಾಯಿತು. ಒಮ್ಮೆ ಶಾಸನಸಭೆಯನ್ನು ಮುರಿದು ಚುನಾವಣೆಯನ್ನು ನಡೆಸಿದನು ಕೆಮಾಲನು. ಹೊಸತಾಗಿ ಆರಿಸಿಬಂದ ಸದಸ್ಯರೂ ಕೂಡ ಕೆಮಾಲನಿಗೆ ವಿರೋಧವನ್ನೆ ತೋರಿಸತೊಡಗಿದರು. ಇದುವರೆಗೆ ಸಮಯವನ್ನು ಕಾದುತ್ತ ಕುಳಿತಿದ್ದ ಕೆಮಾಲನಿಗೆ ಕೊನೆಗೆ ಸಮಯ ಸಾಧಿಸಿತು. ರಾವುಫ್ ಮೊದಲಾದ ವಿರೋಧಿ ಮುಂದಾಳುಗಳು ಕಾರಣಾಂತರಗಳಿಂದ ರಾಜಧಾನಿಯಾದ ಅಂಗೋರಾ ಪಟ್ಟಣವನ್ನು ಬಿಟ್ಟು ಹೋಗಿದ್ದರು. ಆ ಸಮಯ ಸಾಧಿಸಿ ಕೆಮಾಲನು ಕಪಟನಾಟಕವೊಂದನ್ನು ಹೂಡಿದ. ತನ್ನ ಅನುಯಾಯಿಯಾದ ಮತ್ತು ಮುಖ್ಯ ಮಂತ್ರಿಯಾದ ಇಸ್ಮೆತ್ ಪಾಶಾನನ್ನೂ ಅವನ ಸಂಗಡಿಗರನ್ನೂ ಮನೆಗೆ ಕರೆಕಳುಹಿಸಿದನು; ಮರುದಿವಸ ಮಂತ್ರಿಮಂಡಲವು ರಾಜೀನಾಮೆಯನ್ನು ಕೊಡಬೇಕೆಂದು ಹೇಳಿದನು. 'ನಿಮ್ಮೆಲ್ಲರ ವಿರೋಧವಿದ್ದು, ಬಹುಮತವಾಗದ್ದಕ್ಕಾಗಿ ಮಂತ್ರಿಮಂಡಲವು ರಾಜೀನಾಮೆಯನ್ನು ಕೊಟ್ಟಿದೆ. ಇದು ಯೋಗ್ಯ ನಡತೆ ಎಂದು ಕಂಡುಬಂದದ್ದರಿಂದ

ನಾನು ಆ ರಾಜೀನಾಮೆಯನ್ನು ಸ್ವೀಕರಿಸಿದ್ದೇನೆ. ಈಗ ಬಹುಮತ ವುಳ್ಳ ನೀವು ಮಂತ್ರಿಮಂಡಲವನ್ನು ಕೂಡಿಸಬೇಕು' ಎಂದು ವಿರೋಧಿ ಗಳಿಗೆ ಹೇಳಿದನು. ಅದೇ ರಾತ್ರಿ ತನ್ನ ಅನುಯಾಯಿಗಳನ್ನು ಮತ್ತೆ ಕರೆ ಕಳುಹಿಸಿ ಅವರಲ್ಲೊಬ್ಬನಿಗೆ ತಂತ್ರೋಪದೇಶವನ್ನು ಮಾಡಿದನು. 'ನಾಳೆ ಮಂತ್ರಿಮಂಡಲ ಕೂಡದಂತೆ ಎಷ್ಟು ಕಿಡಿಗೇಡಿತನವು ಅವಶ್ಯವಿದೆಯೊ ಅಷ್ಟೆಲ್ಲವನ್ನೂ ನೀನು ಮಾಡು. ಕೊನೆಗೆ ಮಂತ್ರಿಮಂಡಲವು ಅಸಾಧ್ಯ ವೆನಿಸಲು ಎಲ್ಲವನ್ನೂ ನನಗೆ ಒಪ್ಪಿಸಬೇಕೆಂಬ ಸೂಚನೆಯನ್ನು ಮಂಡಿಸು. ಮುಂದಿನ ವ್ಯವಸ್ಥೆಯನ್ನು ನಾನು ನೋಡಿಕೊಳ್ಳುವೆ' ಎನುತ್ತ ತಡೆ ಯದೆ ಸಂತಾಪದಿಂದ ಹಲ್ಲು ಕಟಿಯುತ್ತ 'ನಾನು ನೋಡಿಕೊಳ್ಳುವೆ, ತುರ್ಕಸ್ತಾನವು ಪ್ರಜಾಸತ್ತಾತ್ಮಕ ರಾಜ್ಯ ಎಂಬ ಘೋಷಣೆಯ ವ್ಯವ ಸ್ಥೆಯನ್ನು ನಾನೇ ನೋಡಿಕೊಳ್ಳುವೆ' ಎಂದನು. ಆದರೆ ಮರುದಿವಸ ಕಿಡಿಗೇಡಿತನದ ಅವಶ್ಯಕತೆಯೆ ಇರಲಿಲ್ಲ. ಮುಂದಾಳುಗಳೆ ಇಲ್ಲದಾಗ ಮುಂದಾಳುಗಳ ಮಂಗತನಕ್ಕೆ ಪ್ರಾರಂಭವಾಯಿತು. ಮಾಂಸಕ್ಕಾಗಿ ಹಾತೊರೆವ ಹಕ್ಕಿಗಳಂತೆ ಎಲ್ಲರೂ ತಂತಮ್ಮ ಸಲುವಾಗಿಯೆ ಕಾದಾಡ ತೊಡಗಿದರು. ಮಂತ್ರಿಮಂಡಲದ ಬದಲಾಗಿ ಕುತಂತ್ರಿಮಂಡಲದ ಅವ್ಯ ವಸ್ಥೆ ಹಬ್ಬಿತು. ಕೊನೆಗೆ ಮೊದಲು ಗೊತ್ತುಪಡಿಸಿದಂತೆ ಕೆಮಾಲನ ಅನುಯಾಯಿಯು ಎದ್ದು ನಿಂತು 'ಮಂತ್ರಿಮಂಡಲವನ್ನು ಕೂಡಿಸುವುದು ಈ ಶಾಸನಸಭೆಯಿಂದ ಆಗದ್ದಕ್ಕಾಗಿ ಕೆಮಾಲ ಪಾಶಾ ಇವರು ತಾವೇ ಮುಂದಾಗಿ ಈ ಜವಾಬ್ದಾರಿಯನ್ನು ವಹಿಸಬೇಕು' ಎಂದು ಸೂಚಿಸಿ ದನು. ಕಾದಾಡಿ, ದಣಿದು, ಬೆವತು, ಬಾಯ್ದೆರೆದು ಕೂತ ಸದಸ್ಯರು ಉಸಿರಿಲ್ಲದೆ ತಲೆ ತೂಗಿದರು. ಗೊತ್ತುವಳಿಯು ಸ್ವೀಕೃತವಾಯಿತು. ತುರ್ಕಸ್ತಾನದ ರಾಷ್ಟ್ರಾಧ್ಯಕ್ಷರಾದ ಗಾಝಿ ಮುಸ್ತಾಫಾ ಕೆಮಾಲ ಪಾಶಾ ಇವರಿಗೆ ಮಹಾ ರಾಷ್ಟ್ರೀಯ ಸಭೆಯ ನಮ್ರತಾಪೂರ್ವಕ ವಾದ ಕರೆಯು ಕಳುಹಿಸಲ್ಪಟ್ಟಿತು.

ಯುದ್ಧದಲ್ಲಿ ಗಾಝಿ, ಮುತ್ಸದ್ದಿತನದಲ್ಲಿ ಗಾಝಿ, ಕಿಡಿಗೇಡಿತನದ ಕಾಜಿ! ಮುಸ್ತಾಫಾನು ಮನಸಿನೊಳಗೆಯೆ ಮುಗುಳ್ನಗೆ ನಗುತ್ತಲಿದ್ದಾನೆ.

ಮನೆಯೊಳಗೆ ಕೂತಲ್ಲಿಯೆ ಸೆಟೆದು ಕೂಡುತ್ತಲಿದ್ದಾನೆ. ಕಿಟಿಕಿಯೊಳಗಿಂದ ಕದ್ದು, ಎದ್ದು ನೋಡುತ್ತಲಿದ್ದಾನೆ. ಅಷ್ಟೊಂದು ಆತುರ, ಅಷ್ಟೊಂದು ಆತ್ಮವಿಶ್ವಾಸ! ಆಗಾಗ ತುಟಿ ಕಚ್ಚುತ್ತಿದ್ದಾನೆ ಕೋಪದ ಸ್ಮರಣೆಯಿಂದ. ನಡುನಡುವೆ ಆವೇಶಭರಿತನಾಗುತ್ತಲಿದ್ದಾನೆ. ಉಬ್ಬುತ್ತಾನೊಮ್ಮೆ ಹೆಮ್ಮೆಯಿಂದ. ಕುಣಿಯುತ್ತಾನೊಮ್ಮೆ ಕುತೂಹಲದಿಂದ. ಸಿಡಿಮಿಡಿಗೊಳ್ಳುತ್ತಾನೆ ಸಹನವಿಲ್ಲದೆ. ಅದೊ-ಅದೊ!-ಕೊನೆಗೆ ಬಂದಿತು ಕರೆ! ಮುಸ್ತಾಫಾ ಕೆಮಾಲ, ಗಾಝಿ ಮುಸ್ತಾಫಾ ಕೆಮಾಲ, ನೀನೇ ನಮ್ಮನ್ನು ಈ ತೊಡಕಿನೊಳಗಿಂದ ಬಿಡಿಸಬೇಕು-ಎಂಬ ಕರೆ..! ಮುಸ್ತಾಫಾನ ಮುತ್ಸದ್ದಿತನದ ಸಮಯವಿದು, ಅದರಂತೆಯೆ ಕೆಮಾಲನ ಕಿಡಿಗೇಡಿತನದ ಸಮಯವೂ ಇದೇ. 'ನಾನು ಬರಲಾರೆ' ಎಂದು ಹೇಳಿಕಳುಹಿಸಿದನು. 'ಪ್ರಯತ್ನ ಮಾಡಿದರೆ ನಿಮಗೆ ಯಾವುದು ಅಸಾಧ್ಯ?' ಎಂದು ಹಂಗಿಸಿ ಕಳುಹಿಸಿದನು. ಶಾಸನಸಭೆಯಲ್ಲಿ ಹಾಹಾಕಾರವೆದ್ದಿತು. ಕೆಮಾಲನು ತಮ್ಮ ಕೈಬಿಟ್ಟನೆಂದರೆ ದೇಶವು ಅನರ್ಥಕ್ಕೆ ತುತ್ತಾಗುವುದೆಂಬ ಹೆದರಿಕೆ; ಇದನ್ನು ಹಬ್ಬಿಸುವವರು ಕೆಮಾಲನ ಕುಟಿಲ ಶಿಷ್ಯರೆ. ಕೊನೆಗೆ ಕೈಮುಗಿದು, ಶರಣಾಗತರಾಗಿ ಪ್ರಾರ್ಥನೆಯನ್ನು ಕಳುಹಿಸಲಾಯಿತು. ಆಗ ಕೆಮಾಲನು ಮನೆಯಿಂದ ಹೊರಬಿದ್ದನು. 'ಎಲ್ಲ ಭಾರವನ್ನೂ ನನ್ನ ಮೇಲೆಯೆ ಒಗೆಯುವಿರಲ್ಲ? ನಾನೊಬ್ಬನೆ ಎಷ್ಟೊಂದು ನೋಡಿಕೊಳ್ಳಲಿ? ನಿಜವಾಗಿ ಇದು ನನಗೆ ಬೇಡ, ಬೇಡ' ಎನುವವರಂತೆ ಹೆಜ್ಜೆಯಮೇಲೆ ಹೆಜ್ಜೆಯನಿಡುತ್ತ, ಗಂಭೀರ ಮುಖಮುದ್ರೆಯನ್ನು ಧರಿಸುತ್ತ, ಭಾವಗರ್ಭಿತವಾದ ಮೌನವನ್ನು ತಾಳುತ್ತ ಸಭಾಗೃಹವನ್ನು ಸೇರಿದನು. ಹುಡುಗರಿಗೆ ಬುದ್ಧಿ ಹೇಳುವ ಹಿರಿತನದಿಂದ ಎದ್ದುನಿಂತು, 'ನಾನು ಮಾಡಬೇಕಾದುದೇನು?' ಎಂದು ಮತ್ತೊಮ್ಮೆ ಪ್ರಶ್ನೆ ಮಾಡಿದನು. ಅದಕ್ಕೆ ಯಾರೂ ಉತ್ತರಕೊಡುವುದಿಲ್ಲೆಂದು ಅವನಿಗೆ ಗೊತ್ತು, ಎಲ್ಲರಿಗೂ ಗೊತ್ತು. ಅದಕಾಗಿಯೆ ಮತ್ತೊಮ್ಮೆ ಕೆಣಕಿದನು; 'ನಾನು ಮಾಡಬೇಕಾದುದೇನು? ಮಂತ್ರಿಮಂಡಲವನ್ನು ಕೂಡಿಸುವುದಾಗದೆ ಆಡಳಿತವು ತಟಸ್ಥವಾಗಿದೆ. ಇದು

ನನ್ನ ತಪ್ಪು ಎಂದು ಯಾರೂ ಹೇಳುವಂತಿಲ್ಲ. ನಾನು ನಿಮ್ಮ ಅಧ್ಯಕ್ಷ. ಮಂತ್ರಿಮಂಡಲವನ್ನು ಕೂಡಿಸುವ ಕೆಲಸ ನಿಮ್ಮದು. ಆದಾಗದಿದ್ದುದು ನಿಮ್ಮ ತಪ್ಪು. ಅಥವಾ—' ಕನಿಕರ ತೋರಿಸಿ, ಹಿರಿತನದಿಂದ '—ಇದರಲ್ಲಿ ನಿಮ್ಮದಾದರೂ ದೋಷವೇನು? ಇದು ನಮ್ಮ ಘಟನೆಯ ದೋಷವಿದೆ. ಮಹಾರಾಷ್ಟ್ರೀಯ ಸಭೆಯು ಸರ್ವಾಧಿಕಾರಗಳನ್ನು ತನ್ನ ಕೈಯಲ್ಲಿಟ್ಟುಕೊಂಡಿದೆ, ಪ್ರತಿಯೊಬ್ಬ ಸದಸ್ಯನು ತಾನೇ ಮುಖ್ಯ ಮಂತ್ರಿ ಎಂದು ಭಾವಿಸುತ್ತಾನೆ. ತಾಳವಿಲ್ಲ, ಮೇಳವಿಲ್ಲ. ನಿಜವಾಗಿ ನೋಡಿದರೆ ಕಾರ್ಯಾಧಿಕಾರವು ( executive power ) ಕೆಲವು ವಿಶಿಷ್ಟ ಜನರ ಕೈಯಲ್ಲಿರತಕ್ಕದ್ದು. ಶಾಸನಾಧಿಕಾರ (legislative power ) ವಷ್ಟೆ ಈ ಸಭೆಗಿರತಕ್ಕದ್ದು. ಕಾರ್ಯಾಧಿಕಾರವನ್ನೂ ನಿಮ್ಮ ಕೈಯಲ್ಲಿಯೆ ಇಟ್ಟುಕೊಳ್ಳುವ ವರೆಗೆ ಮಂತ್ರಿಯಾಗಲು ಯಾವನು ಒಪ್ಪುವನು? ಕಾರ್ಯದ ಸ್ವಾತಂತ್ರ್ಯವಿಲ್ಲದಿದ್ದರೆ ಮಂತ್ರಿಯಾಗಿ ಉಪಯೋಗವೇನು? ಕಾರ್ಯದ ಅಧಿಕಾರ ನಿಮಗೆ, ಹೊಣೆಗಾರಿಕೆ ಮಂತ್ರಿಗೆ. ಇದು ಅನ್ಯಾಯ, ಅವ್ಯವಹಾರ್ಯ. ಸದ್ಯದ ಸ್ಥಿತಿಯನ್ನು ಇರಗೊಟ್ಟರೆ ನಾವು ಅವ್ಯವಸ್ಥೆಗೆ ಗುರಿಯಾಗುವೆವು. ಆದುದರಿಂದ ಘಟನೆಯನ್ನು ಬದಲಾಯಿಸಬೇಕು. ಅದಕ್ಕೆ ನಿಮ್ಮೆಲ್ಲರ ಒಪ್ಪಿಗೆ ಅವಶ್ಯಬೇಕು—'

ತಡೆದು ಅತ್ತಿತ್ತ ನೋಡಿ—

'ಒಪ್ಪಿಗೆ ಇದೆಯೆ?'

ಮತ್ತೆ ತಡೆದು ಒಂದೊಂದೆ ಶಬ್ದವನ್ನು ಬಿಡಿಬಿಡಿಯಾಗಿ ನುಡಿಯುತ್ತ—

'ಇಲ್ಲವಾದರೆ ನನ್ನಿಂದ ಕೂಡ ಮಂತ್ರಿಮಂಡಲವನ್ನೇರ್ಪಡಿಸುವುದು ಅಶಕ್ಯವಾಗುವುದು. ನಾನೂ ನಿಮ್ಮಂತೆ ಮನುಷ್ಯ, ಮಾಯಾವಿಯಲ್ಲ. ನಿಮ್ಮ ಒಪ್ಪಿಗೆ ಇಲ್ಲದೆ ನಿಮ್ಮಿಂದ ಉತ್ತರವಿಲ್ಲದೆ ನಾನು ಮುಂದೆ ಸಾಗಲಾರೆ' ಎಂದು ತಡೆದುಬಿಟ್ಟ.

'ಒಪ್ಪಿಗೆ—ಒಪ್ಪಿಗೆ' ಎಂದು ಕೂಗಿದರನೇಕರು.

11

ಕೆಮಾಲನು ಮತ್ತೆ ಎದೆಯುಬ್ಬಿಸಿ– 'ನಿಮ್ಮ ಒಪ್ಪಿಗೆ ಇದ್ದರೆ ತಡವೇಕೆ? ಇಂದಿನಿಂದ ತುರ್ಕಸ್ತಾನವು ಪ್ರಜಾಸತ್ತಾತ್ಮಕ ( republic ) ರಾಜ್ಯ ಎಂದು ಇಲ್ಲಿಯೆ ಸಾರಿಬಿಡೋಣ' ಎಂದು ಹೊಸ ಜಯ ಘೋಷದಿಂದ ಹೊರಹೊರಟನು. ತುರ್ಕಸ್ತಾನವು ಪ್ರಜಾಸತ್ತಾತ್ಮಕ ರಾಜ್ಯವಾಯಿತು, ಕೆಮಾಲನೆ ಆ ರಾಜ್ಯದ ಅಧಿಪತಿ ಎಂದೂ ನಿರ್ಣಯ ವಾಯಿತು. ಇವೆರಡೂ ಮಾತುಗಳನ್ನೊಳಗೊಂಡ ಘಟನಾತ್ಮಕ ಗೊತ್ತುವಳಿಗಳನ್ನು ಇಸ್ಮೆತ್ ಪಾಶಾನಿಂದ ಬರೆಯಿಸಿ ಮರುದಿವಸ ಶಾಸನಸಭೆಯು ಸ್ವೀಕರಿಸುವಂತೆ ಮಾಡಿದನು ಕೆಮಾಲನು.



## ೩ ಪ್ರಜಾಪ್ರಭುತ್ವದ ಶತ್ರು

ಹಿಂದುಗಳ ಸಂಪ್ರದಾಯದಲ್ಲಿ ಮೃತ್ಯುದೇವತೆಯಾದ ಯಮನೆ **ಧರ್ಮರಾಯನೂ** ಆಗಿದ್ದಾನೆಂಬುದು ಪುರಾಣಮತವಾದಿಗಳಿಗೆ ಗೊತ್ತಿರಲು ಸಾಕು. ಧರ್ಮಕ್ಕೂ ಮೃತ್ಯುವಿಗೂ ಪ್ರಾಚೀನಕಾಲದಿಂದ ಸಂಬಂಧವಿದ್ದುದು ಇತಿಹಾಸದೃಷ್ಟಿಯಿಂದ ಸತ್ಯವಾದ ಸಂಗತಿಯಾಗಿದೆ. ಮನುಷ್ಯನಲ್ಲಿ ಪ್ರಾಣಿಮಾತ್ರಗಳಿಗೆ ಸಾಮಾನ್ಯವಾಗಿ ಕಂಡು ಬರುವ ಆಹಾರ–ನಿದ್ರಾ–ಭಯಗಳಿಂದ ಅನುಕ್ರಮವಾಗಿ ಮಾರಿ–ಮನೆ–ಮಠಗಳ ಕಲ್ಪನೆ ಹುಟ್ಟಿತೆಂದು ಹೇಳಬಹುದು. ಆಹಾರಕ್ಕಾಗಿ ಮಾರಿ ( ಮೊದಲು ದೇವಸು ಮಾರಿಯ ಉಗ್ರಸ್ವರೂಪದಲ್ಲಿಯೆ ಪ್ರಕಟವಾದನು), ನಿದ್ರೆಗಾಗಿ ( ಶಾಂತಿ-ಸುರಕ್ಷಿತತೆಗಳಿಗಾಗಿ ) ಮನೆ, ಭಯದ ನಿವಾರಣೆಗಾಗಿ (ಮೃತ್ಯುವಿನಿಗಿಂತ ಇನ್ನಾವುದರ ಭಯ ಹೆಚ್ಚಿಗಿದೆ ? ) ಮಠ ( ಧರ್ಮದ ಒಂದು ಮೂರ್ತಸ್ವರೂಪ ) ಇವು ಹೇಗೆ ಬೆಳೆದುವೆಂಬುದು ಒಂದು ಬೇರೆ ವಿಷಯವೆ ಆಗಿದೆ. ಆದರೂ ಅನೇಕ ಭಯಗಳ ನಿವಾರಣೆಗಾಗಿ ಧರ್ಮದ ಕಲ್ಪನೆ ಉದಯವಾಯಿತೆಂಬ ಮಾತನ್ನು ಸದ್ಯದ ಸಂದರ್ಭದಲ್ಲಿ ನಾವು ಗಮನಿಸೋಣ. ಮಾನವನ ವ್ಯವಹಾರಕ್ಕೆ ಸ್ಥಿರತೆ–ಸುರಕ್ಷಿತತೆಗಳು ಒದಗಬೇಕೆಂದು ದೇವ–ಧರ್ಮಗಳು ತಲೆದೋರಿದುವು ಎಂಬ ಮಾತನ್ನು ಹಿಂದಿನ ಪ್ರಕರಣದಲ್ಲೂ ಹೇಳಿದ್ದೇವೆ. ಆದರೆ ಬರಬರುತ್ತ ದೇವ-ಧರ್ಮ-ರಾಜ ಇವುಗಳಲ್ಲಿಯೆ ಪರಸ್ಪರ ವಿರೋಧ ಹೇಗೆ ಬೆಳೆಯಿತೆಂಬುದೊಂದು ಮನೋರಂಜಕ ಕತೆಯೆ ಆಗಿದೆ. ಬ್ರಾಹ್ಮಣರಲ್ಲಿಯೆ ಒಂದು ಪಂಗಡಕ್ಕೆ ವಿಷ್ಣು ದೇವ, ಇನ್ನೊಂದಕ್ಕೆ ಶಿವನು ದೇವ ಎನಿಸಿ ವಿಷ್ಣುವೂ ಶಿವನೂ ಪ್ರತಿಸ್ಪರ್ಧಿಗಳಂತೆ ಹೋರಾಡಿದ್ದು ಮಹಾಭಾರತದಿಂದ ಇಂದಿನ ಕಾಲದ ವರೆಗೂ ವ್ಯವಹಾರದಲ್ಲಿ ಕಂಡುಬರುತ್ತಿದೆ. ರಾಜನಿಗೂ ಧರ್ಮಕ್ಕೂ ವಿರೋಧ ಬೆಳೆದು ಒಂದಕ್ಕೊಂದರ ಘನಘೋರ ತಿಕ್ಕಾಟವಾದ ಸಂದರ್ಭವು ಇಂಗ್ಲಂಡದ ಇತಿಹಾಸದಲ್ಲಿ ಕಾಣುವುದು. ಇಂದು ರಾಜಕೀಯ

ಜೀವನವೂ ಅದರ ಮೂಲ ತತ್ತ್ವಗಳೂ ಬದಲಾಯಿಸಿವೆ. ಆದಕಾಗಿ ಇಂದಿನ ಜೀವನದಲ್ಲೂ ಇಂತಹ ತಿಕ್ಕಾಟವು ಪ್ರಾಪ್ತವಾಗಿದೆ. ಹಿಂದುಸ್ಥಾನದಲ್ಲಿ ದ್ವಿದಲರಾಜ್ಯಪದ್ಧತಿ (Dyarchy)ಯು ೧೯೧೯ರ ಮಾಂಟೆಗ್ಯೂ ಚೇಮ್ಸ್‌ಫರ್ಡ ಸುಧಾರಣೆಗಳಿಂದ ಮೊದಲು ಮಾಡಿತೆಂದು ನಮ್ಮ ರಾಜಕೀಯ ಮುಂದಾಳುಗಳು ಹೇಳುತ್ತಿದ್ದಾರೆ; ಈ ದ್ವಿದಲಪದ್ಧತಿಯು ಅಪಾಯಕಾರಕವೆಂದು ಉಗ್ರಮತವಾದಿ (Extremist) ಗಳು, ದೇಶಾಭಿಮಾನಿಗಳು ಘಂಟಾಘೋಷವಾಗಿ ಸಾರುತ್ತಿದ್ದಾರೆ. ಆದರೆ ಇದಕ್ಕಿಂತ ಹೆಚ್ಚು ಅಪಾಯಕಾರಕವಾದ ದ್ವಿದಲಪದ್ಧತಿಯು ನಮ್ಮಲ್ಲಿ ನೂರಾರು ವರ್ಷಗಳಿಂದ ನಡೆದಿದೆ ಎಂಬುದನ್ನು ಇವರಾರೂ ಅರಿತಂತೆ ತೋರುವುದಿಲ್ಲ. ರಾಜಕೀಯ ದ್ವಿದಲಪದ್ಧತಿಯು ಪರಕೀಯರಿಂದ ನಮ್ಮ ಮೇಲೆ ಹೇರಲ್ಪಟ್ಟಿದೆ ಎಂದು ಒಪ್ಪೋಣ; ಪರಕೀಯರ ಪ್ರಭಾವವು ಕಡಮೆಯಾಗಿ ಸ್ವಾತಂತ್ರ್ಯವು ನೆಲೆಗೊಂಡ ಮೇಲೆ ಈ ಪದ್ಧತಿಯು ಮಾಯವಾಗುವುದು ಎಂದೂ ಒಪ್ಪೋಣ. ಆದರೆ ನಾವು ಹೇಳಿದ ಈ 'ಸ್ವದೇಶಿ' ದ್ವಿದಲಪದ್ಧತಿಯ ಗತಿ ಏನು? ನೂರಾರು ವರ್ಷಗಳಿಂದ ಪರಸ್ಪರ ವಿರುದ್ಧವಾದ ಎರಡು ದಿಕ್ಕುಗಳಿಗೆ ನಮ್ಮ ದೇಶವನ್ನು ಎಳೆಯುತ್ತಿರುವ, ನಮಗೆ ಮೈಗೂಡಿದರಿಂದ ಕಣ್ಣಿಗೆ ಕಾಣದೆ ಒಳಗಿಂದೊಳಗೆಯೆ ನಮ್ಮನ್ನು ಜರಾಸಂಧನಂತೆ ಸೀಳುತ್ತಿರುವ ಈ ಇನ್ನೊಂದು ದ್ವಿದಲಪದ್ಧತಿಯನ್ನು ತಡೆಯಲು ನಾವು ಯಾವ ಪ್ರಯತ್ನಗಳನ್ನು ಕೈಕೊಳ್ಳುತ್ತಲಿದ್ದೇವೆ? ಇಷ್ಟು ಹೇಳಿದ ಮೇಲೆ ಆ ದ್ವಿದಲಪದ್ಧತಿ ಯಾವುದೆಂದು ಬೇರೆಯಾಗಿ ಹೇಳಬೇಕೆ? ಇಂದಿನ ಜ್ಞಾನದಿಂದ ಇಂದಿನ ಜೀವನಕ್ಕೆ ಹೊಂದಿಕೊಳ್ಳಲು ನಮ್ಮನ್ನು ಪ್ರೇರಿಸುವ ರಾಷ್ಟ್ರಪ್ರಭುತ್ವ (The authority of the State) ಒಂದು ಕಡೆ; ಎಂದಿನಿಂದಲೊ ನಡೆದು ಬಂದ, ಹಿಂದಿನ ಜೀವನವನ್ನೆ ಸಂಬಂಧಿಸಿದ, ಇಂದಿನದಕ್ಕೆ ಹೊಂದದಿದ್ದರೂ ಕೂಡ ಬಲವಾಗಿ ನಮ್ಮನ್ನು ಹಿಂದೆಳೆವ ಧರ್ಮಪ್ರಭುತ್ವ ಒಂದು ಕಡೆ. ಇವೆರಡರಲ್ಲಿ ಧರ್ಮದ ಪ್ರಭುತ್ವ ಮತ್ತು ಕಾರ್ಯಕ್ಷೇತ್ರಗಳೆ ದೊಡ್ಡದಾಗಿವೆ. ಯಾಕೆಂದರೆ ಧರ್ಮವು ನಮ್ಮ ಭಯವಿಕಾರವನ್ನು ಪೂರ್ತಿಯಾಗಿ ಕೈಗುಣಿಸಿ

(Exploit) ಕೊಂಡಿದೆ. ಒಂದು ಕಡೆ ಕಾರಾಗೃಹದ ಹೆದರಿಕೆ, ಒಂದು ಕಡೆ ನರಕದ ಹೆದರಿಕೆ ತೋರಿಸಿದರೆ ನಮ್ಮ ಧರ್ಮಬಾಂಧವನು ನರಕಕ್ಕೇ ಹೆಚ್ಚಾಗಿ ಹೆದರಿ ವರ್ತಿಸುವನೆಂದು ಹೇಳಬೇಕಾಗಿಲ್ಲ. ಹೀಗೆ ಹೇಳುವದ ರಲ್ಲಿ ಧರ್ಮವಾಗಲಿ ಧರ್ಮಭಯವಾಗಲಿ ಅಪಾಯಕಾರಕವೆಂಬ ಅಭಿಪ್ರಾ ಯವಿಲ್ಲ. ಮಾನವನ ನಡತೆಗೆ ನೀತಿಯನ್ನೂ ನಿಯಮಿತತನವನ್ನೂ ತಂದೊದಗಿಸಿ ಮಾನವ–ಮಾನವರ ವ್ಯವಹಾರವನ್ನು ಭದ್ರವಾಗಿಯೂ ಬೆಳೆವಂತೆಯೂ ಮಾಡುವುದು ಧರ್ಮದ ಕೆಲಸ ಮತ್ತು ಸಾರ್ಥಕತೆ. ಆದರೆ ನಮ್ಮ ಧರ್ಮವು ಹಿಂದಿನ ಜೀವನಕ್ಕೆ ಸಂಬಂಧಿಸಿದ್ದು, ಗತಜೀವ ನದ ಇತಿಹಾಸವಾಗಬೇಕಾದುದು; ಹರಿವ ರಕ್ತವಲ್ಲ, ನಿಂತ ನೀರು, ನಿಂತ ನೀರಿನಲ್ಲಿ ಕೊಳಚಿ ಬೆಳೆವಂತೆ ಧರ್ಮದಲ್ಲಾದರೂ ಬೆಳೆದಿದೆ. ಧರ್ಮವು ಮಾನವನನ್ನು ಸಂಬಂಧಿಸಿಲ್ಲ, ಧರ್ಮಗುರುವನ್ನು ಸಂಬಂಧಿ ಸಿದೆ; ಧರ್ಮವು ಮನೆಯನ್ನು ಬೆಳೆಸುವುದಿಲ್ಲ, ಮಠಗಳನ್ನು ಬೆಳೆಸುತ್ತ ಲಿದೆ. ಇಂತಹ ಧರ್ಮದ ಆಡಳಿತದ ಕೆಳಗೆ ನಮ್ಮ ಜೀವನದ ಧೋರಣ, ನಮ್ಮ ದೇಹಕ್ಕೆ ಬೇಕಾಗುವ ಆಹಾರ, ನಮ್ಮ ಬುದ್ಧಿಗೆ ಬೇಕಾಗುವ ಶಿಕ್ಷಣ, ನಮ್ಮ ಸುಖ–ಸಮಭಿವೃದ್ಧಿಗಳಿಗೆ ಬೇಕಾದ ವಿವಾಹ–ಮೊದ ಲಾದ ಮಹತ್ವದ ಸಂಗತಿಗಳು ಸಿಕ್ಕುಬಿದ್ದಿವೆ. ನಮ್ಮ ಧರ್ಮದ ಧೋರಣೆ ಬದಲಾಯಿಸದೆ ಜೀವನಧೋರಣೆ ಬದಲಾಯಿಸುವಂತಿಲ್ಲ, ನಮ್ಮ ಧರ್ಮದ ಹೃದಯವು ವಿಶಾಲವಾಗದ ಹೊರತು ನಮ್ಮ ಜಾತಿ–ಜಾತಿ ದ್ವೇಷವು ಅಳಿವಂತಿಲ್ಲ, ನಮ್ಮ ಧರ್ಮದ ನಿಯಮಗಳು ಬದಲಾಯಿಸದ ಹೊರತು ನಮ್ಮ ವಿವಾಹವು ಆರೋಗ್ಯಕಾರಕ ವಾಗುವಂತಿಲ್ಲ, ನಮ್ಮ ಧರ್ಮದ ಬೆದರಿಕೆಯು ಹೋಗದ ಹೊರತು ನಮ್ಮ ಸಾಹಸಶಕ್ತಿ ಪ್ರಕಟವಾಗುವಂತಿಲ್ಲ. ಆದರೆ ಇದನ್ನೆಲ್ಲ ಸರಿಪಡಿ ಸುವ ಅಧಿಕಾರ ಯಾರಿಗಿದೆ? **ಯಾರಿಗೂ ಇಲ್ಲ.** ಪೃಥ್ವಿಯ ಒಂದು ಆರರಷ್ಟು ಭಾಗದಲ್ಲಿ ವೈಭವದಿಂದ ಸಾಮ್ರಾಜ್ಯ ಮೆರೆಸುವ ಬ್ರಿಟಿಶ ಸರಕಾರಕ್ಕೆ ಇಲ್ಲ; ಮೂವತ್ಮೂರು ಕೋಟಿ ಬಾಂಧವರ ಹೃದಯದಲ್ಲಿ ಮನೆಮಾಡಿಕೊಂಡಿರುವ ಮಹಾತ್ಮಾ ಗಾಂಧಿಯವರಿಗೂ ಇಲ್ಲ! ಇದೀಗ

ನಮ್ಮ ದೇಶದ ನಿಜವಾದ, ಶಾಶ್ವತವಾದ, ಪ್ರಗತಿವಿರೋಧಕವಾದ ಅಗ್ಗಂಟು ( Deadlock ).

ಇದೇ ಅಗ್ಗಂಟು ಹಿಂದುಳಿದ ಅನೇಕ ದೇಶಗಳಲ್ಲಿ ಇದ್ದಿತು, ಇದೆ. ತುರ್ಕಸ್ಥಾನದಲ್ಲೂ ಕೆಮಾಲನನ್ನು ಎದುರಿಸಿದ ಭೂತವೂ ಇದೇ. ಇದನ್ನು ಕೊನೆಗೆ ಕೆಮಾಲನು ಸರಿಪಡಿಸಿಕೊಂಡನೆಂಬುದೆ ನಮಗೆ–ಭಾರತೀಯರಿಗೆ–ಮಹತ್ತ್ವದ ವಿಷಯವಾಗಿದೆ. ನಮ್ಮಲ್ಲಿಯಂತೆ ತುರ್ಕಸ್ಥಾನದಲ್ಲಾದರೂ ಪ್ರಜೆಗಳ ಅಜ್ಞಾನ–ದಾರಿದ್ರ್ಯಗಳನ್ನು ಪೂರ್ತಿಯಾಗಿ ಕೈಗುಣಿಸಿಕೊಂಡು ಧೃಷ್ಟಪುಷ್ಟವಾಗಿ ಮೆರೆಯುತ್ತಿದ್ದಿತು ಧರ್ಮವು. ಜನರಿಗೆ ಶಿಕ್ಷಣವನ್ನು ಕೊಡುವ ಅಧಿಕಾರವು ಧರ್ಮಗುರುಗಳ ಕಡೆಗೆ ! ಎಂತಹ ಶಿಕ್ಷಣವನ್ನು ಕೊಡಬೇಕೆಂಬ ನಿರ್ಣಯವೂ ಅವರ ಕಡೆಗೆಯೆ ! ಕೆಮಾಲನ ಪ್ರತಿಯೊಂದು ಮಹತ್ತ್ವಾಕಾಂಕ್ಷೆಗೆ, ಅವನ ದೇಶಾಭಿಮಾನದ ಆಸೆಗಳಿಗೆ ಅಡ್ಡ ಬರುವಂತಹ ಪರಿಸ್ಥಿತಿ ಇದ್ದಿತು. ಧರ್ಮಗುರುಗಳು ಕೊಡುವ ಶಿಕ್ಷಣದ ಅನುಭವವನ್ನು ಅವನು ತನ್ನ ಬಾಲ್ಯದಲ್ಲಿ ಕಂಡಿದ್ದನು. ಆ ಶಿಕ್ಷಣದಿಂದ ಮಾನವನಿಗೆ ಹೇಗೆ ಒಡತನದಲ್ಲಿಯೆ ಬಳಲುವ, ಅಜ್ಞಾನದಲ್ಲಿಯೆ ತೃಪ್ತಿಹೊಂದುವ, ದಾಸ್ಯವನ್ನೆ ಧ್ಯೇಯವಾಗಿರಿಸುವ ವೃತ್ತಿ ಬರುತ್ತಿದ್ದಿತೆಂಬುದನ್ನೂ ಕೆಮಾಲನು ಕಂಡಿದ್ದನು. ಇದಲ್ಲದೆ ಧರ್ಮಗುರುಗಳ, ಕಾಝಿಗಳ ಬೆದರಿಕೆಯು ತನ್ನ ದೇಶಬಾಂಧವರ ಜೀವನದ ತಳಹದಿಯಾಗಿತ್ತೆಂಬುದನ್ನೂ ಅವನು ಅರಿತಿದ್ದನು. ಇಡಿಯ ಸೈನ್ಯವೆ ತನ್ನ ಬೆನ್ನು ಕಟ್ಟಿದರೂ ಕಾಝಿಗಳು ಮನ ಬಂದರೆ ಜನರನ್ನು ಬಂಡನೆಬ್ಬಿಸಲು ಶಕ್ತರಾಗುವಂತಿತ್ತು. ಆದರೆ ಸೈನ್ಯದ ಅಧಿಕಾರಿಗಳಾಗಲಿ, ಸೈನಿಕರಾಗಲಿ ಧರ್ಮದ ವಿಷಯದಲ್ಲಿ ತನ್ನ ವಿಚಾರಗಳಿಗೆ ಬೆಂಬಲಕೊಡಬಹುದೆಂಬ ವಿಶ್ವಾಸವು ಅವನಿಗಿದ್ದಿರಲಿಲ್ಲ. ಇಂತಹ ಧರ್ಮವು ಕೆಮಾಲನಿಗೆ ಬೇಕಿರಲಿಲ್ಲ. 'ಜನರ ಮೇಲೆ ಅಧಿಕಾರವನ್ನು ನಡೆಸಲು ಯಾವನಿಗೆ ಇಂತಹ ಧರ್ಮದ ಸಹಾಯ ಬೇಕಾಗುವುದೊ ಅವನು ಹೇಡಿ. ಹೇಡಿಯಾದವನು ರಾಜ್ಯವನ್ನಾಳಲು ಅಸಮರ್ಥನು, ಅನರ್ಹನು' ಎಂದು ಅವನು ಅಭಿಪ್ರಾಯಪಡುತ್ತಿದ್ದನು. ಧರ್ಮದ

ವಿಷಯವಾಗಿ ಅವನಿಗೆ ಎಳ್ಳಷ್ಟೂ ಆದರವಿರಲಿಲ್ಲ. 'ಧರ್ಮ? ಎಲ್ಲಿದೆ ಧರ್ಮ? ಈಗಿದ್ದುದು ೫೦೦ ವರ್ಷಗಳ ಹಿಂದಿನ ಕತೆ! ಯಾರೊ ಆಗ ಕೆಲವು ನಿಯಮಗಳನ್ನು ಹಾಕಿಕೊಟ್ಟರಂತೆ! ನಮ್ಮ ಸಮಾಜ ಪದ್ಧತಿ ಹೀಗೆಯೆ ಇರಬೇಕೆಂದು ಹೇಳಿದರಂತೆ! ನಮ್ಮ ಊಟ-ಉಡಿಗೆಗಳು, ನಾವು ಜನ್ಮ ತಾಳುವ ವಿಧಿ, ಗಂಟೆ-ಗಂಟೆಯ ನಮ್ಮ ಜೀವನದ ಕಾರ್ಯ ಕ್ರಮ, ನಮ್ಮ ವಿಚಾರ, ನಮ್ಮ ವೈಮನಸ್ಯ ಕೂದಲು ಕೂಡ ಹೀಗೆಯೆ ಆಗಿರಬೇಕೆಂದರಂತೆ! ಆ ಹುಚ್ಚು-ಹರಟೆಯನ್ನು ಈಗ ನಾವು ಶಾಸನ ವೆಂದು ಮನ್ನಿಸಬೇಕಂತೆ! ಅದೇನೊ ದೇವ-ವಾಕ್ಯವಂತೆ! ದೇವ? ದೇವ! ಹಹ!' ಎಂದು ತಿರಸ್ಕಾರದಿಂದ ನಕ್ಕುಬಿಡುವ ಸ್ವಭಾವ ಕೆಮಾಲನದು.

ಇದಲ್ಲದೆ ತುರ್ಕಸ್ತಾನದ ಧರ್ಮಪರಿಸ್ಥಿತಿಯಲ್ಲಿ ಇನ್ನೂ ಒಂದೆ ರಡು ತೊಡಕುಗಳಿದ್ದುವು. ದೇಶದ ರಾಜಕೀಯ ದೊರೆಯಾದ ಸುಲ್ತಾ ನನೆ ಹೇಗೆ ಧರ್ಮಗುರುವಾದ ಖಲೀಫನೂ ಆಗಿದ್ದನೆಂಬುದನ್ನು ಈ ಮೊದಲೇ ಹೇಳಿದ್ದೇವೆ. ಸುಲ್ತಾನಿಕೆ ಹೋಯಿತು, ಅದರೊಡನೆ ಸುಲ್ತಾನ ನಾದ ವಾಹೀದೆದ್ದೀನನೂ ದೇಶವನ್ನು ಬಿಟ್ಟು ಹೋಗಿದ್ದನು. ಆದರೆ ಅವನ ತಮ್ಮನಾದ ಅಬ್ದುಲ್ ಮೆಜಿದ ಎಂಬವನು ಇನ್ನೂ ಖಲೀಫ ನೆಂದು ಕಾನಸ್ಟಾಂಟಿನೋಪಲಿನಲ್ಲಿಯೆ ಉಳಿದುಕೊಂಡಿದ್ದನು. ಸುಲ್ತಾನ ನನ್ನೂ ಖಲೀಫನನ್ನೂ ಒಂದೇಟಿಗೆ ಕಿತ್ತೊಗೆವುದು ದಕ್ಕದ ಸಾಹಸ ಎಂದು ಕೆಲವು ದಿವಸ ಕೆಮಾಲನು ಖಲೀಫನನ್ನು ಇರಗೊಟ್ಟಿದ್ದನು. ಆದರೆ ಖಲೀಫನಿಗೆ ದೇಶದ ರಾಜಕೀಯ ವ್ಯವಹಾರದಲ್ಲಿ ಎಷ್ಟು ಸ್ಥಾನ-ಮಾನಗಳಿರತಕ್ಕುದೆಂಬುದನ್ನು ಮಾತ್ರ ಧೈರ್ಯವಾಗಿ ತೋರಿಸಿದ್ದನು. ಹೊಸತಾಗಿ ಪಟ್ಟಗಟ್ಟುವ ಖಲೀಫನಿಗಾಗಿ ಹೆಚ್ಚಿನ ಸಮಾರಂಭಗಳನ್ನು ಮಾಡಗೊಟ್ಟಿದ್ದಿಲ್ಲ. ಖಲೀಫನ ಅಧಿಕಾರದ ಮತ್ತು ಕಾರ್ಯಕ್ಷೇತ್ರದ ಚರ್ಚೆ ಶಾಸನಸಭೆಯಲ್ಲಿ ನಡೆದಾಗ 'ಖಲೀಫನಿಗೆ ಅಧಿಕಾರವೂ ಇಲ್ಲ ಸ್ಥಾನವೂ ಇಲ್ಲ' ಎಂದು ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿ ದ್ದನು. ಮುಂದೊಮ್ಮೆ ಖಲೀಫನು ತನಗೆ ಹೆಚ್ಚಿನ ಉಂಬಳಿ ಬೇಡಿದಾಗ

ಅವನಿಗೆ ಅತ್ಯಂತ ಕಟುವಾಗಿ, ಖಂಡತುಂಡವಾಗಿ ಹೀಗೆ ಉತ್ತರ ಕೊಟ್ಟಿದ್ದನು; 'ಮಹಾನುಭಾವನೆ, ಖಲೀಫ ಪದವಿಯು ಒಂದು ಐತಿಹಾಸಿಕ ಸ್ಮಾರಕವಾಗಿ ಉಳಿದಿದೆ. ಇಂದಿನ ಕಾಲದಲ್ಲಿ ಖಲೀಫನಿರಬೇಕಾಗಿ ಕಾರಣವೆ ಇಲ್ಲ. ಹೀಗಿರುವಾಗ ಹೆಚ್ಚಿನ ಉಂಬಳಿ ಬೇಡುವುದು ಉದ್ದಾಮತನವಲ್ಲವೆ?' ಹೀಗೆ ಕೆಮಾಲನು ವೈಯುಕ್ತಿಕವಾಗಿ ತನ್ನ ಧೋರಣೆಯನ್ನು ವ್ಯಕ್ತಪಡಿಸಿದ್ದರೂ ಖಲೀಫನು ಉಳಿದುಕೊಂಡಿದ್ದನು; ಇಷ್ಟೆ ಅಲ್ಲ, ಕೆಮಾಲನಿಗೆ ಮುಳುವಾಗುವಂತೆ ಉಳಿದುಕೊಂಡಿದ್ದನು. ಕೆಮಾಲನಿಂದ ಸೋಲು ಪಡೆದ ವಿರೋಧಿಗಳೆಲ್ಲ ಖಲೀಫನನ್ನು ಸುತ್ತುಗಟ್ಟತೊಡಗಿದರು. ಕೆಮಾಲನು ಅಧಿಕಾರದಲ್ಲಿರುವುದೆಂದರೆ ಖಲೀಫನಿಗೆ ಗಂಡಾಂತರವೆಂದು ಅಬ್ದುಲ್ ಮೆಜಿದನ ಮನವರಿಕೆ ಮಾಡಿದರು. ಈಗ ಖಲೀಫನ ಅರಮನೆ ಎಂದರೆ ಚಾಡಿಯ ಚಾವಡಿಯುಂತಾಯಿತು, ಕೆಮಾಲನ ವಿರುದ್ಧವಾದ ಗುಪ್ತಾಲೋಚನೆಗಳ ಗುಹೆಯಾಯಿತು; ರಾವುಫ ಮೊದಲಾದವರ ರಾಕ್ಷಸೀವೃತ್ತಿಯ ರಾಜಧಾನಿಯಾಯಿತು. ಇದು ಕೆಮಾಲನಿಗೆ ತಿಳಿಯದೆ ಹೋಗಲಿಲ್ಲ. ತಿಳಿದರೂ ಕೆಮಾಲನು ಒಮ್ಮೆಲೆ ಏನೂ ಮಾಡದಂತಹ ಪೇಚಿನಲ್ಲಿದ್ದನು. ತುರ್ಕಸ್ತಾನಕ್ಕೆ ಇನ್ನೂ ಶಾಂತಿ-ಸಂಪತ್ತುಗಳು ಸಾಕಷ್ಟಾಗಿ ಒದಗಿರಲಿಲ್ಲ. ಈಗಾಗಲೆ ತಾನು ಖಲೀಫನ ವಿರುದ್ಧ ಉಪಾಯುವನ್ನು ಕೈಕೊಂಡರೆ ತನ್ನ ಶತ್ರುಗಳು 'ಧರ್ಮಗ್ಲಾನಿಯುವಾಗುತ್ತಿದೆ' ಎಂಬ ಕೂಗನ್ನೆಬ್ಬಿಸಿ ಅಜ್ಞಾನದಲ್ಲಿದ್ದ ಜನರನ್ನು ತನ್ನ ವಿರುದ್ಧವಾಗಿ ಹುರಿದುಂಬಿಸಬಹುದು, ತನ್ನ ವಿರುದ್ಧ ಕ್ರಾಂತಿ ಏಳಬಹುದು. ಆದರೆ ಕೆಮಾಲನು ಕ್ರಾಂತಿಗಾಗಿ ಹೆದರಿರಲಿಲ್ಲ. ತಾನೇ ಕೊನೆಗೆ ಗೆಲ್ಲುವನೆಂಬ ಆತ್ಮವಿಶ್ವಾಸವು ಅವನಿಗಿದ್ದಿತು. ಆದರೆ ದೇಶದೊಳಗೆಯೆ ಪಂಗಡಗಳಾಗಿ ಪ್ರತ್ಯಕ್ಷವಾದ ಅಂತಃಕಲಹವು ಪ್ರಾರಂಭವಾದರೆ ಆಂತರರಾಷ್ಟ್ರೀಯ ವ್ಯವಹಾರದಲ್ಲಿ ತುರ್ಕಸ್ತಾನಕ್ಕೆ ಸ್ಥಾನವಾಗಲಿ ಸನ್ಮಾನವಾಗಲಿ ನ್ಯಾಯವಾಗಲಿ ದೊರಕುವುದಿಲ್ಲೆಂದು ಅವನಿಗೆ ಖಂಡಿತವಾಗಿ ಗೊತ್ತಿದ್ದಿತು. ಇದೇ ಸಮಯಕ್ಕೆ ಬ್ರಿಟಿಶರೊಡನೆ ಒಂದು ತಂಟೆ ಎದ್ದಿತ್ತು. ಮೋಸಲ ಎಂಬ ಪ್ರಾಂತವು ತಮ್ಮ ಅಧಿಕಾರ

ಕೊಳಗಾದುದೆಂದು ಬ್ರಿಟಿಶರು ಹಟ ಹಿಡಿದಿದ್ದರು. ಮೋಸಲ ಪ್ರಾಂತವು ಕೆಮಾಲನಿಗೆ ಬೇಕಿರಲಿಲ್ಲ; ಸಾಮ್ರಾಜ್ಯಲಾಲಸೆ ಇವನಿಗೆ ಎಳ್ಳಷ್ಟೂ ಇದ್ದಿರಲಿಲ್ಲವೆಂಬುದನ್ನು ನಾವು ಹಿಂದೆ ಅನೇಕಸಲ ತೋರಿಸಿಕೊಟ್ಟಿದ್ದೇವೆ. ಮೋಸಲದ ಜನರು ತುರ್ಕರಲ್ಲ. ಅವರ ಸಲುವಾಗಿ ಬ್ರಿಟಿಶರೊಡನೆ ಯುದ್ಧವನ್ನು ಹೂಡಲು ಕೆಮಾಲನು ಸಿದ್ಧನಿರಲಿಲ್ಲ. ಆದರೆ ಮೋಸಲದಲ್ಲಿ ಬ್ರಿಟಿಶರ ಅಧಿಕಾರ ನೆಲೆಗೊಂಡರೆ ಮಗ್ಗುಲಲ್ಲಿಯೆ ಕ್ರಾಂತಿಯ ಬೀಜವನ್ನು ಊರಿದಂತೆ ಎಂದು ಕೆಮಾಲನು ಅರಿತಿದ್ದನು. ಈಗಾಗಲೆ ಕುರ್ದಿಸ್ತಾನದ ಜನರನ್ನು ಬ್ರಿಟಿಶರು ಕೆಮಾಲನ ವಿರುದ್ಧ ಹುರಿದುಂಬಿಸಿದ್ದರು. ಕೆಮಾಲನು ದೇವಲಂಡನು, ಧರ್ಮಲಂಡನು ಎಂಬ ನಿಮಿತ್ತಕ್ಕಾಗಿ ಕೆಮಾಲನ ಅಧಿಕಾರಕ್ಷೇತ್ರದ ಹೊರಗೆ ತಮ್ಮ ಸ್ವಾಯತ್ತ (autonomous) ಪ್ರಾಂತ ಬೇಕೆಂದು ಕುರ್ದಿಸ್ತಾನದ ಜನರ ಚಳವಳ. ಇನ್ನು ಮೋಸಲದಲ್ಲಿ ಸ್ಥಿರವಾಗಿಯೆ ಬ್ರಿಟಿಶರ ಪ್ರಭಾವವು ನೆಲೆಯೂರಿದರೆ ನೆರೆಮನೆಯಲ್ಲಿಯೆ ಪಿಡುಗನ್ನು ತಂದು ಬಿಟ್ಟಂತಾಗುತ್ತಿತ್ತು. ಆದುದರಿಂದ ಕೆಮಾಲನು ಮಾತುಕತೆಗಳ ತಂಟೆಯನ್ನು ಹೂಡಿದ್ದನು. ಒಂದುಕಡೆ ಖಲೀಫನೆಂದರೆ ತನ್ನ ಶತ್ರುಗಳಗುಪ್ತಾಲೋಚನೆಗಳ ಉದ್ದೀಪಕ, ಇನ್ನೊಂದುಕಡೆ ಮೋಸಲದ ತೊಡಕು. ಹೀಗಾಗಿ ಕೆಮಾಲನು ಯಾವ ಉಪಾಯವನ್ನೂ ಕೈಕೊಳ್ಳಲಾರದೆ, ಶೀಘ್ರವಾಗಿ ಉಪಾಯಗಳನ್ನು ಕೈಕೊಳ್ಳದಿದ್ದರೆ ಗಂಡಾಂತರವು ಬಲಿಯುವುದೆಂದು ಮನವರಿತು ಉಭಯ ಸಂಕಟದಲ್ಲಿ ಸಿಕ್ಕಿಕೊಂಡಿದ್ದನು. ಈ ಸಮಯಕ್ಕೆ ತುರ್ಕಸ್ತಾನದ ಧರ್ಮಪರಿಸ್ಥಿತಿಯು ಇನ್ನೊಂದು ತೊಡಕು ಮುಂದೆ ಒಂದು ನಿಂತಿತು.

ತುರ್ಕಸ್ತಾನದ ಜನರ ಧರ್ಮವು ಮುಹಮ್ಮದೀಯ ಧರ್ಮ. ಮುಹಮ್ಮದೀಯ ಧರ್ಮವು ಉದಯವಾದಂದಿನಿಂದ ತನ್ನ ಪ್ರಚಾರವನ್ನು ಒಂದು ಮುಖ್ಯ ಉದ್ದಿಶ್ಯವಾಗಿಟ್ಟುಕೊಂಡಿತ್ತು. ಮುಹಮ್ಮದೀಯ ಮತಾನುಯಾಯಿಗಳು ತುರ್ಕಸ್ತಾನದಂತೆ ಅರಬಸ್ತಾನ–ಹಿಂದುಸ್ತಾನ–ಅಫಗಾನಿಸ್ತಾನ ಮೊದಲಾದ ದೇಶಗಳಲ್ಲೂ ವಿಪುಲವಾಗಿದ್ದರು. ಇದರಲ್ಲಿ

ಅರಬಸ್ಥಾನವಂತೂ ಮುಹಮ್ಮದೀಯರ ಪುಣ್ಯಸ್ಥಾನ. ಹಿಂದುಸ್ಥಾನದಲ್ಲಿ ನೂರಾರು ವರ್ಷಗಳ ವರೆಗೆ ಮುಹಮ್ಮದೀಯರು ಸಾಮ್ರಾಜ್ಯವನ್ನು ನಡೆಸಿದ್ದರು. ಇನ್ನೂ ಅನೇಕ ಚಿಕ್ಕ-ಪುಟ್ಟ ಪ್ರದೇಶಗಳಲ್ಲೂ ಮುಹಮ್ಮದೀಯರು ವಾಸವಾಗಿದ್ದರು. ಜಗತ್ತಿನ ಅನೇಕ ಭಾಗಗಳ ಮುಹಮ್ಮದೀಯರೆಲ್ಲ ಒಂದುಗೂಡಿ ಮುಹಮ್ಮದೀಯ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ ಮಹತ್ವಾಕಾಂಕ್ಷೆಯು ಕೆಲವು ಧಾರ್ಮಿಕಮುಂದಾಳುಗಳ ಮನದಲ್ಲಿ ಕುಣಿಯುತ್ತಲಿದ್ದಿತು. ಸುಲ್ತಾನನಿರುವ ವರೆಗೆ ಈ ಮಹತ್ವಾಕಾಂಕ್ಷೆಯು ಹೆಚ್ಚು ತೀವ್ರವಾಗಿದ್ದಿತು. ಸುಲ್ತಾನನು ಒಂದು ಕಡೆ ತುರ್ಕಸ್ಥಾನದ ಸಮ್ರಾಟನೆನಿಸಿದರೆ, ಇನ್ನೊಂದು ಕಡೆ ಖಲೀಫನೆಂಬ ಅಧಿಕಾರದಿಂದ ಜಗತ್ತಿನ ಎಲ್ಲ ಮುಹಮ್ಮದೀಯರ ಮುಖ್ಯನೆನಿಸುತ್ತಿದ್ದನು. ಮಹಾಯುದ್ಧದ ಕಾಲಕ್ಕೆ ಹಿಂದುಸ್ಥಾನದ ಮುಹಮ್ಮದೀಯರಿಗೆ ಬ್ರಿಟಿಶ ಸರಕಾರವು 'ನಿಮ್ಮ ಧರ್ಮಕ್ಕೆ ನಾವು ಕೈ ಹಚ್ಚುವುದಿಲ್ಲ' ಎಂದು ಆಶ್ವಾಸನ ಕೊಡಬೇಕಾಯಿತೆಂದ ಮೇಲೆ ಇವರ ದೇಶಾಭಿಮಾನಕ್ಕಿಂತ ಧರ್ಮಾಭಿಮಾನವು ಎಷ್ಟು ಹೆಚ್ಚು ಜಾಗೃತವಾಗಿತ್ತೆಂಬುದರ ಕಲ್ಪನೆ ಬರುವುದು. ಇವರ ದೇಶಾಭಿಮಾನವೂ ತೀವ್ರಸ್ವರೂಪದ್ದೇ ಇದ್ದಿತು; ಇಲ್ಲವಾದರೆ ಅನೇಕ ದೇಶಗಳಲ್ಲಿ ಇವರು ಕ್ರಾಂತಿಯನ್ನೆಬ್ಬಿಸಬಹುದಾಗಿತ್ತು. ಅಂತೂ ದೇಶಾಭಿಮಾನ-ಧರ್ಮಾಭಿಮಾನಗಳ ತಿಕ್ಕಾಟ ಒಂದು ಕಡೆ, ಧರ್ಮಸಾಮ್ರಾಜ್ಯಸ್ಥಾಪನೆಯ ಮಹತ್ತ್ವಾಕಾಂಕ್ಷೆ ಇನ್ನೊಂದುಕಡೆ. ಮಹಾಯುದ್ಧವು ಮುಗಿಯಿತು. ತುರ್ಕಸ್ಥಾನವು ಸೋತು, ನವೆದು, ನಣ್ಣಾಯಿತು. ಇಷ್ಟರಲ್ಲಿ ಮುಸ್ತಾಫಾ ಕೆಮಾಲ ಪಾಶಾನ ಪುನರ್ಘಟನೆಯ ಕ್ರಾಂತಿ ಪ್ರಾರಂಭವಾಯಿತು. ಮೊದಲು ಹತಾಶರಾದ ಮುಹಮ್ಮದೀಯರು ಈಗ ಮತ್ತೆ ಧೈರ್ಯಗೊಂಡರು. ತಮ್ಮ ಪಂತದಲ್ಲಿ ವೀರನೊಬ್ಬನು ಉದಯಿಸಿದನೆಂದು ಇವರಿಗೆ ಅಭಿಮಾನವೆನಿಸಿತು. ಕೆಮಾಲನು ಹೆಚ್ಚೆಚ್ಚು ವಿಜಯಶಾಲಿಯಾದಂತೆ ಇವರ ಮೊದಲಿನ ಮಹತ್ತ್ವಾಕಾಂಕ್ಷೆಯು ಮತ್ತೆ ಚಿಗುರತೊಡಗಿತು. ಆದರೆ ಯಾವನ ಮೇಲೆ ಅಷ್ಟೊಂದು ಆಶೆಯನ್ನಿಟ್ಟಿದ್ದರೋ ಆ ಕೆಮಾಲನೆ ಇವರ

ಆಶಾಂಕುರಗಳನ್ನು ಒಣಗಿಸಿ ಸುಟ್ಟೊಗೆವ ಸೂರ್ಯನಾದನು. ಧರ್ಮದ ಮೇಲಂತೂ ಕೆಮಾಲನ ವಿಶ್ವಾಸವಿದ್ದಿರಲಿಲ್ಲ; ಆದರೆ ಸಾಮ್ರಾಜ್ಯದ ಕಲ್ಪನೆ ಕೂಡ ಇವನಿಗೆ ಅಸಹ್ಯವಾಗಿತ್ತು. ಇವನು ತೀವ್ರ ದೇಶಾಭಿಮಾನಿ; ದೇಶಕ್ಕಾಗಿ ಮಾತ್ರ ಅಭಿಮಾನವುಳ್ಳವನು. ಸಾಮ್ರಾಜ್ಯ ಲಾಲಸೆಯೆ ತುರ್ಕಸ್ತಾನದ ಅಧೋಗತಿಗೆ ಕಾರಣವಾಗಿದ್ದಿತೆಂದು ಇವನ ದೃಢವಾದ ಅಭಿಪ್ರಾಯ. ಆ ಅಭಿಪ್ರಾಯವನ್ನನುಸರಿಸಿಯೆ ಇವನು ಸುಲ್ತಾನಿಕೆಯನ್ನು ಕಿತ್ತೊಗೆದುದು. ಈಗಲೂ ಕೂಡ ಹೊರಗಿನ ಮುಹಮ್ಮದೀಯ ಮುಂದಾಳುಗಳು ಪೂರ್ತಿಯಾಗಿ ಆಸೆಗೆಡಲಿಲ್ಲ. ಸುಲ್ತಾನನು ಹೋಗಲಿ, ಹಳೆಯ ಸುಲ್ತಾನಿಕೆಯೂ ಹೋಗಲಿ; ಅವೆರಡೂ ಕೈಲಾಗದ ವಸ್ತುಗಳಾಗಿದ್ದುವು. ಆದರೆ ಇನ್ನೂ ಕೆಮಾಲನಿರುವನಲ್ಲ? ಇವನನ್ನೆ ಸುಲ್ತಾನಸ್ಥಾನದಲ್ಲಿರಿಸೋಣ; ಸುಲ್ತಾನಿಕೆಯ ಪುನರುಸ್ಥಾಪನೆಯೆ ಬೇಡವಾಗಿದ್ದರೆ ಇವನನ್ನು ಮುಹಮ್ಮದೀಯ ಸಮ್ರಾಟನೆಂದು ಮುಂದಿರಿಸುವಾ—ಎಂದು ಈ ಮುಂದಾಳುಗಳ ಹಂಚಿಕೆ. ಆದರೆ ದಿವಸ-ದಿವಸಕ್ಕೆ ಹೆಚ್ಚಾಗುತ್ತಿರುವ ಕೆಮಾಲನ 'ಧರ್ಮಲಂಡತನ'ವು ಇವರಿಗೆ ಹೃದಯಶಲ್ಯವಾಗತೊಡಗಿತು. ಕೆಮಾಲನಿಗೆ ಮುಹಮ್ಮದೀಯ ಧರ್ಮವೆ ಬೇಡಾಗಿದೆ ಎಂಬುದನ್ನರಿತು ಇವರ ಹೃದಯದಲ್ಲಿ ಹಾಹಾಕಾರವೆದ್ದಿತು. 'ಮುಹಮ್ಮದೀಯ ಧರ್ಮವು ನಮ್ಮ ಧರ್ಮವಲ್ಲ' ಎಂದು ಕೆಮಾಲನು ಸಾಧಿಸತೊಡಗಿದನು. 'ನಾವು ಮಧ್ಯ ಏಶಿಯಾದಿಂದ ಬಂದು ತುರ್ಕಸ್ತಾನವನ್ನು ಗೆದ್ದವರು. ನಮ್ಮ ಮುಂಚೆ ಇಲ್ಲಿದ್ದುನಮಗೆ ಸೋತವರು ಮುಹಮ್ಮದೀಯರಾಗಿದ್ದರು. ಕಾಲಾನುಸಾರವಾಗಿ ಸೋತವರ ಧರ್ಮಕ್ಕೆ ನಾವು ಸೋತೆವು. ಇಂದು ಅದೇ ಕಾಲಗತಿಯನ್ನನುಸರಿಸಿ ಆ ಧರ್ಮವನ್ನು ಬಿಟ್ಟುಬಿಡೋಣ ಎಂದು ಕೆಮಾಲನ ತರ್ಕವಾದ. ಇಷ್ಟಾದರೂ ಹೊರಗಿನ ಧರ್ಮಾಭಿಮಾನಿಗಳು ತಮ್ಮ ಹಂಬಲವನ್ನು ಬಿಡಲಿಲ್ಲ. ಮೇಲಿಂದಮೇಲೆ ವೀರನಾದ ವಿಜಯಿಯಾದ ಕೆಮಾಲನಿಗೆ ಮಾನಪತ್ರಗಳನ್ನೂ ಶಿಷ್ಟಮಂಡಳಗಳನ್ನೂ ಕಳುಹಿಸಿಕೊಡುತ್ತಿದ್ದರು. ಪ್ರತಿಯೊಂದು ಸಂದರ್ಭದಲ್ಲಿ ಧರ್ಮಸಾಮ್ರಾಜ್ಯದ ಮಾತನ್ನು

ಎತ್ತುತ್ತಿದ್ದರು, ಕೆಮಾಲನನ್ನು ಅಪಾರವಾಗಿ ಸ್ತುತಿಸುತ್ತಿದ್ದರು. ಆದರೆ ಕೆಮಾಲನು ಸ್ತುತಿಗಾಗಿ ಕಂಗೆಟ್ಟವನಲ್ಲ; ದೇಶಕ್ಕಾಗಿ, ದೇಶಬಾಂಧವರಿಗಾಗಿ ಪ್ರಗತಿಯ ಪಣವನ್ನು ತೊಟ್ಟವನು. ಒಮ್ಮೆ ಕೂಡ ಅವನು ಸ್ತುತಿಗೆ ಮನಸೋಲಲಿಲ್ಲ. ಇಷ್ಟೇಕೆ? ಸ್ತುತಿಸಬೇಕೆಂದು ನೂರಾರು ದೇಶಗಳಿಂದ ಬಂದುದಕ್ಕಾಗಿ ಇವರಿಗೆ ಅನುನಯವನ್ನು ಕೂಡ ತೋರಿಸುತ್ತಿರಲಿಲ್ಲ. ತನ್ನ ಮನಸಿನ ವಿಚಾರಗಳನ್ನು ಸ್ಪಷ್ಟವಾಗಿ ಹೇಳಿಬಿಡುತ್ತಿದ್ದನು. ಮುಹಮ್ಮದೀಯ ಧರ್ಮದ ಸೇವೆಯು ತನ್ನ ದೇಶದ ಸೇವೆಗೆ ಅಡ್ಡ ಬರುವುದು ಎಂದು ಅವನ ಮತ. ಒಮ್ಮೆ ಹಿಂದುಸ್ತಾನದಿಂದ ಬಂದ ಮುಹಮ್ಮದೀಯ ಶಿಷ್ಟಮಂಡಳಕ್ಕೆ ಸ್ಪಷ್ಟವಾಗಿ ಒಂದು ಪ್ರಶ್ನೆಯನ್ನು ಕೇಳಿದನು: 'ನೀವು ಬ್ರಿಟಿಶರ ಪ್ರಜೆಗಳು. ನಾಳೆ ಬ್ರಿಟಿಶರಿಗೂ ತುರ್ಕಸ್ತಾನಕ್ಕೂ ವಿರೋಧವಾಗಿ ಯುದ್ಧ ಪ್ರಾರಂಭವಾದರೆ ನೀವು ಧರ್ಮದ ಅಭಿಮಾನದಿಂದ ನಿಮ್ಮ ಅರಸರ ವಿರುದ್ಧವಾಗಿ, ಪ್ರತ್ಯಕ್ಷವಾಗಿ ತುರ್ಕಸ್ತಾನದ ಸಲುವಾಗಿ ಕಾದಾಡುವಿರಾ? ಇಲ್ಲವಾದರೆ, ಮುಹಮ್ಮದೀಯ ಧರ್ಮದ ಅಭಿಮಾನವಿದ್ದು ಉಪಯೋಗವೇನು? ಆ ಅಭಿಮಾನದ ಬಲಿಯಲ್ಲಿ ತುರ್ಕಸ್ತಾನವೊಂದೇ ಸಿಕ್ಕಿಬಿದ್ದರೆ ಲಾಭವೇನು? ನಮ್ಮ ದೇಶಕ್ಕೆ ಸಹಾಯಕಾರಕವಾಗದಂತಹ, ಅಪಾಯಕರವೆ ಆಗುವಂತಹ ಈ ಧರ್ಮವೂ ಬೇಡ, ಇದರ ಅಭಿಮಾನವೂ ಬೇಡ.' ಕೆಮಾಲನು ಖಲೀಫನಾಗಲೂ ಒಪ್ಪಲಿಲ್ಲ, ಸುಲ್ತಾನನಾಗಲೂ ಒಪ್ಪಲಿಲ್ಲ.

ಈಗ ಮಾತ್ರ ಮುಹಮ್ಮದೀಯ ಸಾಮ್ರಾಜ್ಯವಾದಿಗಳಿಗೆ ಸಂಪೂರ್ಣ ನಿರಾಶೆಯಾಯಿತು. ಕೆಮಾಲನ ವಿಷಯವಾಗಿ ಕೋಪವೂ ಬಂದಿತು. ಕೆಮಾಲನ 'ಧರ್ಮಲಂಡತನ' ದಿಂದ ಇಡಿಯ ಜಗತ್ತಿನ ಮುಹಮ್ಮದೀಯರಿಗೇ ಹಾನಿ ತಟ್ಟುವುದೆಂದು ಇವರು ಹೆದರಿದರು. ಕೆಮಾಲನು ಖಲೀಫನನ್ನು ಸುಸ್ಥಿತಿಯಲ್ಲಿಟ್ಟಿಲ್ಲವೆಂದೂ ಸನ್ಮಾನವನ್ನು ಕೊಡುವುದಿಲ್ಲವೆಂದೂ ಇವರಿಗೆ ತಿಳಿದುಬಂದಿತು. ತುರ್ಕಸ್ತಾನದಲ್ಲಿಯೆ ಖಲೀಫನಿಗೆ ಸನ್ಮಾನವಿಲ್ಲದೆ ಹೋದರೆ ಮುಹಮ್ಮದೀಯ ಧರ್ಮವು ಹೊರಗೆ ಹಾಸ್ಯಕ್ಕೀಡಾಗಲಿಕ್ಕಿಲ್ಲವೆ? ಕೆಮಾಲನೆ ಮುಂದಾಗಿ ಖಲೀಫನನ್ನು ಅವಮಾನಗೊಳಿಸ

ತೊಡಗಿದರೆ ಏನೂ ಅರಿಯದ ಸಾಮಾನ್ಯ ಮಹಮ್ಮದೀಯರಲ್ಲಿ ಧರ್ಮ ಕ್ಕಾಗಿ ಅಭಿಮಾನ ಕುಂದಬಹುದಲ್ಲವೆ? ಹೀಗೆ ವಿಚಾರಮಾಡಿ ಕೆಲ ಮಹಮ್ಮದೀಯ ಮುಂದಾಳುಗಳು ಕೆಮಾಲನ ವರ್ತನೆಯನ್ನು ಖಂಡಿ ಸಲು ಸಿದ್ಧರಾದರು. ಸುದೈವದಿಂದಲೊ ದುರ್ದೈವದಿಂದಲೊ, ಈ ಖಂಡನಾಕಾರ್ಯದಲ್ಲಿ ಬ್ರಿಟಿಶ ಹಿಂದುಸ್ಥಾನಕ್ಕೆ ಸಂಬಂಧಿಸಿದ ಈರ್ವ ಮಹಮ್ಮದೀಯರು ಮುಖ್ಯಭಾಗವನ್ನು ವಹಿಸಿದರು. ಆಗಾಖಾನರೂ ಮತ್ತು ಎಮ್.ರ ಅಲಿ ಇವರಿಬ್ಬರೂ ಹಿಂದುಸ್ಥಾನದ ಮಹಮ್ಮದೀಯರ ಪತಿಯಿಂದ ಕೆಮಾಲನಿಗೆ ಪತ್ರವನ್ನು ಕಳುಹಿಸಿದರು. ಖಲೀಫನ ಸ್ಥಾನ-ಮಾನಗಳನ್ನು ಯೋಗ್ಯವಾದ ರೀತಿಯಲ್ಲಿ ಕಾಯಬೇಕೆಂದೂ ಅದಕ್ಕೆ ವಿರುದ್ಧವಾದ ವರ್ತನವನ್ನು ತಾವು ತೀವ್ರವಾಗಿ ನಿಷೇಧಿಸುವರೆಂದೂ ಈ ಪತ್ರದ ಆಶಯುವಿದ್ದಿತು. ಕೊನೆಗೆ ಬೆಕ್ಕಿನ ಮುಂದೆ ಇಲಿ ಓಡಲೇ ಬೇಕಾದಂತಾಯಿತು. ಕೆಮಾಲನು ಇದುವರೆಗೆ ಕಾದುತ್ತ ಕುಳಿತ ಸಮಯವು ಸಿಕ್ಕಿತೀಗ. ಬ್ರಿಟಿಶರೆಂದರೆ ತಮ್ಮ ಆಜನ್ಮ ಶತ್ರುಗಳೆಂಬ ಭಾವನೆ ಪ್ರತಿಯೊಬ್ಬ ತುರ್ಕೀಯನ ಹೃದಯದಲ್ಲಿ ಕುದಿಯುತ್ತಿದ್ದಿತು. ಆ ಭಾವನೆಯನ್ನು ಪೂರ್ತಿಯಾಗಿ ಕೈಗುಣಿಸಿಕೊಂಡನು ಕೆಮಾಲನು. ಆಗಾಖಾನ ಎಂಬ ವ್ಯಕ್ತಿಯ ಪರಿಚಯವನ್ನು ತನ್ನ ಜನರಿಗೆ ತನಗೆ ಬೇಕಾದ ರೀತಿಯಲ್ಲಿ ಮಾಡಿಕೊಟ್ಟನು. ಆಗಾ ಖಾನ ಎಂದರೆ ಯಾರು? ಹಿಂದುಸ್ಥಾನದಲ್ಲಿ ಪ್ರತಿಯೊಂದರಲ್ಲಿ ಮುಂದೆಮುಂದಾಗಿ ಓಡಾಡುವ ಒಬ್ಬ ಮಹಮ್ಮದೀಯ. ಇರುವುದು ಇಂಗ್ಲಂಡದಲ್ಲಿ. ಮಾಡುವುದು ಜೂಜಿನ ಕುದುರೆಗಳ ಒಡೆತನ. ಉಡುವುದು ಇಂಗ್ಲಿಶ ಬಟ್ಟೆಗಳನ್ನು. ಧನಿಕ ಮತ್ತು ಮಹತ್ತ್ವವುಳ್ಳ ಪರಕೀಯರೊಡನೆ ಸಲಿಗೆಯನ್ನು ಬೆಳೆಸು ವುದು ಇವನ ಸ್ವಭಾವ. ಮಹಾಯುದ್ಧದ ಕಾಲಕ್ಕೆ ಈ ವ್ಯಕ್ತಿಯ ಉಪಯುಕ್ತತೆಯನ್ನು ಕಂಡು, ಇವನ ಡಂಗುರ ಸಾರಿ, ಇವನನ್ನು ಹಿಂದುಸ್ಥಾನದ ಮಹಮ್ಮದೀಯರ ಮುಂದಾಳುತನದಲ್ಲಿರಿಸಿದವರು ಕುಟಿಲರಾದ ಬ್ರಿಟಿಶರು. ಇವನು ಬ್ರಿಟಿಶರ ಸಾಕು-ಸುದ್ದಿಗಾರ, ಚಳವಳದ ಚಾಣಕ್ಯ. ಈಗ ತುರ್ಕಸ್ಥಾನವು ಬಲಿಷ್ಠವಾಗುತ್ತಿರುವುದನ್ನು ಸಹಿಸದೆ

ಖಲೀಫನ ನಿಮಿತ್ತವಾಗಿ ನಮ್ಮಲ್ಲಿ ಅಂತಃಕಲಹವನ್ನು ಎಬ್ಬಿಸಲು ಈ ಆಗಾಖಾನನನ್ನು ಬ್ರಿಟಿಶರೆ ಮುಂದೆ ಮಾಡಿದ್ದಾರೆ! ಸಾಕು. ಇಂತಹ ಸಂಗತಿಗಳಿಂದ ಸಾಮಾನ್ಯರಂತೂ ದೂರದಲ್ಲುಳಿಯಲಿ, ಶಾಸನಸಭೆಯ ಸದಸ್ಯರು ಕೂಡ ಸಿಡಿದೆದ್ದರು. ಓಹೋ! ಇದು ಬ್ರಿಟಿಶರ ಕುಟಿಲ ತಂತ್ರವೆ? ಖಲೀಫನ ನಿಮಿತ್ತದ ಕೆಳಗೆ ನಮ್ಮನ್ನು ಹುಚ್ಚ್ಚುಮಾಡುವ, ಹಣ್ಣು ಮಾಡುವ ಹವಣಿಕೆಯೆ? ಎಂದು ರೇಗಿದರು. ಕೆಮಾಲನಿಗೂ ಇಷ್ಟೇ ಬೇಕಿದ್ದಿತು. ಬರಿಯ ರೇಗಿದ ಮಾತ್ರಕ್ಕೆ ನಿಮ್ಮ ಹೊಣೆಗಾರಿಕೆ ಮುಗಿಯಲಿಲ್ಲ—ಎಂದನು ಸಭಿಕರಿಗೆ. ತುರ್ಕಸ್ತಾನದ ಮೇಲೆ ಬಂದ ಗಂಡಾಂತರವನ್ನು ಎದುರಿಸಲೇ ಬೇಕು—ಎಂದು ಸಂದೇಶ ಕಳುಹಿಸಿದನು ತನ್ನ ದೇಶಬಾಂಧವರಿಗೆ. ಈ ಖಲೀಫನು ನಮ್ಮಲ್ಲಿರುವ ವರೆಗೆ ಮನೆಯ ಮಲಗುವ ಕೋಣೆಯಲ್ಲಿಯೆ ಜೇನುಹುಟ್ಟನ್ನು ಇಟ್ಟಂತೆ ಎಂದು ತಿಳುಹಿಸಿ ಹೇಳಿದನು. ಖಲೀಫನು ಬೇಕೊ, ತುರ್ಕಸ್ತಾನವು ಬೇಕೊ? ನೂರಾರು ವರ್ಷಗಳಿಂದ ಖಲೀಫನ ಮುಂದೆ ಮೊಣಕಾಲೂರಿದಿರಿ! ಅದರಿಂದ ನಿಮ್ಮ ಬೆನ್ನು ಬಾಗಿತಲ್ಲದೆ ಹೊಟ್ಟೆ ತುಂಬಲಿಲ್ಲ. ನೂರಾರು ವರ್ಷಗಳಿಂದ ಖಲೀಫನ ಆಜ್ಞೆಯಮೇರೆಗೆ ಪರದೇಶದಲ್ಲಿದ್ದ ಮುಹಮ್ಮದೀಯರ ಪರವಾಗಿ ಹೋರಾಡಿದಿರಿ; ಆದರಿಂದ ನಿಮ್ಮ ಬಾಯಿ ಒತ್ತಿತಲ್ಲದೆ ನಿಮಗೆ ಸ್ವಾತಂತ್ರ್ಯದ ತುತ್ತು ದೊರೆಯಲಿಲ್ಲ. ನಿಮ್ಮ ಜೀವನಸರ್ವಸ್ವವನ್ನು ಶ್ರದ್ಧೆಯಿಂದ, ವಿಶ್ವಾಸದಿಂದ ಖಲೀಫನ ಕೈಯಲ್ಲಿ ಕೊಟ್ಟಿರಿ. ಅದು ಈಗ ಹಿಂಡಿ ಹಿಪ್ಪೆಯಾಗಿದೆ. ಈ ಖಲೀಫನು ಬೇಕೆ ನಿಮಗೆ? ಇಲ್ಲವೆ—ನಿಮ್ಮ ಹಿತಶತ್ರುಗಳಾದ ಬ್ರಿಟಿಶರೂ ಪರಕೀಯರೂ ದೇಶದಿಂದ ಹೊರಹೊರಡುವಂತೆ ಶೌರ್ಯದಿಂದ ಹೋರಾಡಿ ಈಗ ನಿಮಗೆ ರೊಟ್ಟಿ-ಬಟ್ಟೆಗಳನ್ನು ಕೊಡಬೇಕೆಂದು ಹೆಣಗುವ ತರುಣತುರ್ಕಸ್ತಾನವು ಬೇಕೆ? ಹೀಗೆ ಹಿಂದೇ ಸವನೆ ದೇಶದಲ್ಲಿ ಪ್ರಚಾರವನ್ನು ನಡೆಸಿದನು. ಇನ್ನು ಶತ್ರುಗಳಿಗೆ ಹೆಚ್ಚು ಸಮಯವನ್ನು ಕೊಟ್ಟಲ್ಲಿ ಲಾಭವಿಲ್ಲೆಂದು ಕಂಡನು. ತನ್ನ ನಿರ್ಣಯದಿಂದ ದೇಶದಲ್ಲಿ ಒಂದುವೇಳೆ ಅಶಾಂತಿ ಹರಡಿದರೆ ಸೈನ್ಯವೂ ಸೈನ್ಯಾಧಿಕಾರಿಗಳೂ ತನ್ನನ್ನು ಹಿಂಬಾಲಿಸುವಂತೆ ನೋಡಿ

ಕೊಂಡನು. ತುರ್ಕಸ್ತಾನವು ಈಗ ಪ್ರಜಾಸತ್ತಾತ್ಮಕವಾಗಿದೆ; ಪ್ರಜೆಗಳ ಹಿತವೆ ಅವರನ್ನಾಳುವವರ ಕರ್ತವ್ಯ. ಪ್ರಜೆಗಳ ಹಿತಕ್ಕೆ ಅಡ್ಡ ಬರುವವರನ್ನು ಕಡಿದೊಗೆವುದು ತನ್ನಂತಹ ದೇಶಸೇವಕನ ಧ್ಯೇಯ. ಪ್ರಜೆಗಳಲ್ಲಿ ಸ್ವಾಭಿಮಾನ ಬೆಳೆಯಬೇಕು, ಸ್ವಾತಂತ್ರ್ಯ ಬುದ್ಧಿಯು ಅಂಕುರಿಸಬೇಕು, ಆತ್ಮವಿಶ್ವಾಸವು ಬೆಳೆಯಬೇಕು; ಜನರು ಸುಶಿಕ್ಷಿತರಾಗಬೇಕು, ಸುಸಂಸ್ಕೃತರಾಗಬೇಕು, ತಮ್ಮ ಜೀವನದ ಸಮಸ್ಯೆಗಳನ್ನು ಎದುರಿಸಲು ಸಮರ್ಥರಾಗಬೇಕು, ತಮ್ಮ ಸುತ್ತುಮುತ್ತಲಿನ ವ್ಯವಹಾರದಲ್ಲಿ ಬೆರೆತುಕೊಳ್ಳುವ ಜಾಣ್ಮೆಯನ್ನು ಪಡೆಯಬೇಕು. ಖಲೀಫನಿದ್ದರೆ, ಧರ್ಮದ ಬೆದರಿಕೆ ಇದ್ದರೆ ಇದಾವುದೂ ಸಾಧ್ಯವಾಗುವುದಿಲ್ಲ. ಆದುದರಿಂದ ತುರ್ಕಸ್ತಾನದ ಹಿತಕ್ಕಾಗಿ, ಪ್ರಜಾಸತ್ತಾತ್ಮಕ ತುರ್ಕಸ್ತಾನದ ಸ್ವಾಸ್ಥ್ಯಕ್ಕಾಗಿ, ಪ್ರಜೆಗಳ ಪ್ರಗತಿಗೆ ಶತ್ರುವೆನಂತಿದ್ದ ಖಲೀಫನು ಹೋಗಲೇಬೇಕು. ಧರ್ಮವು ವ್ಯಕ್ತಿಗೆ ಸಂಬಂಧಿಸಿದೆ, ರಾಷ್ಟ್ರಕ್ಕೆ ಸಂಬಂಧಿಸಿಲ್ಲ; ರಾಷ್ಟ್ರದ ನೀತಿಗೆ ಧರ್ಮದ ನೀತಿಯು ಅಡ್ಡಬರುವಂತಿಲ್ಲ. ಅದಕಾಗಿ ತುರ್ಕಸ್ತಾನ ರಾಷ್ಟ್ರವು ಇಂದಿನಿಂದ ಪ್ರಜೆಗಳ ಪ್ರಭುತ್ವ (allegiance) ವನ್ನೆ ಒಪ್ಪುವುದಲ್ಲದೆ ಧರ್ಮದ ಪ್ರಭುತ್ವವನ್ನು ಒಪ್ಪಲು ಎಂದೂ ಸಿದ್ಧವಾಗಲಿಕ್ಕಿಲ್ಲ. ಹೀಗೆ ವಿಚಾರ ಮಾಡಿ, ಪ್ರಚಾರ ಹೂಡಿ ಕೊನೆಗೆ ೧೯೨೪ರ ಮಾರ್ಚ ೩ನೆಯ ದಿವಸ ಶಾಸನಸಭೆಯಲ್ಲಿ ಒಂದು ಮಹತ್ತ್ವದ ಮಸೂದೆಯನ್ನು ಮಂತ್ರಿಮಂಡಲದಿಂದ ಮಂಡಿಸಿದನು. ಎಲ್ಲರೂ ಸಮ್ಮತಿಸಲಿಲ್ಲ; ಆದರೂ-**ಒಬ್ಬನೂ ವಿರೋಧಿಸಲಿಲ್ಲ!** ಸಾಕು–ಇದೇ ಸುಚಿಹ್ನ, ಇದೇ ಪ್ರಗತಿಯ ಮೊದಲನೆಯ ಹೆಜ್ಜೆ ಎಂದು ಹೆಮ್ಮೆಯಿಂದ ಹೇಳಬಹುದು. ನವಚೈತನ್ಯದಿಂದ ತುಂಬಿತುಳುಕುವ ತಾರುಣ್ಯದ ಎದುರು ನಿಲ್ಲಲು, ತರುಣರಿಗೆ ಅಡ್ಡಬರಲು ಹಳಬರೂ ಅವರ ದೇವನೂ ಅವರ ಧರ್ಮವೂ ಧೈರ್ಯಸಾಲದೆ ನಿಂತುವೆಂದು ಹೇಳಬಹುದು. ಇಲ್ಲವಾದರೆ ಹೊಸ ದೇವನಿಗೆ, ಹೊಸ ಧರ್ಮಕ್ಕೆ, ತರುಣರ ಹೊಸ ಸೃಷ್ಟಿಗೆ ಆಸ್ಪದವೆ ಇಲ್ಲದಂತಾಗುತ್ತಿತ್ತು.

---

# ೪ ಪ್ರಜಾಪಾಲಕ ತತ್ತ್ವ

ಜರ್ಮನಿಯ ಸರ್ವಾಧಿಕಾರಿಯಾದ ಹಿಟ್ಲರನ ವಿಷಯವಾಗಿ ಕಿಡಿಗೇಡಿಗಳು ಒಂದು ಕತೆ ಹೇಳುವರು. ಜರ್ಮನಿಯಲ್ಲಿ ಮುಂಜಾವಿನಿಂದ ಸಂಜೆಯವರೆಗೆ ಪ್ರತಿಯೊಬ್ಬ ಜರ್ಮನನು ಹಿಟ್ಲರನ ಹೆಸರನ್ನು ಯಾವ ನಿಮಿತ್ತದಿಂದಾದರೂ ಉಚ್ಚರಿಸಲೇಬೇಕಂತೆ. ಬೆಳಗಿನಲ್ಲಿ ಒಬ್ಬರೊಬ್ಬರು ಭೆಟ್ಟಿಯಾದಾಗ 'ನಮೋ ಹಿಟ್ಲರಾಯ' ಎಂಬ ಮಾತಿನಿಂದ ಪ್ರಾರಂಭ; ಊಟದ ಮೊದಲನೆಯ ತುತ್ತು 'ಹಿಟ್ಲರಾಯ ಸ್ವಾಹಾ'; ದಣಿದು ಮಲಗುವಾಗ 'ಹಿಟ್ಲರ್, ಹಿಟ್ಲರ್' ಎನುತ್ತ ಮಗ್ಗುಲಾಗಿ ಕಣ್ಣು ಮುಚ್ಚುವುದು. ಹೀಗಾಗಿ ಬಹುಜನರಿಗೆ 'ಹಿಟ್ಲರ್' ಎಂಬ ಶಬ್ದವೆ ಹೆಚ್ಚಾಗಿ ಬಾಯಿಗೆ ರೂಢವಾಗಿದೆಯಂತೆ. ಎಷ್ಟೋ ಜನರು ಸಿಟ್ಟಿಗೆದ್ದು ಬಯ್ಯುವಾಗ 'ಹಿಟ್ಲರ್' ಶಬ್ದವನ್ನು ಬೈಗಳಂತೆಯೆ ಉಪಯೋಗಿಸುತ್ತಿರಬಹುದು. ಇಂತಹ ಪರಿಸ್ಥಿತಿಯಲ್ಲಿ ಕುತೂಹಲಿಯಾದ ಯಾವನೊ ಒಬ್ಬ ಪರಕೀಯನು ಬಂದನಂತೆ. ಅವನಿಗೂ ಒಬ್ಬ ಜರ್ಮನನಿಗೂ ಕೆಳಗೆ ಕಾಣಿಸಿದಂತೆ ಪ್ರಶ್ನೋತ್ತರವಾಯಿತು :—

'ನಿಮ್ಮ ದೇಶದ ಅಧ್ಯಕ್ಷನು ಯಾರು?'

'ಹಿಟ್ಲರ್'

'ಮುಖ್ಯಮಂತ್ರಿ ಯಾರು?'

'ಹಿಟ್ಲರ್'

'ಪರರಾಷ್ಟ್ರಮಂತ್ರಿ?'

'ಹಿಟ್ಲರ್'

'ಫಾಝಿ ಪಕ್ಷದ ನಾಯಕ?'

'ಹಿಟ್ಲರ್'

'ಅವನ ಅನುಯಾಯಿ?'

'ಹಿ–ಟ್ಲ–ರ್'!

ಕತೆಯು ಒಂದು ವೇಳೆ ನಿಜವಿರಲಿಕ್ಕಿಲ್ಲ. ಸರ್ವಾಧಿಕಾರಿತ್ವದ ದಬ್ಬಾಳಿಕೆಯು ಕೆಳಗಿದ್ದ ದೇಶಗಳಲ್ಲಿಯ ಪರಿಸ್ಥಿತಿಯನ್ನು ಮಾತ್ರ ಅದು ಚೆನ್ನಾಗಿ ಸೂಚಿಸುತ್ತಿದೆ. ಸರ್ವಾಧಿಕಾರಿಗೆ ಸರ್ವಾನುಮತದ ಬೆಂಬಲವಿರುವುದು, ಯಾಕೆಂದರೆ ಬೆಂಬಲ ಕೊಡದವರು ಜೀವವನ್ನಾಗಲಿ ದೇಶವನ್ನಾಗಲಿ ಬಿಟ್ಟು ಹೋಗಬೇಕಾಗುವುದು. ಇಂದು ಯುರೋಪದ ಸರ್ವಾಧಿಕಾರಿಗಳ ನಾಮಾವಳಿಯಲ್ಲಿ ಕೆಮಾಲನ ಹೆಸರೂ ಸಮಾವಿಷ್ಟವಾದದ್ದನ್ನು ಅನೇಕ ಕಡೆ ನೋಡಬಹುದು. ಕೆಮಾಲನು ಸರ್ವಾಧಿಕಾರಿ ಅಹುದೊ ಅಲ್ಲವೊ ಎಂಬುದನ್ನು ತುಸುಮಟ್ಟಿಗೆ ಹಿಂದೆ ಚರ್ಚಿಸಿದ್ದೇವೆ. ತೋರಿಕೆಯಲ್ಲಿ ಮಾತ್ರ ಕೆಮಾಲನು ಸರ್ವಾಧಿಕಾರಿಯಂತಿದ್ದುದು ನಿಜ. ಸುಲ್ತಾನಿಕೆಯನ್ನು ಕಿತ್ತೊಗೆದು ತುರ್ಕಸ್ಥಾನವನ್ನು ಪ್ರಜಾಸತ್ತಾತ್ಮಕ ರಾಜ್ಯವಾಗಿ ಮಾಡಿದ ಕೆಲವು ದಿವಸಗಳಲ್ಲಿ ಹೊಸತೊಂದು ಘಟನೆಯು ಸ್ವೀಕೃತವಾಯಿತು. ಆ ಘಟನೆಗನುಸರಿಸಿ ಕೆಮಾಲನು ರಾಷ್ಟ್ರಾಧ್ಯಕ್ಷನಾದನು. ಇದು ೧೯೨೩ ರ ಅಕ್ಟೋಬರ ತಿಂಗಳಿನಲ್ಲಿ ಜರುಗಿದ ಸಂಗತಿ. ಇಂದಿಗೂ ಕೆಮಾಲನು ರಾಷ್ಟ್ರಾಧ್ಯಕ್ಷನಾಗಿದ್ದಾನೆ. ಅದೇ ಘಟನೆಗನುಸರಿಸಿಯೆ ಕೆಮಾಲನಿಗೆ ಮುಖ್ಯಮಂತ್ರಿಯನ್ನೂ ಮಂತ್ರಿಮಂಡಲವನ್ನೂ ಗೊತ್ತುಪಡಿಸುವ ಅಧಿಕಾರ ಇಂದಿಗೂ ಇದೆ. ಇದಲ್ಲದೆ ಮಂತ್ರಿಸಭೆಯ (Council of Ministers) ಶಾಸನಸಭೆಯ ಮತ್ತು ಪ್ರಜಾಪಕ್ಷದ ಅಧ್ಯಕ್ಷನೂ ಕೆಮಾಲನೆ. ಸೈನ್ಯದ ಮುಖ್ಯಾಧಿಕಾರವಾದರೂ ಎಂದಿನಿಂದಲೂ ಕೆಮಾಲನ ಕೈಯಲ್ಲಿಯೆ. ನಿಜವಾಗಿ ನೋಡಿದರೆ ಮದಿವೆಮಾಡಿಕೊಂಡ ಹೆಂಡತಿಯೊಬ್ಬಳನ್ನು ಬಿಟ್ಟು ಉಳಿದ ಯಾವ ವಿಷಯಗಳಲ್ಲೂ ಕೆಮಾಲನ ಅಧಿಕಾರವು ಅಂದಿನಿಂದ ಇಂದಿನವರೆಗೆ ಕುಂಠಿತವಾಗಿಲ್ಲ. ಖಲೀಫನೊಬ್ಬನು ಕೆಮಾಲನ ಪ್ರತಿಸ್ಪರ್ಧಿಯಾಗಬಹುದಾಗಿತ್ತು. ಕೊನೆಗೆ ಆ ಪೀಡೆಯೂ ತಪ್ಪಿತು. ವಸ್ತುಸ್ಥಿತಿಯು ಹೀಗಿರುವಾಗ ಕೆಮಾಲನು ಸರ್ವಾಧಿಕಾರಿ ಎಂದು ಹೇಳಲು ಆತಂಕವೇನು?

ವಸ್ತುಸ್ಥಿತಿಯನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಆತಂಕವಿದೆ ಎಂಬ ಸಂಶಯ ಬರುವಂತಿದೆ. ರಾವುಫ್ ಮೊದಲಾದ ಪ್ರತಿಸ್ಪರ್ಧಿಗಳು

ಕೆಮಾಲನ ಮೇಲೆ ಇದೇ ಆರೋಪವನ್ನು ಹೊರಿಸುತ್ತಿದ್ದರು. 'ಇವನಿಗೆ ಅಧಿಕಾರಲಾಲಸೆ ಇದೆ, ವಿರೋಧವಾದರೆ ಧೈರ್ಯವೂ ಇಲ್ಲ ಸಹನವೂ ಇಲ್ಲ. ಕೇವಲ ತಾನು ಸರ್ವಾಧಿಕಾರಿಯಾಗಿ ಮೆರೆಯಬೇಕೆಂದೇ ಇವನು ಇಂತಹ ತಂತ್ರಗಳನ್ನು ಹೂಡಿದ್ದಾನೆ' ಎಂದು ಅವರು ಅನೇಕ ಸಲ ಹೇಳಿದ್ದರು. ಕೆಮಾಲನು ಯಾವಯಾವ ಕೃತ್ಯಗಳಿಂದ ತನ್ನ ಅಧಿಕಾರ ಲಾಲಸೆಯನ್ನು ತೋರಿಸಿದನು, ಯಾವ ಪರಿಯಿಂದ ಸರ್ವಾಧಿಕಾರಿ ಯಂತೆ ಮೆರೆದನು ಎಂಬುದನ್ನು ಖಲೀಫನನ್ನು ಹೊರದೂಡಿದ ತರು ವಾಯದ ಇತಿಹಾಸದಿಂದ ನೋಡೋಣ.

ಕುರ್ದಿಸ್ಥಾನದಲ್ಲಿ ದಂಗೆ ಎದ್ದ ಸಂಗತಿಯನ್ನು ಈ ಮೊದಲೇ ಹೇಳಿದ್ದೇವೆ. ಈ ದಂಗೆಯಲ್ಲಿ ಕೆಮಾಲನ ಅನೇಕ ಶತ್ರುಗಳು ಮುಖ್ಯ ಭಾಗವನ್ನು ವಹಿಸಿದ್ದರು. ದಂಗೆಯ ಕೊಳ್ಳಿಯನ್ನು ಹಚ್ಚಿದ ಹೊಣೆ ಗಾರಿಕೆಯೂ ಇವರ ತಲೆಯ ಮೇಲಿದ್ದಿತೆಂದು ಹೇಳಲು ಅಭ್ಯಂತರವಿಲ್ಲ. ಕೆಮಾಲನು ಶಾಸನಸಭೆಯನ್ನು ಕರೆದನು; ಸದಸ್ಯರ ಮುಂದೆ ಈ ಸ್ಥಿತಿ ಯನ್ನೆಲ್ಲ ಬಿಚ್ಚಿಟ್ಟನು; ತುರ್ಕಸ್ಥಾನದ ಸ್ವಾಸ್ಥ್ಯ ಬೇಕಾಗಿದ್ದರೆ ದೇಶ ದ್ರೋಹಿಗಳನ್ನು ದಯೆಯಿಲ್ಲದೆ ನಾಶಗೊಳಿಸುವುದಗತ್ಯ ಎಂದು ತನ್ನ ಅಭಿಪ್ರಾಯವನ್ನು ತಿಳುಹಿಸಿದನು. ಶಾಸನಸಭೆಗೆ ಈ ಅಭಿಪ್ರಾಯವು ಸಮ್ಮತವೆನಿಸಿತು. ಎರಡು ವರ್ಷಗಳ ವರೆಗೆ ದೇಶದ ಶಾಂತಿ-ಸುವ್ಯವಸ್ಥೆ ಗಾಗಿ ಯೋಗ್ಯ ಉಪಾಯಗಳನ್ನು ಕೈಕೊಳ್ಳುವ ಸಂಪೂರ್ಣ ಅಧಿಕಾರವು ಅಧ್ಯಕ್ಷನಿಗೆ ಎಂಬ ವಿಶಿಷ್ಟ ಕಾಯಿದೆಯು ಮಂಜೂರಾಯಿತು.

ದೇಶದ ಶಾಂತಿ-ಸುವ್ಯಸ್ಥೆಗಾಗಿ ದಂಗೆಯನ್ನೂ ದೇಶದ್ರೋಹಿ ಗಳನ್ನೂ ಕೆಮಾಲನು ಮೊದಲು ಬಗ್ಗುಬಡಿಯಲನುವಾದನು. ಇದು ತೀರ ಸುಲಭವಾಗಿ ಮತ್ತು ಸ್ವಲ್ಪಾವಧಿಯಲ್ಲಿ ಸಾಧಿಸಿತು. ಆದರೆ ಎರಡು ವರ್ಷಗಳ ವರೆಗೆ ಬೇಕಾದ್ದನ್ನು (ಶಾಂತಿ-ಸುವ್ಯವಸ್ಥೆಗಳ ನಿಮಿತ್ತದಿಂದ) ಮಾಡುವ ವಿಶಿಷ್ಟಾಧಿಕಾರಗಳು ಕೆಮಾಲನ ಕೈಯಲ್ಲಿದ್ದುವು. ಆ ಅಧಿಕಾರ ಗಳ ಉಪಯೋಗವನ್ನು ಅವನು ಮತ್ತೊಂದು ರೀತಿಯಿಂದ ಮಾಡಿ ಕೊಂಡನು. ಸಿಜವಾಗಿ ನೋಡಿದರೆ ಈ ಅಧಿಕಾರಗಳ ಉಪಯೋಗದಿಂದ

ಕೆಲವು ಕಾಲದವರೆಗೆ ದೇಶದ ತುಂಬೆಲ್ಲ ಅಶಾಂತಿ-ಅವ್ಯವಸ್ಥೆಗಳೆ ಹರಡಿದುವು; ಯಾಕೆಂದರೆ, ಕೆಮಾಲನು ಈ ಅಧಿಕಾರಬಲದಿಂದ ಸಾಮಾಜಿಕ ಸುಧಾರಣೆಗಳಿಗೆ ಕೈಹಾಕಿದನು. ಸಾವಿರಾರು ವರ್ಷ ಬುದ್ಧಿಯು ಮತ್ತು ದೇಹದ ದಾಸ್ಯದಲ್ಲಿ ಕೊಳೆತು, ತಮ್ಮ ಸ್ಥಿತಿಯು ಸುಸ್ಥಿತಿ, ದೇವನು ಕೊಟ್ಟ ಪರಿಸ್ಥಿತಿ ಎಂದು ಭಾವಿಸಿದ ಅಜ್ಞ ಜನಾಂಗಕ್ಕೆ ಕೆಮಾಲನ ಸುಧಾರಣೆಗಳು ಅಸಹ್ಯವೆನಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಆದರೆ ಸುಲ್ತಾನನನ್ನೂ ಖಲೀಫನನ್ನೂ ಓಡಿಸಿದ ಕೆಮಾಲನು ಅಜ್ಞ ಜನರಿಗೆ ಸೊಪ್ಪು ಹಾಕುವನೆ? ಸಾಮಾಜಿಕ ಸುಧಾರಣೆಯನ್ನು ಮಾಡಿದ್ದಿಲ್ಲವೆಂದರೆ ಆ ಎರಡು ಸುಖವಸ್ತುಗಳನ್ನು ಹೊರದೂಡಿದ ಪರಿಶ್ರಮವೆ ವ್ಯರ್ಥವಾದಂತಾಯಿತಲ್ಲ? ಇದಲ್ಲದೆ ಕೊಳೆತುದೆಂದು ಹಳೆದನ್ನು ಬಳೆದೊಗೆದವನು ಹೊಸತನ್ನು ಆ ಸ್ಥಾನದಲ್ಲಿರಿಸಬೇಕಲ್ಲವೇ? ಹೊಸಮನೆಯನ್ನು ಕಟ್ಟಿಸಲು ಅಸಮರ್ಥನಿದ್ದವನು ಹಳೆದೆಂಬ ನಿಮಿತ್ತದಿಂದ ಇದ್ದ ಮನೆಯನ್ನು ಕೆಡವಿಸಿ ಬಯಲಲ್ಲಿ ಸಂಸಾರ ಹೂಡಿದರೆ ಜನರು ಅವನನ್ನು ಸುಧಾರಕ ಎನುವರೊ ಶುದ್ಧ ಹುಚ್ಚನೆನುವರೊ? ಇಂದಿನ ವ್ಯವಹಾರಕ್ಕೆ, ಇಂದಿನ ಜೀವನಕ್ಕೆ ಕೆಲವು ಸಂಗತಿಗಳು ಅವಶ್ಯ ಎಂದು ಹಟತೊಟ್ಟು, ಸುಲ್ತಾನ-ಖಲೀಫ ಮೊದಲಾದುವು ಅಪಾಯಕಾರಕ ಎಂದು ಅಭಿಪ್ರಾಯಪಟ್ಟು, ಈಗ ಹಳೆಯ ಜೀವನವನ್ನೆ ನಡೆಸಿದರೆ? ಸುಸಂಸ್ಕೃತ ಜನಾಂಗಗಳಲ್ಲಿ ತನ್ನ ಜನಾಂಗದ ಸಮಾವೇಶವಾಗಬೇಕೆಂದು ಕೆಮಾಲನ ಹಂಬಲ; ಯಾಕೆಂದರೆ, ಆ ಸಂಸ್ಕೃತಿ ಇಲ್ಲದೆ ಹೋದಲ್ಲಿ ಇಂದು ಬಾಳುವುದಾಗಲಿ ಬೆಳೆಯುವುದಾಗಲಿ ಅಶಕ್ಯ. ತನ್ನ ದೇಶಬಾಂಧವರು ಸುಸಂಸ್ಕೃತರು ಎಂದು ಒಪ್ಪುವುದು ಹೇಗೆ? ಯಾಂತ್ರಿಕ-ತಾಂತ್ರಿಕ-ಮಾಂತ್ರಿಕ-ಮೋಸಗಾರರಲ್ಲಿ ವಿಶ್ವಾಸವನ್ನಿಟ್ಟು ಜೀವನವನ್ನು ನಡೆಸುವವರು ಸುಸಂಸ್ಕೃತರೆ? ಬರೆಯುವುದು ಗೊತ್ತಿಲ್ಲ, ಓದಿದರೆ ತಿಳಿಯುವಂತಿಲ್ಲ, ಮೇಲೆ ಅಜ್ಞಾನವೆ ತಮ್ಮ ಯೋಗ್ಯತೆಗೆ ತಕ್ಕುದೆಂದು ತಿಳಿವವರು ಸುಸಂಸ್ಕೃತರೆ? ಪಶುಗಳಂತೆ ಕೇವಲ ಹಸಿವೆ-ಹೆದರಿಕೆಗಳಿಂದಲೆ ವ್ಯವಹಾರ ನಡೆಸುವವರನ್ನು ಸುಸಂಸ್ಕೃತರೆಂದು ಯಾರು ಒಪ್ಪುವರು? ಇವರಿಗೆ ಸಂಸ್ಕಾರ

ವೆಂಬುದು ಇಲ್ಲವೆ ಇಲ್ಲ. ಮೊದಲಿನಿಂದಲೂ ಇಲ್ಲ. ಇವರಿಗೆ ಸಂಸ್ಕಾರ ವನ್ನು ಕೊಡುವುದು ಮೊದಲನೆಯ ಕೆಲಸ ಎಂದು ನಿರ್ಧರಿಸಿಕೊಂಡನು.

ಕೆಮಾಲನು ಮೊದಲಿನಿಂದಲೂ ಸೈನ್ಯದಲ್ಲಿ ಬೆಳೆದವನೆಂಬುದನ್ನು ಮರೆಯುವಂತಿಲ್ಲ. ಅವನ ಮನೋವೃತ್ತಿಯೆ ಸೈನಿಕನ ಮನೋವೃತ್ತಿ ಯಾಗಿತ್ತೆಂದು ಹೇಳಬಹುದು. ತನ್ನ ಇಡಿಯ ಜನಾಂಗವು ಸೈನಿಕರಂತೆ ಸಜ್ಜಾಗಿ, ಸೆಟೆದು, ಶಿಸ್ತಿನಿಂದ ನಿಲ್ಲುವಂತಹುದಾಗಬೇಕು. ಮನುಷ್ಯನಿಗೆ ಸ್ವಾಭಿಮಾನ ಬರಬೇಕಾದರೆ ಮನಸ್ಸಿನಂತೆ ದೇಹವೂ ಸಂಸ್ಕಾರವನ್ನು ಪಡೆಯಬೇಕಾಗುವುದು. ೪–೫॥ ಅಡಿ ಎತ್ತರ ಇದ್ದ ಮನುಷ್ಯನಿಗೆ ಸ್ವಾಭಿಮಾನ ಬರುವುದಾದರೂ ಹೇಗೆ? ಬಹಳವಾದರೆ ಸುತ್ತಲಿನ ಎತ್ತರ ದವರನ್ನು ನೋಡಿ ಸಿಡುಕು ಬರಬಹುದು, ಸಂತಾಪವೆನಿಸಬಹುದು. ಅದರಂತೆಯೇ ಮೈತುಂಬ ಹರಕುಬಟ್ಟೆಗಳನ್ನು ತೊಟ್ಟವನಿಗಾದರೂ ಸ್ವಾಭಿಮಾನ ಬರುವಂತಿಲ್ಲ. ಓರಣದ ಉಡಿಗೆಯುವರ ಸಮಾಜದಲ್ಲಿ ಅವನು ಮೈಮುದುಡಿಕೊಳ್ಳುತ್ತ ಮೂಲೆ ಹಿಡಿದು ತಿರುಗಾಡುವನು. ನನ್ನನ್ನು ನಾನು ಕನ್ನಡಿಯಲ್ಲಿ ನೋಡಿಕೊಂಡರೆ ನನಗಾದರೂ ಆನಂದ ವಾಗಬೇಕಲ್ಲ? ನಾನು ಸೌಂದರ್ಯದ ಸೂರ್ಯನೆ ಆಗಿರಬೇಕೆಂಬ ನಿಯಮವಿಲ್ಲ. ಮುಖವು ಹಸನಾಗಿದ್ದರೆ, ಮುಖಮುದ್ರೆಯಲ್ಲಿ ಕಳೆ ಇದ್ದರೆ, ಪೌರುಷಬುದ್ಧಿಯು ತುಂಬಿತುಳುಕುವಂತಿದ್ದರೆ ನನ್ನ ಪ್ರತಿಬಿಂಬ ದಿಂದ ನನಗೆಯೆ ಆನಂದವಾಗಬಹುದು. ನಾನು ಅಂತಹನಾಗಿದ್ದರೆ ನನಗಾಗಿ ನನ್ನಲ್ಲಿ ಅಭಿಮಾನವೂ ಹುಟ್ಟಬಹುದು. ತುರ್ಕಸ್ತಾನದ ಜನರ ಸ್ಥಿತಿಯು ೪–೫॥ ಅಡಿ ಎತ್ತರನಾಗಿದ್ದವನಂತಿದ್ದಿತು, ಹರಕುಬಟ್ಟೆಗಳನ್ನು ತೊಟ್ಟವನಂತಿದ್ದಿತು. ತುರ್ಕಸ್ತಾನವು ಭೂಗೋಲದ ದೃಷ್ಟಿಯಿಂದಷ್ಟೆ ಅಲ್ಲ, ವ್ಯವಹಾರದ ದೃಷ್ಟಿಯಿಂದಲೂ ಯುರೋಪಖಂಡದಲ್ಲಿದ್ದಿತು. ಯುರೋಪದ ಜನರು ಆರೋಗ್ಯಶಾಸ್ತ್ರ, ವಿಜ್ಞಾನಶಾಸ್ತ್ರ, ಯಂತ್ರಶಕ್ತಿ ಇವುಗಳ ಪರಿಶೋಧ–ಪರಿಜ್ಞಾನಗಳಿಂದ ಉಚ್ಚಸಂಸ್ಕಾರವನ್ನು ಪಡೆ ದಿದ್ದರು. ಇವರನ್ನು ಒಂದು ಬದಿಗೆ, ತನ್ನ ದೇಶಬಾಂಧವರನ್ನು ಒಂದು ಬದಿಗೆ ಮನಸಿನಲ್ಲಿಯೆ ನಿಲ್ಲಿಸಿ ಕೆಮಾಲನು ಕಣ್ಣುಮುಚ್ಚಿ ಎಷ್ಟೋ

ಹೊತ್ತು ತುಲನಾತ್ಮಕದೃಷ್ಟಿಯಿಂದ ನೋಡಿರಬಹುದು. ನೋಡಿದಂತೆಲ್ಲ ಅವನಿಗೆ ಮುಚ್ಚಿದ ಕಣ್ಣು ತೆರೆಯುವಂತಾಗಲಿಲ್ಲ. ತನ್ನ ಜನರು ನಿಲ್ಲುವ ರೀತಿ, ತೊಡುವ ಬಟ್ಟೆ ಇವುಗಳನ್ನೆ ನೋಡಿ ಮೊದಲು ಕೆಮಾಲನಿಗೆ ಖೇದವಾಯಿತು. ಮೊದಲು ಇದನ್ನೆ ಸುಧಾರಿಸಲು ಬೇಕು ಎಂಬ ದೃಢನಿಶ್ಚಯವನ್ನು ಮಾಡಿಯೆ ಅವನು ಮುಚ್ಚಿದ ಕಣ್ಣುಗಳನ್ನು ತೆರೆದನು. ಆಗ ಮತ್ತೊಮ್ಮೆ ನೋಡಿದಾಗ ಒಂದು ವಸ್ತುವು ಅತ್ಯಂತವಾಗಿ ಅವನ ಕಣ್ಣಿಗೆ ಕೀಸರಾಯಿತು. ತನ್ನ ಜನರ ತಲೆಯ ಮೇಲಿದ್ದ ಗೋಪುರದಂತಹ ಕೆಂಪು ಟೊಪ್ಪಿಗೆ! ಫೆಝ್ ಎಂಬ ಟೊಪ್ಪಿಗೆ. ಆ ಟೊಪ್ಪಿಗೆಯನ್ನು ನೋಡಿದೊಡನೆ ತಡ ಸುಲ್ತಾನಿಕೆಯೂ ಹೋಗಿಲ್ಲ, ಖಲೀಫನೂ ಹೋಗಿಲ್ಲ ಎಂದೆನಿಸಿತು ಕೆಮಾಲನಿಗೆ. ಹಳೆಯ ಕಾಲದ ದಾಸ್ಯಬುದ್ಧಿಯ, ಅಂಧಶ್ರದ್ಧೆಯ ಸಂಕೇತವೆಂದರೆ ಈ ಫೆಝ್ ಎಂದೆನಿಸಿತು ಅವನಿಗೆ. ವಿಕ್ರಮನ ಸಿಂಹಾಸನದ ಮೇಲೆ ಕುಳಿತವರಿಗೆಲ್ಲ ನ್ಯಾಯ ಬುದ್ಧಿ ಹೊಳೆಯುತ್ತಿತ್ತಂತೆ. ಅದರ ವಿರುದ್ಧವಾಗಿ ಈ ಟೊಪ್ಪಿಗೆಯ ಕೆಳಗಿದ್ದ ತಲೆಯಲ್ಲಿ ದಾಸ್ಯವೃತ್ತಿಯ ಜೇಡಬಲೆ ತುಂಬುವುದೆಂದು ತಿಳಿದನೇನೊ! ನಾಳೆನಿಂದ ಯಾರೂ ಫೆಝ್ ಟೊಪ್ಪಿಗೆಯನ್ನು ಧರಿಸತಕ್ಕದ್ದಲ್ಲ ಎಂದು ಆಜ್ಞೆಯನ್ನು ಹೊರಡಿಸಿದನು! ಇಂತಹ ಆಜ್ಞೆಯನ್ನು ಹೊರಡಿಸಲು ಯಾವ ಅಧಿಕಾರವಿದ್ದಿತು ಇವನಿಗೆ? ಶಾಂತಿಸುವ್ಯವಸ್ಥೆಗಳ ಸಂರಕ್ಷಣೆಯ ವಿಶಿಷ್ಟಾಧಿಕಾರದ ಕಾಯಿದೆ ಇವನಿಗೆ ಟೊಪ್ಪಿಗೆಯನ್ನು ತೆಗೆದೊಗೆಯಲು ಆಧಾರ! ಜನರಿಗೆ ವಿಶ್ವಾಸ ಕೂಡದಂತಾಯಿತು. ಮೊದಲು ಕೆಮಾಲನು ತಾನೇ ತಲೆಯ ಮೇಲೆ ಯುರೋಪೀಯ ಟೊಪ್ಪಿಗೆಯನ್ನು ಇಟ್ಟುಕೊಂಡ ಪಾಪಕ್ಕಾಗಿ ಅವನ ತಲೆ ತಿರುಗಿರಬಹುದೆ-ಎಂದು ಸಂಶಯ. ಆದರೇನು? ಸೈನ್ಯದ ಶಿಸ್ತಿನಿಂದ ಕೆಮಾಲನು ತನ್ನ ನಿರ್ಣಯಗಳನ್ನು ಜಾರಿಯಲ್ಲಿ ತರುವವನು. ಹೆಜ್ಜೆಜ್ಜೆಗೆ ಪೋಲೀಸರು ನಿಂತಿದ್ದಾರೆ. ಜನರು ಭಸ್ಮಾಸುರನಂತೆ ತಮ್ಮ ಕೈಗಳನ್ನು ತಮ್ಮ ಟೊಪ್ಪಿಗೆಯ ಮೇಲಿಟ್ಟಿದ್ದಾರೆ; ಆದರೆ, ಆ ಟೊಪ್ಪಿಗೆ ಸುಟ್ಟಿತು, ಮಾಯವಾಯಿತು. ಯಾರು ಕೈ ಬೀಸುತ್ತ ಹೊರಟಿದ್ದರೊ ಅವರ ಟೊಪ್ಪಿಗೆಯನ್ನು

ಪೋಲೀಸರೆ ತೆಗೆದೊಗೆದರು.* ಎಲ್ಲಿ ನೋಡಿದಲ್ಲಿ ಹಾಹಾಕಾರ! ಕೆಮಾಲನ ಸಂಶಯವು ನಿಜವಿದ್ದಿತು. ಸಾಮಾನ್ಯ ಜನರಿಗೆ ತಮ್ಮ ಕೆಂಪು ಟೊಪ್ಪಿಗೆ ಎಂದರೆ ಸಾವಿರಾರು ವರ್ಷಗಳಿಂದ ನಡೆದು ಬಂದ ತಮ್ಮ ಸಂಪ್ರದಾಯದ, ಜಗತ್ತಿನಲ್ಲಿ ಜಯಭೇರಿಯ ನಿನಾದದಂತೆ ಪಸರಿಸಿದ ತಮ್ಮ ಧರ್ಮದ ಸಂಕೇತವಾಗಿತ್ತು. ಅದನ್ನು ತೆಗೆಯುವುದಕ್ಕೆ ಹೆದರಿಕೆ ಅವರಿಗೆ. ಈ ಸಮಯವನ್ನು ಸಾಧಿಸಿ ಕಾಝಿಗಳೂ ಫಕೀರರೂ ಬೈರಾಗಿಗಳೂ ಕೆಮಾಲನ ಧರ್ಮಲಂಡತನವನ್ನು ತಿಳುಹಿಸಿ ಜನರನ್ನು ಆಜ್ಞಾಭಂಗಕ್ಕೆ ಪ್ರೋತ್ಸಾಹಿಸತೊಡಗಿದರು. ಕೆಮಾಲನಿಗಿಂತಲೂ ಧರ್ಮಗುರುಗಳ, ಧರ್ಮಲಂಡನಿಗಿಂತಲೂ ಧರ್ಮಡಂಭರ ಹೆದರಿಕೆ ಜನರಿಗೆ ಹೆಚ್ಚೆನಿಸಿತು. ಇದನ್ನು ನೋಡಿ ಕೆಮಾಲನಿಗೂ ಅಸಹ್ಯವಾಯಿತು. ಈ ಧರ್ಮಡಂಭರ ನಿಜಸ್ವರೂಪವನ್ನು ಬೈಲಿಗೆಳೆಯುವ ಉದ್ದೇಶದಿಂದ ಅವನು ಫಕೀರ–ಬೈರಾಗಿಗಳಿಗೆ ದೊರಕುತ್ತಿರುವ ಸಾರ್ವಜನಿಕ ಸಹಾಯವನ್ನು ತಡೆದನು. ಇದುವರೆಗೆ ಪುಕ್ಕಟೆ ಆಹಾರದಿಂದ ಕೊಬ್ಬಿದ ಈ ಧರ್ಮವೀರರಿಗೆ ಈಗ ಅನ್ನಕ್ಕೆ ಗತಿ ಇಲ್ಲದಂತಾಯಿತು; ಅಗಾಧವಾದ ಶಕ್ತಿ ತಮಗಿದೆ ಎಂದು ಅಜ್ಞರನ್ನು ಮೋಸಗೊಳಿಸುವ ಈ ಮಂತ್ರಡೊಂಬರಿಗೆ ಈಗ ಹೊಟ್ಟೆ ತುಂಬಿಕೊಳ್ಳುವ ಕಲೆ ಸಾಧಿಸದಂತಾಯಿತು. ಕ್ರಮೇಣ ಸಾಮಾನ್ಯ ಜನರ ಕಣ್ಣು ತೆರೆಯಿತು. ಗಾಂಜೆಯ ಭಕ್ತರಿಗಿಂತ ಗಾಝಿಯ ಶಕ್ತಿಯೆ ಹೆಚ್ಚಿನದೆಂದೂ ತಮಗೆ ಹಿತಕರವೆಂದೂ ತಿಳಿಯತೊಡಗಿತು. ಗಾಯವು ಮಾಯವಾದ ತರುವಾಯ ಸುಲಿದು ಜಾರುವ ಮೈದೊಗಲಿನಂತೆ ಕೆಂಪು ಟೊಪ್ಪಿಗೆಗಳು ತಾವಾಗಿಯೆ ಕಳಚತೊಡಗಿದವು. ಈ ಕಾಲದ ಒಂದು ಮೋಜನ್ನು ಒಬ್ಬ ಗ್ರಂಥಕರ್ತರು ಸರಸವಾಗಿ ಬಣ್ಣಿಸಿದ್ದಾರೆ. ಜನರ ಉತ್ಸಾಹವು ಹೆಚ್ಚಿ ಯುರೋಪೀಯ

---

*(ಕೆಲವು ವರ್ಷಗಳ ಹಿಂದೆ ಇಜಿಪ್ತದ ರಾಯಭಾರಿಯು ಒಂದು ಮೇಜವಾನಿಗೆ ಬಂದಿದ್ದನು. ನೂರಾರು ಪ್ರತಿಷ್ಠಿತ ಜನರ ಕಣ್ಣೆದುರಿನಲ್ಲಿ ಕೆಮಾಲನು ರಾಯಭಾರಿಯ ತಲೆಯ ಮೇಲಿನ ಫೆಝ್ ಟೊಪ್ಪಿಗೆಯನ್ನು ಕಸಿದೊಗೆದನೆಂದು ಅಮೇರಿಕದ ಪತ್ರಿಕಾಕಾರನೊಬ್ಬನು ಬರೆದಿದ್ದಾನೆ.

ಟೊಪ್ಪಿಗೆಗಳು ಸಾಕಷ್ಟು ದೊರೆಯುವುದೇ ಅಸಾಧ್ಯವಾಯಿತಂತೆ. ಪ್ರತಿಯೊಬ್ಬನಿಗೂ ಸೂಟ್ (Suit) ಮತ್ತು ಹ್ಯಾಟ್ (Hat) ಬೇಕು. ಅಂಗಡಿಯಲ್ಲಿ ಕಾಲಿಡಲು ಜಾಗೆ ಇಲ್ಲ; ಕೈ ಚಾಚಿದರೆ ಸಾಮಾನುಗಳಿಲ್ಲ. ಕೊನೆಗೆ ಎಷ್ಟೋ ಜನರು ಸ್ತ್ರೀಯರ ಹ್ಯಾಟುಗಳನ್ನು (Ladies' Hats) ಧರಿಸಿಕೊಂಡು ನವಿಲುಗಳಂತೆ ಬೀದಿಯಲ್ಲಿ ಉತ್ಸಾಹದಿಂದ ಮೆರೆಯ ತೊಡಗಿದರಂತೆ!

ಬಾಹ್ಯವೇಷವನ್ನು ಬದಲಾಯಿಸುವುದೆಂದರೆ ಕೆಮಾಲನಿಗೆ ಅತ್ಯಂತ ಮಹತ್ತ್ವದ ಸಂಗತಿಯಾಗಿತ್ತು. ಜೀವದ ಅಂಗಾಂಗಗಳಲ್ಲಿ ಹೊಸತನವು ಬೇಕೆಂದು ಇವನ ಹಟ. ಹಳೆಯುದು ಬೇಡ, ಅದರ ಸ್ಮರಣೆ ಬೇಡ, ಅದನ್ನು ಸುಟ್ಟನಂತರ ಅದಕ್ಕೆ ಸುತ್ತಿದ ವಸ್ತ್ರಗಳು ಸ್ಮಶಾನದಲ್ಲಿ ಕೂಡ ಬೇಡ. ಇಂದು ತುರ್ಕಸ್ತಾನವು ಜಾಗೃತವಾಗಿದೆ, ಸ್ವತಂತ್ರವಾಗಿದೆ, ಸ್ವಾಭಿಮಾನಿಯಾಗಿದೆ. ತನ್ನದೆಂಬ ವಸ್ತು ಒಂದಿದ್ದರಲ್ಲವೆ ಅದಕ್ಕಾಗಿ ಅಭಿಮಾನವನ್ನು ತಾಳುವುದು? ನೋಡುವ ಕಣ್ಣಿಗೇನೊ ಇದೆಲ್ಲ ಯುರೋಪೀಯರ ಅನುಕರಣ ಎಂದೆನಿಸುವಂತಿತ್ತು. ಆದರೆ ಕೆಮಾಲನಿಗೆ ಅದು ಅನುಕರಣವೆನಿಸಲಿಲ್ಲ. ನಿಜವಾಗಿ ನಾವು ಇಂದಿನವರು, ಇಲ್ಲಿಯವರು, ಈ ಪ್ರದೇಶಗಳಿಗೆ ಸಂಬಂಧಿಸಿದವರು; ಅದಕ್ಕಾಗಿ ಈ ವೇಷ-ಭೂಷಣಗಳು ನಮ್ಮವೆ, ನಮಗೆ ಸಹಜವಾದವುಗಳು ಎಂದು ಅವನ ಅಭಿಪ್ರಾಯ. 'ನಾವು ಕೇವಲ ತುರ್ಕಸ್ತಾನದವರು' ಎಂದು ತೋರಿಸುವ ಹಟದಿಂದಲೆ ಅವನು ಇಂತಹ ಸುಧಾರಣೆಗನ್ನು ಕೈಕೊಂಡನು. ತಲೆಯ ಮೇಲೆ ಫೆಝ್ ಇರುವ ವರೆಗೆ ಪ್ರತಿಯೊಬ್ಬನಿಗೆ ತಾನು ಮೊದಲು ಮುಹಮ್ಮದೀಯ ಎಂಬ ಭಾವನೆಯಾಗುತ್ತಿದ್ದಿತು. ಅದಕ್ಕಾಗಿ ಫೆಝನ್ನು ಓಡಿಸಿದ್ದು. ದೇಶದ ಅರಿವು ಇರಬೇಕು, ದೇಶಾಭಿಮಾನವು ಎಲ್ಲಕ್ಕೂ ಮೊದಲು ಜಾಗೃತವಾಗಬೇಕು ಎಂಬುದಕ್ಕಾಗಿ ಕೆಮಾಲನ ತಪಸ್ಸು. ಶಾಸನಸಭಾಮಂದಿರದ ಬಾಗಿಲಮೇಲೆ ಕುರಾಣದೊಳಗಿನ ಒಂದು ವಾಕ್ಯ ವಿದ್ದಿತು. ಅದನ್ನು ಒರೆಯಿಸಿ 'ರಾಜ್ಯಸೂತ್ರವು ಪ್ರಜೆಗಳ ಕೈಯಲ್ಲಿದೆ' ಎಂದು ಬರೆಯಿಸಿದನು. ಧರ್ಮದ ಪಂಗಡಗಳನ್ನೆಲ್ಲ ಕಿತ್ತೊಗೆದು

'ಪ್ರತಿಯೊಬ್ಬನು ತುರ್ಕೀಯನು' ಎಂಬ ಮಾತನ್ನು ಘಟನೆ (constitution) ಯಲ್ಲಿ ಸೇರಿಸಿದನು. ಯಾವನಾದರೂ ಅಲ್ಲವೆಂದರೆ ಅವನು ಪ್ರಜಾ ಸತ್ತಾತ್ಮಕ ಘಟನೆಯನ್ನು ಧಿಕ್ಕರಿಸಿದಂತಾಗುವುದು, ಎಂದರೆ ದೇಶ ದ್ರೋಹ ಅಪರಾಧವನ್ನು ಮಾಡಿದಂತಾಗುವುದು. ಜಾತಿ-ಜಾತಿಗಳಲ್ಲಿ ಪಂಗಡ-ಪಂಗಡಗಳಲ್ಲಿ ದ್ವೇಷಾಸೂಯೆಗಳಿಂದ ಕಡಿದಾಡುವ ಭಾರತೀ ಯರ ಚಿಕ್ಕ ಬಾಲಕರು ಶಾಲೆಗೆ ಹೋಗುವಾಗ 'ನಾನು ಇಂತಹ ಜಾತಿಯವ, ಇಂತಹ ಪಂಗಡದವ' ಎಂದು ಬರೆದುಕೊಡಬೇಕೆಂಬ ನಿಯಮ ನಮ್ಮಲ್ಲಿದೆ. ಇಂತಹ ಬಾಲಕರು ಬೆಳೆದ ಮೇಲೆ ತಮ್ಮ ಜಾತಿ ಯನ್ನು ಸುಲಭವಾಗಿ ಹೇಗೆ ಮರೆಯಬಲ್ಲರು? ಜಾತಿಪದ್ಧತಿಯು ದೇಶದ ಪ್ರಗತಿಗೆ ವಿರೋಧಕವೆನಿಸಿದ್ದರೂ ಜಾತ್ಯಭಿಮಾನವು ನಮ್ಮಲ್ಲಿ ಅಪರಾಧ ವೆನಿಸುವುದಿಲ್ಲ. ಸರಕಾರದ ದೃಷ್ಟಿಯಿಂದಂತೂ ಬಿಡಲಿ, ದೇಶಾಭಿಮಾನ ಗಳ ದೃಷ್ಟಿಯಿಂದಲಾದರೂ ಜಾತಿಯ ಅಭಿಮಾನವು ದೇಶದ ಅವಮಾನ ಎಂದು ಎಣಿಸಲ್ಪಡುತ್ತಿದೆಯೆ? ಕೆಮಾಲನ ದೇಶಾಭಿಮಾನವು ನಮ್ಮವರಿ ಗಿಂತ ಹೆಚ್ಚು ಜಾಗೃತವೆಂದರ್ಥವಲ್ಲ. ಅವನ ದೇಶಾಭಿಮಾನವು ಸಯು ಕ್ತಿಕವಾದ ಬುದ್ಧಿಯ ಗುಣವಾಗಿದೆ. ನಮ್ಮದೊ—ಹೆಚ್ಚಾಗಿ ಆವೇಶ ಮಯವಾದ ಭಾವನಾಗುಣವಾಗಿದೆ. ಬುದ್ಧಿಗುಣವಾಗಿತ್ತೆಂದೆ ಕೆಮಾಲನ ದೇಶಾಭಿಮಾನವು ಕಾಲ ಕಳೆದಂತೆ ಬೇರೆಬೇರೆ ರೂಪಗಳಿಂದ ಪ್ರಗತಿ ಯನ್ನು ಹೊಂದಿತು.

ಕೆಮಾಲನ ಇನ್ನೊಂದು ಸಾಮಾಜಿಕ ಸುಧಾರಣೆಯ ಉದಾಹರಣ ವನ್ನು ನೋಡಬಹುದು. ಮಹಮ್ಮದೀಯ ಧರ್ಮದ ಯಾವುದೋ ಒಂದು ಸಂಪ್ರದಾಯವನ್ನನುಸರಿಸಿ ತುರ್ಕಸ್ತಾನದ ಸ್ತ್ರೀಯರು ಪಕ್ಕ ಮಹಮ್ಮದೀಯ ಸ್ತ್ರೀಯರಂತೆ ಮುಸುಕಿ ( purdah ) ನಲ್ಲಿರುತ್ತಿದ್ದರು. ಮನೆಯೊಳಗೆ ಗಂಡನೊಡನೆ ಮಕ್ಕಳೊಡನೆ ಎಷ್ಟೋ ಸ್ವಾತಂತ್ರ್ಯ-ಅಧಿ ಕಾರಗಳು ನಡೆದರೂ ವ್ಯವಹಾರದಲ್ಲಿ ಸ್ತ್ರೀಯರಿಗೆ ಸ್ಥಾನವಿದ್ದಿರಲಿಲ್ಲ. ಇಷ್ಟೇಕೆ? ಮನೆಯ ಹೊರಗಿನ ಪರಿಸ್ಥಿತಿಯ ದರ್ಶನ ಕೂಡ ಅವರಿಗಿದ್ದಿಲ್ಲ ವೆಂದು ಹೇಳಬಹುದು. ಹಿಂದುಸ್ತಾನದಲ್ಲಿ ಕೂಡ ಮಹಮ್ಮದೀಯ

ಮಹಿಳೆಯರು ಹೆಚ್ಚಾಗಿ ಮುಸುಕಿನಲ್ಲಿಯೆ ಇರುವುದರಿಂದ ನಮ್ಮ ವಾಚಕರಿಗೆ ಈ ಸ್ಥಿತಿಯನ್ನು ವಿಶದವಾಗಿ ಬಣ್ಣಿಸಿ ಹೇಳುವ ಕಾರಣವಿಲ್ಲ. ಆದರೆ ಸ್ತ್ರೀಯರೂ ಗಂಡಸರಂತೆ ವ್ಯವಹಾರದಲ್ಲಿ ಭಾಗವಹಿಸಬೇಕೆಂದೂ, ಶಿಕ್ಷಣ–ವ್ಯಾಯಾಮ–ವ್ಯವಸಾಯ (profession) ಗಳ ಯೋಗ್ಯತೆಯು ಸ್ತ್ರೀಯರಿಗಾದರೂ ಇದೆ ಎಂದೂ, ಸ್ತ್ರೀಯಳದೂ ಪುಕ್ಕ ಮಾನವರಂತೆ ಕುತೂಹಲದಿಂದ ಬೆಳೆಯುವ ಜೀವನವೆಂದೂ, ಸ್ತ್ರೀಯರು ಅಶಿಕ್ಷಿತರಾಗಿ ಅಜ್ಞಾನಾಂಧಃಕಾರದಲ್ಲಿ ಕೊಳೆವಾಗ ಮಕ್ಕಳು ನಿಜವಾದ ಸಂಸ್ಕೃತಿಯಲ್ಲಿ ಬೆಳೆಯಲಾರರೆಂದೂ, ಸ್ತ್ರೀಯರು ದಾಸ್ಯದಲ್ಲಿರುವ ವರೆಗೆ ದೇಶಕ್ಕೆ ದಾಸ್ಯವೃತ್ತಿಯು ತಪ್ಪದೆಂದೂ, ಆದಕಾಗಿ ಸ್ತ್ರೀಯರಿಗೂ ಸಮಾನಾಧಿಕಾರಗಳನ್ನು ಕೊಟ್ಟು ಅವರ ಬೆಳವಣಿಗೆಗೆ ಅವಕಾಶ ದೊರೆವಂತೆ ಮಾಡಬೇಕೆಂದೂ ಕೆಮಾಲನ ಅಭಿಪ್ರಾಯವಿದ್ದಿತು. ಈ ಅಭಿಪ್ರಾಯದಲ್ಲಿ ಒಂದು ಸೋಜಿಗವು ಅಡಕವಾಗಿದೆ. ಸ್ವತಃ ಸ್ತ್ರೀಯರ ಸಲುವಾಗಿ ಕೆಮಾಲನಿಗೆ ಆದರವಿದ್ದಂತೆ ಅವನ ವೈಯಕ್ತಿಕ ನಡತೆಯಿಂದ ತೋರಿ ಬರುವಂತಿಲ್ಲ; ಸ್ತ್ರೀಯರ ವಿಷಯವಾಗಿ ಕೆಮಾಲನು ಅತ್ಯಂತ ಅನಾಚಾರಿಯಾಗಿದ್ದನೆಂದು ಅನೇಕರು ದೃಷ್ಟಾಂತಗಳಿಂದ ತೋರಿಸಿಕೊಟ್ಟಿದ್ದಾರೆ; ತನ್ನ ಜೀವನದಲ್ಲಿ ಸ್ತ್ರೀಯರಿಗೆ ಇವನು ಸ್ಥಾನವನ್ನು ಕೊಟ್ಟಿರಲಿಲ್ಲ; ಸ್ತ್ರೀ ಎಂದರೆ ಕಾಮವಾಸನೆಯ ತೃಪ್ತಿಗಾಗಿ ನಿಸರ್ಗವು ಮಾನವನಿಗೆ ಒದಗಿಸಿದ ಸೌಕರ್ಯ ಎನುವಂತೆ ಇವನ ವರ್ತನೆ ಇದ್ದಿತು. ಇದೊಂದು ಕಡೆ, ಸ್ತ್ರೀಸುಧಾರಣೆಯ ವೃತ್ತಿಯೊಂದು ಕಡೆ! ಇವೆರಡನ್ನೂ ಹೊಂದಿಸುವುದು ಹೇಗೆ? ಮುಂದೆ ಕೆಮಾಲನ ಸ್ವಭಾವವನ್ನು ಪರೀಕ್ಷಿಸುವಾಗ ಈ ಮಾತಿನ ಊಹಾಪೋಹವನ್ನು ನಾವು ಮಾಡುವವರಿದ್ದೇವೆ. ಆದರೆ ಸದ್ಯಕ್ಕೆ ಇಷ್ಟೇ ಹೇಳಬಹುದು. ಕೆಮಾಲನು ಚಿಕ್ಕವನಿದ್ದಾಗ ಮಾತೃಭಕ್ತನಾಗಿದ್ದನು. ಅಜ್ಞಾನಕ್ಕಾಗಿ ಅವಳು ಮಾಡಲೇಬೇಕಾದ ಅನೇಕ ಕೃತ್ಯಗಳನ್ನು—ಉದಾಹರಣಾರ್ಥವಾಗಿ, ಧನಿಕನೊಡನೆ ಎರಡನೆಯ ವಿವಾಹವನ್ನು–ಅವನು ನೋಡಿದ್ದನು. ಅಜ್ಞಳಾದರೂ ಅವಳು ದಿಟ್ಟಳೂ ಕುಶಾಗ್ರಬುದ್ಧಿಯವಳೂ ಆಗಿದ್ದಳು. ಇದೆಲ್ಲವನ್ನು ನೋಡಿ ತಾಯಿಗಾಗಿ

ತನ್ನಲ್ಲಿದ್ದ ಕಳವಳದಿಂದ ಸ್ತ್ರೀಯರಿಗೆ ಸ್ವಾತಂತ್ರ್ಯ ಬೇಕೇಬೇಕು ಎಂದು ಆವನು ಹಟತೊಟ್ಟಿರಬಹುದು; ಅದರಂತೆಯೆ ಮಾತೃಭಕ್ತರಾದವರಿಗೆ ಮಿಕ್ಕ ಹೆಂಗಸರಿಗಾಗಿ ಆದರವಿರುವುದಿಲ್ಲೆಂದೂ ಕೆಲವು ಸಲ ದ್ವೇಷ ಬುದ್ಧಿ ಕೂಡ ಹುಟ್ಟುವುದೆಂದೂ ಮಾನಸಶಾಸ್ತ್ರಜ್ಞರು ಹೇಳುತ್ತಾರೆ. ಈ ಮಾತು ನಿಜವಿದ್ದರೆ ಕೆಮಾಲನು ಸ್ತ್ರೀಯರಿಗಾಗಿ ತೋರಿಸಿದ ವೈಯುಕ್ತಿಕ ವರ್ತನದ ಅರ್ಥವು ಸಮಗಾಗಬಹುದು. ಏನೆ ಇರಲಿ, ತೋರಿಕೆಗೆ ಪರಸ್ಪರ ವಿರುದ್ಧವೆನಿಸಿದರೂ ಆಚರಣೆಯಲ್ಲಿ ಒಂದಕ್ಕೊಂದು ವಿರುದ್ಧವೆನಿಸದಂತೆ ಈ ಎರಡು ವೃತ್ತಿಗಳು ಕೆಮಾಲನಲ್ಲಿದ್ದುವೆಂದು ಸದ್ಯಕ್ಕೆ ಒಪ್ಪಿಕೊಳ್ಳೋಣ. ರಾಷ್ಟ್ರಜೀವನದಲ್ಲಿ, ಸಾಮಾಜಿಕ ಜೀವನದಲ್ಲಿ ಸ್ತ್ರೀಯರು ಸ್ವತಂತ್ರರೂ ಸಮಾನಾಧಿಕಾರಿಗಳೂ ಆಗಬೇಕೆಂಬ ಹಂಬಲ ವಿದ್ದರೂ ಈ ವಿಷಯದಲ್ಲಿ ಕೆಮಾಲನು ಅವಸರವನ್ನಾಗಲಿ ಅಧಿಕಾರ ಬಲವನ್ನಾಗಲಿ ತೋರಿಸುತ್ತಿರಲಿಲ್ಲ. ತನ್ನ ಅಭಿಪ್ರಾಯಗಳ ಪ್ರಚಾರವನ್ನು ಮುಕ್ತಕಂಠವಾಗಿ ಮಾಡುತ್ತಿದ್ದನು. ಆಗಾಗ ಮುಸುಕಿನಲ್ಲಿದ್ದ ಮಹಿಳೆಯನ್ನು ಭೆಟ್ಟಿಯಾದಾಗ 'ತಾಯಿ, ನಿನ್ನ ಸೌಂದರ್ಯವನ್ನು ಮುಚ್ಚಿಡುವುದು ಎಂತಹ ಅನ್ಯಾಯ!' ಎನುತ್ತಿದ್ದನಂತೆ. ಬಲುಮೆಯೊಂದನ್ನು ಬಿಟ್ಟು ಕಾನೂನುಗಳಿಂದ ಶಕ್ಯವಾದಷ್ಟು ಯತ್ನಗಳನ್ನು ಮಾಡಿದನು. ಈಗಾಗಲೆ ಸಂಸಾರದಲ್ಲಿ, ವ್ಯವಹಾರದಲ್ಲಿ ಇದ್ದ ಸ್ತ್ರೀಯರ ನಡತೆಯ ಮೇಲೆ ಅಷ್ಟೊಂದು ಪರಿಣಾಮವಾಗದಿದ್ದರೂ ಆದೇ ಎಳೆ ವಯಸ್ಸಿನಲ್ಲಿದ್ದ ಬಾಲಿಕೆಯರು ಮಾತ್ರ ಈ ಹೊಸ ತತ್ತ್ವಗಳನ್ನು ಮೈಗೂಡಿಸಿಕೊಂಡೇ ಬೆಳೆದರು. ಇಂದು ತುರ್ಕಸ್ತಾನದಲ್ಲಿ ಬಾಲಿಕೆಯರಿಗೂ ಶಿಕ್ಷಣ–ವ್ಯಾಯಾಮ–ವ್ಯವಸಾಯಗಳಿಗೆ ಅವಕಾಶಗಳಿವೆ. ಅನೇಕ ಮಹಿಳೆಯರು ತಮ್ಮ ಅಜ್ಜಂದಿರು ಕನಸು–ಮನಸುಗಳಲ್ಲಿ ಕಲ್ಪಿಸಲು ಕೂಡ ಅಶಕ್ಯವೆನಿಸುವಂತೆ ವ್ಯವಸಾಯಗಳಲ್ಲಿ, ಕಲೆಗಳಲ್ಲಿ, ರಾಜಕಾರಣದಲ್ಲಿ, ಸಾಹಿತ್ಯದಲ್ಲಿ ಮೇಲಿನ ಸ್ಥಾನವನ್ನು ಪಡೆದಿದ್ದಾರೆ. ಸ್ತ್ರೀಯರಿಗಾಗಿ ಕೆಮಾಲನು ತೋರಿಸಿದ ಈ ವೃತ್ತಿಯಿಂದಲೂ, ಕೈಕೊಂಡ ಕಾರ್ಯಗಳಿಂದಲೂ ಒಂದು ವಿಚಾರ ಬರುವುದು. ಕೆಮಾಲನು

ಸರ್ವಾಧಿಕಾರಿ ( dictator ) ಎಂದು ಒಪ್ಪೋಣ. ಅದರಂತೆ ಹಿಟ್ಲರನೂ ಮುಸೋಲಿನಿಯೂ ಸರ್ವಾಧಿಕಾರಿಗಳಾಗಿದ್ದಾರೆ. ಆದರೆ ಜರ್ಮನಿಯಲ್ಲಾಗಲಿ ಇಟಲಿಯಲ್ಲಾಗಲಿ ತುರ್ಕಸ್ತಾನದಲ್ಲಿಯಂತೆ ಸ್ತ್ರೀಯರಿಗೆ ಸಾಮಾಜಿಕ ಮತ್ತು ಸಾರ್ವಜನಿಕ ವ್ಯವಹಾರದಲ್ಲಿ ಸ್ಥಾನವೆ ಇಲ್ಲ. ಇಷ್ಟೆ ಅಲ್ಲ,ಅವರಿಗೆ ಇಂತಹ ಸ್ಥಾನವಿರಕೂಡದೆಂದೂ, ಅವರ ನಿಜವಾದ ಸ್ಥಾನವು ಮನೆ ಎಂದೂ, ಅವರ ಕರ್ತವ್ಯವೆಂದರೆ ಮದುವೆಯಾಗುವುದೆಂದೂ, ಅವರ ಸದ್ಗುಣವೆಂದರೆ ದಣಿದು ಬಂದ ವೀರ ಪತಿಗೆ ವಿಶ್ರಾಂತಿಸ್ಥಾನ ಎನಿಸುವುದೆಂದೂ, ಅವರ ಯೋಗ್ಯತೆ ಸಂಖ್ಯೆಯನ್ನು ಗಮನಿಸಿದೆ ಶಕ್ಯವಿದ್ದಷ್ಟು ವೀರರ (ಅರ್ಥಾತ್ ಗಂಡುಮಕ್ಕಳ) ಮಾತೆಯಾಗುವುದರಲ್ಲಿದೆ ಎಂದೂ ಹಿಟ್ಲರನೂ ಮುಸೋಲಿನಿಯೂ ಅನೇಕ ಸಲ ಅಧಿಕಾರಯುಕ್ತ ವಾಣಿಯಿಂದ ನುಡಿದಿದ್ದಾರೆ. ಸೋಜಿಗದ ಸಂಗತಿ ಎಂದರೆ ಈ ಎರಡು ದೇಶಗಳಲ್ಲಿ ಸರ್ವಾಧಿಕಾರಿತ್ವದ ಕೆಳಗೆ ಬರುವ ಮುಂಚೆ ಸ್ತ್ರೀಯರಿಗೆ ಸ್ವಾತಂತ್ರ್ಯವೂ ಇದ್ದಿತು, ಸಮಾನಾಧಿಕಾರಿಗಳೂ ಇದ್ದುವು. ಹಿಟ್ಲರನಾಗಲಿ ಮುಸೋಲಿನಿಯಾಗಲಿ ಈ ಸ್ಥಿತಿಯನ್ನು ಬದಲಾಯಿಸಿದ್ದಕ್ಕೆ ಧರ್ಮವು ಯಾವ ರೀತಿಯಿಂದಲೂ ಕಾರಣವಲ್ಲ. ಜರ್ಮನಿಯಲ್ಲಿ ಪ್ರೊಟೆಸ್ಟಂಟ ಪಂಥವಿದೆ; ಇಟಲಿಯಲ್ಲಿ ರೋಮನ ಕ್ಯಾಥಲಿಕ್ ಪಂಥವಿದೆ. ಇವೆಲ್ಲ ಸಂಗತಿಗಳನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ಒಂದೇ ಒಂದು ನಿರ್ಣಯವು ನಮ್ಮ ಮುಂದೆ ನಿಲ್ಲುವುದು: ಅದೆಂದರೆ, ಸರ್ವಾಧಿಕಾರಿತ್ವ ( dictatorship ) ಕ್ಕೂ ಸ್ತ್ರೀಸ್ವಾತಂತ್ರ್ಯಕ್ಕೂ ತತ್ತ್ವತಃ ವಿರೋಧವಿರಲೇಬೇಕು. ಸರ್ವಾಧಿಕಾರಿಯ ಸ್ವಭಾವದ ಸ್ವರೂಪವೆ ಇದಕ್ಕೆ ಕಾರಣ ಎಂದು ಹೇಳಬಹುದು. ಸರ್ವಾಧಿಕಾರಿಯು ಅಹಂಕಾರಿಯೂ, ಆತ್ಮಾಭಿಮಾನಿಯೂ; ತಾನೊಬ್ಬನೆ ಯೋಗ್ಯತೆಯುವ ಎಂಬ ದುರಹಂಕಾರ ಅವನಿಗಿರುವುದು, ತನ್ನನ್ನು ಸರಿಗಟ್ಟುವಂತೆ ಇನ್ನಾರಿಗೂ ಅಸ್ಪದ ಕೊಡದ ದುರಭಿಮಾನವೂ ಇವನಲ್ಲಿದೆ. ಈ ಸ್ವಭಾವದಿಂದ ಸರ್ವಾಧಿಕಾರಿಗೆ ತನ್ನ ಸಜಾತೀಯರಾದ ಗಂಡಸರಿಗಾಗಿ ತುಸುಮಟ್ಟಿಗೆ ಆದರವಿರುವುದು. ಅದಕಾಗಿ ಹೆಂಗಸರಿಗಾಗಿ ಕೀಳು ಕಲ್ಪನೆ. ಇದಲ್ಲದೆ

ಸರ್ವಾಧಿಕಾರಿಯು ಮನೋವೃತ್ತಿಯಲ್ಲಿ ಹೆಂಗಸಿಗಾಗಿ ಹೆದರಿಕೆ ಇರುವುದೂ ಶಕ್ಯವಿದೆ. ತಾನು ಎಲ್ಲರನ್ನೂ ಮೀರಿದವನು ಎಂಬ ಹೆಮ್ಮೆ ಅವನಿಗೆ. ಆದರೆ ಹೆಂಗಸಿನ ಮೋಹವನ್ನು ಮೀರುವುದು ಶಕ್ಯವಾದೀತೇ ಎಂದು ಹೆದರಿಕೆ. ಕೊನೆಗೆ ಸರ್ವಾಧಿಕಾರಿಗೆ ಕ್ರೂರವೃತ್ತಿಯೊಂದಿದೆ. ಅದರ ಆಚರಣೆಯಲ್ಲಿ ಹೆಂಗಸಿಗೆ ಸ್ಥಾನವಿಲ್ಲ. ಹೀಗಾಗಿ ಸರ್ವಾಧಿಕಾರಿತ್ವಕ್ಕೂ ಸ್ತ್ರೀಸ್ವಾತಂತ್ರ್ಯಕ್ಕೂ ತತ್ತ್ವತಃ ವಿರೋಧವಿದೆ ಎಂದೇ ಹೇಳಬಹುದು. ಆದರೆ ಕೆಮಾಲನು ಮೊದಲಿನಿಂದ ಮತ್ತು ಮನಃಪೂರ್ವಕವಾಗಿ ಸ್ತ್ರೀಯರ ವಿಷಯದಲ್ಲಿ ಉದಾರಮತವಾದಿಯಾಗಿದ್ದಾನೆ. ಆದುದರಿಂದ ಕೆಮಾಲನು ಸರ್ವಾಧಿಕಾರಿಯಲ್ಲ, ಸ್ವಭಾವದಿಂದಾಗಲಿ ವಿಚಾರಗಳಿಂದಾಗಲಿ ಸರ್ವಾಧಿಕಾರಿತ್ವದ ವೃತ್ತಿಯು ಅವನಲ್ಲಿರುವುದು ಶಕ್ಯವೆ ಇಲ್ಲ—ಎಂದು ಹೇಳಬಹುದಲ್ಲವೆ?

ಕೆಮಾಲನು ಸರ್ವಾಧಿಕಾರಿಯಲ್ಲವೆಂದೇ ನಮ್ಮ ಅಭಿಪ್ರಾಯ; ಅದಕಾಗಿಯೆ ಈ ಅಧ್ಯಾಯಕ್ಕೆ '**ಪ್ರಜಾಪಾಲಕ**ತತ್ತ್ವ' ಎಂದು ಹೆಸರು ಕೊಟ್ಟಿದ್ದೇವೆ. ಯುದ್ಧದ ತರುವಾಯ ರೂಢಿಯಲ್ಲಿ ಬಂದ ಅನೇಕ ರಾಜನೀತಿಗಳಲ್ಲಿ ಕೆಮಾಲನದೊಂದು ವಿಶಿಷ್ಟವಾದ ಪದ್ಧತಿಯಾಗಿದೆ. ಕೆಮಾಲನ ಆಡಳಿತವನ್ನು ನೋಡಿದಂತೆ ಕಾಳಿದಾಸನ ರಘುವಂಶದಲ್ಲಿಯ

ಪ್ರಜಾನಾಂ ವಿನಯಾಧಾನಾತ್ ರಕ್ಷಣಾದ್ ಭರಣಾದಪಿ
ಸ ಪಿತಾ ಪಿತರಸ್ತಾಸಾಂ ಕೇವಲಂ ಜನ್ಮಹೇತವಃ ॥

ಎಂಬ ದಿಲೀಪರಾಜನ ವರ್ಣನೆಯೆ ಸ್ಮರಣೆಗೆ ಬರುವುದು. ನಾವು ಒಪ್ಪಲಿ, ಒಪ್ಪದಿರಲಿ ಪ್ರಜಾಪಾಲನವು—ತಂದೆಯು ಮಕ್ಕಳನ್ನು ಸಾಕಿ, ಸಲುಹಿ, ಬೆಳೆಸುವಂತಹ ಮಮತೆಯ ಧೋರಣೆಯು—ಕೆಮಾಲನ ರಾಜನೀತಿಯಾಗಿದೆ. ಈ ನೀತಿಯೆ ತುರ್ಕಸ್ತಾನದಲ್ಲಿ ಫಲಪ್ರದವೂ ಆಗಿದೆ. ತುರ್ಕಸ್ತಾನದ ಇಡಿಯ ಜನಾಂಗವೆ ಕೆಮಾಲನ ಆಳಿಕೆಯ ಮುಂಚೆ ಬಾಲಕರಂತಿದ್ದಿತು; ಬಾಲಕರಂತೆ ಅಜ್ಞ, ಬಾಲಕರಂತೆಯೆ ಅಜ್ಞಾನಧಾರಕ. ಈ ಅಜ್ಞಜನರನ್ನು ಅಕ್ಷರಜ್ಞರನ್ನಾಗಿ ಮಾಡಬೇಕೆಂದು ಕೆಮಾಲನಿಗೆ ವಿಚಾರ ಬಂದಿತು. ಆದರೆ ತುರ್ಕೀಯ ಅಕ್ಷರಗಳು ಬರೆಯುವುದಕ್ಕಾಗಲಿ

ಓದುವುದಕ್ಕಾಗಲಿ ಬಹಳೇ ಕ್ಲಿಷ್ಟವಾಗಿದ್ದುವು. ಆ ಅಕ್ಷರಗಳನ್ನು ಬಿಟ್ಟು ಕೊಟ್ಟು ರೋಮನ್ (ಲ್ಯಾಟಿನ್ ಭಾಷೆಯ) ಅಕ್ಷರಗಳನ್ನು ಉಪಯೋಗಿಸಿದರೆ ಸುಲಭವಾಗುವುದೆಂದೆನಿಸಿತು. ಭಾಷಾಶಾಸ್ತ್ರಜ್ಞರೂ ಲಿಪಿಶಾಸ್ತ್ರವಿಶಾರದರೂ ಸಮಿತಿಯಲ್ಲಿ ಸೇರಿ ಬಹುದಿವಸಗಳವರೆಗೆ ತುರ್ಕೀಯ ಶಬ್ದೋಚ್ಚಾರಗಳನ್ನು ಈ ಹೊಸಲಿಪಿಗೆ ಹೇಗೆ ಹೊಂದಿಸಬೇಕೆಂದು ತಲೆ ತುರಿಸತೊಡಗಿದರು. ಕೆಮಾಲನಿಗೆ ಆತುರ; ಹೊಳೆದ ವಿಚಾರವನ್ನು ಕಾರ್ಯದಲ್ಲಿ ತರುವುದಕ್ಕೆ ಇವನಿಗೆ ಯಾವಾಗಲೂ ಆತುರ. ಆದುದರಿಂದ ಪಂಡಿತರನ್ನು ಮನೆಗೆ ಕಳುಹಿಸಿಕೊಟ್ಟು ತಾನೇ ಒಂದು ರಾತ್ರಿ ಬೆಳಗಿನವರೆಗೆ ಪರಿಶ್ರಮಪಟ್ಟು ರೋಮನ್ ಲಿಪಿಸಂಕೇತಗಳನ್ನು ಸಿದ್ಧಪಡಿಸಿದನು. ಇನ್ನು ಪ್ರಚಾರದ ಕಾರ್ಯ ಒಂದಿದೆಯಲ್ಲ? ಕೆಮಾಲನು ಅದರಲ್ಲೂ ಕೌಶಲ್ಯವನ್ನು ತೋರಿಸಿದನು. ಕಾನಸ್ಟಾಂಟಿನೋಪಲಿನಲ್ಲಿ ಒಂದು ಸಮಾರಂಭವನ್ನು ನೆರವೇರಿಸಿದನು. ಮಂತ್ರಿಗಳನ್ನೂ, ಶಾಸನ ಸಭೆಯ ಸದಸ್ಯರನ್ನೂ, ಪಂಡಿತರನ್ನೂ, ಪ್ರಮುಖರನ್ನೂ ಆ ಸಮಾರಂಭಕ್ಕೆ ಕರೆಯಿಸಿದನು. ಊಟವಾದ ನಂತರ ಒಂದು ಫಲಕದ ಮೇಲೆ ತನ್ನ ಲಿಪಿಸಂಕೇತಗಳನ್ನು ಬರೆದು ತೋರಿಸಿ, ತಿಳುಹಿಸಿಕೊಟ್ಟನು. ನೆರೆದ ಪ್ರಮುಖರೆಲ್ಲ ಚಿಕ್ಕಬಾಲಕರಂತೆ ಊಟದ ಮದದಿಂದ ತಲೆತೂಗುತ್ತ ಕುಳಿತರು. ಕೊನೆಗೆ ಕೆಲವರನ್ನು ಕರೆದು ಅವರಿಂದ ಅವರವರ ಹೆಸರುಗಳನ್ನು ಹೊಸ ಸಂಕೇತಗಳಿಂದ ಬರೆಯಿಸಿಕೊಂಡನು. ಆ ಸಂದರ್ಭದಲ್ಲಿ ಕೆಮಾಲನ ಬಲಗೈಯಂತಿದ್ದ, ಮುಖ್ಯಮಂತ್ರಿಯಾದ ಇಸ್ಮೆತ್ ಪಾಶಾನು 'ಮುಖ್ಯಾಧ್ಯಾಪಕ' (Professor in chief) ಎಂದು ನಗೆಚಾಟಿಕೆಯ ಬಿರುದನ್ನು ಕೊಟ್ಟನು. ಆ ಬಿರುದು ದೇಶದ ತುಂಬೆಲ್ಲ ಸಾಮಾನ್ಯ ಜನರನ್ನು ನಗಿಸಿತು. ಹಳ್ಳಿ-ಪಳ್ಳಿಗಳ ಜನರು ಕೂಡ ಸ್ವತಃ ಗಾಝಿ ಮುಸ್ತಾಫಾ ಕೆಮಾಲನೆ ಬಂದು ತಮಗೆ ಅಕ್ಷರಗಳನ್ನು ಕಲಿಸಿಕೊಡಬೇಕೆಂದು ಕೇಳತೊಡಗಿದರು. ಹೊರಟನು ಗಾಝಿ ಗಣಪತಿಯ ದಿಗ್ವಿಜಯಕ್ಕೆ. ಹಸಿವೆ-ನೀರಡಿಕೆಗಳ ಪರಿವೆಯೆ ಇಲ್ಲದೆ ಊರೂರು ಸಂಚಾರ ಮಾಡಿದನು. ಮಾರ್ಕೆಟಿನ ಸ್ಥಳಗಳಲ್ಲಿ ಜನರನ್ನು ಕೂಡಿಸಿದನು. ಒಂದು

ಫಲಕ, ಒಂದು ಖಡುವಿನ ಗಂಟು—ಇವೇ ಇವನ ಬಾಣಬಿಲ್ಲುಗಳು. ಜನರು ಕೂಡಿದಲ್ಲಿ ಫಲಕವನ್ನಿಡುವುದು, ಗಂಟನ್ನು ಬಿಚ್ಚುವುದು, ಅಕ್ಷರಗಳನ್ನು ಬರೆದು ತೋರಿಸುವುದು. ಜನರಿಗೆ ಎಷ್ಟು ಉತ್ಸಾಹವೊ ಅಷ್ಟೆ ಅಭಿಮಾನ—ಕೆಮಾಲನು ಸ್ವತಃ ತಮಗೆ ಕಲಿಸುವನೆಂದು. ನಾಲ್ಕೈದು ತಿಂಗಳುಗಳ ಸಂಚಾರದಿಂದ ಜನರಲ್ಲಿ ಅಕ್ಷರಜ್ಞಾನವನ್ನು ಪಡೆಯುವುದಕ್ಕೆ ಅತ್ಯಂತ ಲವಲವಿಕೆಯಾಯಿತು. ಕೊನೆಗೆ ಶಾಸನಸಭೆಯು ಈ ಲಿಪಿಸಂಕೇತಗಳಿಗೆ ಸಮ್ಮತಿಕೊಟ್ಟು ಕಾಯಿದೆಯೊಂದನ್ನು ಗೊತ್ತುಮಾಡಿತು. * ಪ್ರತಿಯೊಬ್ಬನೂ ಅಕ್ಷರಗಳನ್ನು ಕಲಿಯಲೇಬೇಕು; ಇಂತಿಷ್ಟು ಅವಧಿಯಲ್ಲಿ ಇಂತಿಷ್ಟು ಜ್ಞಾನವನ್ನು ಸಂಪಾದಿಸಲೇಬೇಕು; ಇಲ್ಲದೆ ಹೋದರೆ ದಂಡ ಇಲ್ಲವೆ ಶಿಕ್ಷೆ! ಅನಕ್ಷರತೆಯು ಅಪರಾಧವಾಯಿತು! ಇಷ್ಟೇಕೆ? ಕಾರಾಗೃಹದಲ್ಲಿದ್ದ ಎಷ್ಟೋ ಕೈದಿಗಳಿಗೆ 'ನೀವು ಅಕ್ಷರಗಳನ್ನು ಕಲಿಯದಿದ್ದರೆ ನಿಮ್ಮ ಶಿಕ್ಷೆಯ ಅವಧಿ ಮುಗಿದರೂ ನಿಮ್ಮನ್ನು ಬಿಡುಗಡೆ ಮಾಡುವಂತಿಲ್ಲ' ಎಂದು ಆಜ್ಞೆ ವಿಧಿಸಿದನು. ಹೀಗಾಗಿ ಹಿರಿಯರು ಹೆಂಗಸರು, ಕಲಿತವರು ಕೈದಿಗಳು, ಹುಡುಗರು ಹುಂಬರು—ಪ್ರತಿಯೊಬ್ಬನೂ ಅಕ್ಷರಜ್ಞಾನವನ್ನು ಸಂಪಾದಿಸಲೇಬೇಕಾಯಿತು. ಪ್ರಜೆಗಳಿಗಾಗಿ ಇಷ್ಟೊಂದು ಪ್ರೇಮದ ಪರಿಶ್ರಮವನ್ನು ವಹಿಸುವ ಸರ್ವಾಧಿಕಾರಿಯನ್ನು (?) ಯಾವ ದೇಶದಲ್ಲೂ ಕಾಣುವಂತಿಲ್ಲ. ಅಥವಾ 'ಸರ್ವಾಧಿಕಾರಿ' ಎನುವ ಹಟವಾದರೂ ಏಕೆ? ಕೆಮಾಲನು ತಾನಾಗಿಯೆ ಇಟ್ಟುಕೊಂಡ 'ಅತಾತುರ್ಕ' ಎಂಬ ಹೆಸರೇ ಅವನ ಮನೋವೃತ್ತಿಯ ದ್ಯೋತಕವಾಗಿದೆ. 'ಅತಾತುರ್ಕ' (Atatürk) ಎಂಬುದರ ಅರ್ಥ 'ತುರ್ಕೀಯರ ತಂದೆ' ಎಂದು.

---

* ಈ ಕಾಯಿದೆಯಲ್ಲಿ ಒಂದು ಕಲಮು ಈ ಪ್ರಕಾರ ಇದ್ದಿತು. "The First Teacher in the National Schools is the President of the Republic, His Excellency Gazi Mustafa Kemal." (ರಾಷ್ಟ್ರಾಧ್ಯಕ್ಷರಾದ ಗಾಝಿ ಮುಸ್ತಾಫಾ ಕೆಮಾಲ ಇವರು ರಾಷ್ಟ್ರೀಯ ಶಾಲೆಗಳ ಮೂಲ (ಮುಖ್ಯ= ಮೊದಲನೆಯ) ಅಧ್ಯಾಪಕರು!).

## ೫ ಪ್ರಜಾರಂಜನೆ

ಕೆಮಾಲನ ಜೀವನವು ಸರ್ವತೋಮುಖವಾಗಿ ಕ್ರಾಂತಿಮಯ ವಾದದ್ದು. 'ಸರ್ವತೋಮುಖವಾಗಿ' ಎಂಬ ಶಬ್ದವು ಇಲ್ಲಿ ಸಾರ್ಥಕ ವಾಗಿದೆ. ಕಾಲಕಾಲಕ್ಕೆ ಒಳಗಿನ ವಿಚಾರಗಳು ಬೆಳೆದಂತೆ ಹೊರಗಿನ ಹೆಸರು ಕೂಡ ಬೆಳೆಯಿತು. ಕೆಮಾಲನ ಸ್ವಭಾವವನ್ನು ಅರಿತುಕೊಳ್ಳು ವಾಗ ಇದು ಅತ್ಯಂತ ಮಹತ್ತ್ವದ ಸಂಗತಿ ಎನಿಸುವುದು. ಮೊದಲು ತಂದೆ ತಾಯಿಗಳು ಕೊಟ್ಟ ಹೆಸರು ಮುಸ್ತಾಫಾ; ಆ ಮೇಲೆ ಶಿಕ್ಷಣ ವನ್ನು ಪಡೆವಾಗ ಇವನಿಗೆ ಬೇರೊಂದು ಹೆಸರನ್ನು ಪಡೆಯಬೇಕಾಯಿತು, ಯಾಕೆಂದರೆ ಮುಸ್ತಾಫಾ ಎಂಬ ಹೆಸರಿನ ಒಬ್ಬ ಶಿಕ್ಷಕನೂ ಇದ್ದನು. ತಮ್ಮಿಬ್ಬರ ಒಂದೇ ಹೆಸರಿನಿಂದ ಗೊಂದಲವಾಗಬಾರದೆಂದು ಶಿಕ್ಷಕನು ಶಿಷ್ಯನಿಗೆ ಮುಸ್ತಾಫಾ **ಕೆಮಾಲ** (ಕೆಮಾಲ = ಪರಿಪೂರ್ಣ) ಎಂಬ ಹೆಸರನ್ನಿಟ್ಟನು. ಮುಂದೆ ಸೈನ್ಯದಲ್ಲಿ ಸೇರಿ, ಕೌಶಲ್ಯವನ್ನು ತೋರಿ, ದಾರ್ಡನೆಲ್ಸದ ಯುದ್ಧದಲ್ಲಿ ಸಾಹಸದಿಂದ ಜಯಶೀಲನಾಗಿ ಇವನು ಪಾಶಾ (ಪಾಶಾ = general = ನಾಯಕ) ಎಂಬ ಪದವಿಯನ್ನು ಪಡೆದನು; ಮುಸ್ತಾಫಾ ಕೆಮಾಲ ಪಾಶಾನು ಸ್ವಾತಂತ್ರ್ಯಧ್ವಜವನ್ನು ನಿಲ್ಲಿಸಿ ೧೯೨೨ರಲ್ಲಿ ಗ್ರೀಕ ಸೈನ್ಯವನ್ನು ತುರ್ಕಸ್ತಾನದಿಂದ ಹೊಡೆದೋಡಿಸಿ ಗಾಝಿ (ಗಾಝಿ = ದಿಗ್ವಿಜಯಿ = conqueror) ಎಂದು ದೇಶ ಬಾಂಧವರಿಂದ ಪ್ರೇಮಾದರಗಳಿಂದ ಪದವಿಯನ್ನು ಪಡೆದನು; ಯುದ್ಧವು ಮುಗಿಯಿತು, ಸ್ವಾತಂತ್ರ್ಯ ನೆಲೆಗೊಂಡಿತು. ಶಾಂತಿಯೆ ತರುಣತುರ್ಕ ಸ್ತಾನದ ಧ್ಯೇಯವಾಯಿತು. ತಾನು ಯುದ್ಧಪ್ರಿಯನಲ್ಲ, ಶಾಂತಿ ಪ್ರಿಯನು ಎಂಬುದನ್ನು ತೋರಿಸಲು ಪಾಶಾ ಎಂಬ ಬಿರುದನ್ನು ಬಿಟ್ಟು ಗಾಝಿ ಮುಸ್ತಾಫಾ ಕೆಮಾಲನಾದನು; ತನ್ನ ಸುಧಾರಣೆಗಳನ್ನು ಆಚರಣೆಯಲ್ಲಿ ತರುವಾಗ ತಾನು ತುರ್ಕೀಯರಿಗೆ ತಂದೆಯಂತೆ ಎಂದು

‘ಅತಾತುರ್ಕ’* ಕೆಮಾಲನಾದನು. ಕೊನೆಗೆ ದೇಶಾಭಿಮಾನದಿಂದ ಅನ್ಯ ಭಾಷೆಗಳ ಶಬ್ದಗಳನ್ನು ತೆಗೆದೊಗೆದು ಕೇವಲ ತುರ್ಕೀಯ ಶಬ್ದಗಳನ್ನೆ ಬೆಳೆಸಬೇಕೆಂದೂ, ‘ಕೆಮಾಲ’ ಎಂಬ ಶಬ್ದವು ಅರಬೀ ಭಾಷೆಯದೆಂದೂ ಆ ಶಬ್ದದ ಬದಲಾಗಿ ತನ್ನ ಹೆಸರನ್ನು ‘ಕಮಾಲ’ (ಕಮಾಲ = ಬಲಿಷ್ಠ, ಇದು. ತುರ್ಕೀಯ ಭಾಷೆಯೊಳಗಿನ ಹಳೆಯದೊಂದು ಶಬ್ದ) ಎಂದು ಕೊಂಡನು. ಅಂತೂ ೧೮೮೧ರಿಂದ (ಜನ್ಮ) ಮುಂದೆ ಐವತ್ತುಮೂರು ವರ್ಷಗಳಲ್ಲಿ ತುರ್ಕಸ್ಥಾನವು ಕಮಾಲ ಅತಾತುರ್ಕನ ರಾಜ್ಯವಾಯಿತು. ತಾಯಿ-ತಂದೆಗಳಿಂದ, ಅನ್ಯರಿಂದ ಬಂದ ಹೆಸರುಗಳನ್ನು ಬಿಟ್ಟುಕೊಟ್ಟು ತನ್ನದೆ ಹೆಸರನ್ನು ಮಾಡಿಕೊಂಡ ಮೊದಲನೆಯ ವೀರನೆಂದರೆ ಇವನೆ!

ತನ್ನ ಹೆಸರಿನಿಂದ ಮೊದಲುಮಾಡಿ ಇಡಿಯ ತುರ್ಕಸ್ಥಾನವನ್ನೆ ಕಮಾಲನು ಬದಲು ಮಾಡಿದನು. ತಾನು ಕಮಾಲ (= ಬಲಿಷ್ಠ)ನೆನಿಸಿದಂತೆ ತನ್ನ ದೇಶವನ್ನೂ ದೇಶಬಾಂಧವರನ್ನೂ ಕೂಡ ಬಲಿಷ್ಠರನ್ನಾಗಿ ಮಾಡಿದನು. ಮಹಾಯುದ್ಧದ ಮುಂಚೆ ತುರ್ಕಸ್ಥಾನಕ್ಕೆ ‘the sick old man of Europe’ (ಯುರೋಪದ ಮುದುಕ ರೋಗಿ) ಎಂದು ಮುತ್ಸದ್ದಿಗಳು ನಗೆಯಾಡುತ್ತಿದ್ದರು. ಅದೇ ಮುತ್ಸದ್ದಿಗಳಿಗೆ ಮುಂದೆ ಕಮಾಲನೊಡನೆ ಹೋರಾಡಿ ರಣರಂಗದಲ್ಲೂ ರಾಷ್ಟ್ರಸಂಘದಲ್ಲೂ ಸೋಲಬೇಕಾಯಿತು. ರೋಗಿಯನ್ನು ವಾಸಿ ಮಾಡಿ, ಮುದುಕನನ್ನು ತರುಣನನ್ನಾಗಿ ಮಾಡಿದ ಮಾಯಾಪಿಯನ್ನು ಕಂಡು ಬೊಟ್ಟು ಕಚ್ಚಬೇಕಾಯಿತು.

ಕಮಾಲನು ಶಿಕ್ಷಣದಿಂದ ಸೈನಿಕವೃತ್ತಿಯವನಾಗಿದ್ದರೂ ಸ್ವಭಾವದಿಂದ ಶಾಂತಿಪ್ರಿಯನಾಗಿದ್ದನು. ಅನಿವಾರ್ಯವಾದಲ್ಲಿ ಮಾತ್ರ ಅವನು ಯುದ್ಧವನ್ನು ಹೂಡುತ್ತಿದ್ದನು. ಕಾಣಲು ಕಲ್ಲೆದೆಯವನಂತಿದ್ದರೂ ಯುದ್ಧ ನಡೆದಲ್ಲಿ ಪ್ರತಿದಿನ ಸಾಯಂಕಾಲ ‘ಇಂದು ಇಷ್ಟು ಜನ

* ‘ಅತಾತುರ್ಕ’ ಎಂದರೆ ‘ತುರ್ಕೀಯರ ತಂದೆ’ ಎಂದು ಯುರೋಪಿಯನ ಚರಿತೆಗಾರರು ಹೇಳುತ್ತಾರೆ; ‘ಅತಾತುರ್ಕ’ ಎಂದರೆ ‘ತುರ್ಕೀಯರ ದಾನ (gift of Turks)’ ಎಂಬರ್ಥವನ್ನು ಪರ್ಶಿಯನ್ ಪಂಡಿತರು ಹೇಳುತ್ತಾರೆ.

ಸೈನಿಕರು ಮಡಿದರಲ್ಲ!' ಎಂದು ಮರುಗುತ್ತಿದ್ದನು. ೧೯೨೨ರಲ್ಲಿ ಗ್ರೀಕ ಸೈನ್ಯವನ್ನು ಹೊಡೆದೋಡಿಸಿದ ಮೇಲೆ ಕಮಾಲನು ಯುದ್ಧದ ಅವಶ್ಯಕತೆ ಇಲ್ಲವೆಂದು ನಿರ್ಣಯಿಸಿಬಿಟ್ಟನು. ಮುಂದೆ ಬ್ರಿಟಿಶರ ಕೂಡ ಅನೇಕ ಸಲ ತಿಕ್ಕಾಟವಾಯಿತು. ಕಮಾಲನಿಗೂ ಇಂಗ್ಲಂಡಿಗೂ ಯುದ್ಧವು ಆಗಿಯೆ ತೀರುವುದೆಂದು ಮುತ್ಸದ್ದಿಗಳು ಕೂಡ ಬಗೆದಿದ್ದರು. ಆದರೆ ಎಲ್ಲರನ್ನೂ ಮೀರಿದ ಮುತ್ಸದ್ದಿತನ ಕಮಾಲನದು. ಕೊನೆಯ ವರೆಗೂ, ಇಂದಿನವರೆಗೊ ಅವನು ಯುದ್ಧದ ಪ್ರಸಂಗಗಳನ್ನು ತಪ್ಪಿಸಿದ್ದಾನೆ; ಹೇಡಿತನದಿಂದಲ್ಲ, ವಿಶಾಲಹೃದಯದಿಂದ. ನೂರಾರು ವರ್ಷಗಳವರೆಗೆ ಯುದ್ಧಗಳಿಂದಲೆ ತನ್ನ ದೇಶವು ಸವೆದು ಹೋಗಿತ್ತು, ತನ್ನ ದೇಶಬಾಂಧವರು ಬಡವರಾಗಿದ್ದರು. ಇಂದು ತನ್ನ ಧ್ಯೇಯವು ಯುದ್ಧಗಳನ್ನಾಡಿ ಜಯವನ್ನು ಸಂಪಾದಿಸುವುದಲ್ಲ, ಶಾಂತಿ-ಸುಖ-ಸಂರಕ್ಷಣೆಗಳನ್ನೊದಗಿಸಿ ತನ್ನ ದೇಶದಲ್ಲೂ ತನ್ನ ಜನರಲ್ಲೂ ಹೊಸ ರಕ್ತವನ್ನೂ ಹೊಸ ಶಕ್ತಿಯನ್ನೂ ತುಂಬುವುದು. ತುರ್ಕಸ್ತಾನವು ಯುರೋಪದ ಹಿಂದುಳಿದ ರಾಷ್ಟ್ರಗಳಲ್ಲಿ ಒಂದಾಗಿತ್ತು. ದೇಶದಲ್ಲಿ ವ್ಯವಸಾಯಗಳಿಲ್ಲ, ಉದ್ಯೋಗಗಳಿಲ್ಲ, ಕಲೆಗಳಿಲ್ಲ, ಕೈಗಾರಿಕೆಗಳಿಲ್ಲ, ವ್ಯಾಪಾರವಿಲ್ಲ, ಆದಕಾಗಿ ಸಿರಿವಂತಿಕೆಯೂ ಇಲ್ಲ. ಇದನ್ನೆಲ್ಲ ಸರಿಪಡಿಸಿಕೊಳ್ಳಬೇಕೆಂದು ಕಮಾಲನು ಹಟತೊಟ್ಟನು. ಅವನು ಹೊಸದಾಗಿ ಸ್ಥಾಪಿಸಿದ ಅಂಗೋರಾ ರಾಜಧಾನಿಯು ಈ ಹಟದ ಸಂಕೇತವಾಗಿದೆ. ಮೊದಲು ಇಲ್ಲಿ ರಾಜಧಾನಿಯನ್ನು ಸ್ಥಾಪಿಸಿದಾಗ ಅದೊಂದು ಬಿಸಿಲಿನಿಂದ ರಣಗುಡುವ ನಿರ್ಜನ ಕಾಡುಪ್ರದೇಶವಾಗಿತ್ತು. ಅಲ್ಲಲ್ಲಿ ಮಳೆಯಿಂದ ನೀರುತುಂಬಿ ನಿಲ್ಲುವ ತಗ್ಗುಗಳಿಂದ ನಾನಾತರದ ಅಪಾಯಕಾರಕ ಜ್ವರರೋಗಗಳ ತವರ್ಮನೆಯಾಗಿತ್ತು. ಸೈನಿಕರು ತುಳಿದು ತುಳಿದು ಸಮ ಮಾಡಿದ ದೂಳಿಯ ದಾರಿಗಳೆ ಬೀದಿಗಳೆನಿಸುತ್ತಿದ್ದುವು. ಹೊರಗಿನ ಜಗತ್ತಿಗೂ ಅಂಗೋರಾಕ್ಕೂ ಯಾವ ರೀತಿಯಿಂದಲೂ ಸಂಬಂಧವಿರಲಿಲ್ಲ. ಯುದ್ಧದ ಕಾಲಕ್ಕೆ ತಾತ್ಪೂರ್ತಿಕವಾಗಿ ಒಂದು ರೈಲು ದಾರಿಯನ್ನು ಕಟ್ಟಲಾಗಿತ್ತು. ಎಷ್ಟೊಂದು ತೊಂದರೆಗಳು, ಅಪಾಯಗಳು ಸಂಭವಿಸಿದರೂ ಕಮಾಲನು

ಈ ಸ್ಥಾನವನ್ನು ಬಿಡಲಿಲ್ಲ. ಜರ್ಮನಿಯಿಂದ ಶಿಲ್ಪಶಾಸ್ತ್ರಜ್ಞರು ಬಂದರು. ರೋಗಗಳ ತವರ್ಮನೆಯಾದ ತಗ್ಗುಗಳನ್ನು ತುಂಬಿಕೊಂಡರು. ಲಕ್ಷಾವಧಿ ಗಿಡಗಳನ್ನು ನೆಟ್ಟು ರಣಗುಡುವ ವನವನ್ನು ರಮ್ಯ ಉಪವನವನ್ನಾಗಿ ಮಾಡಿದರು. ಶಾಸ್ತ್ರೀಯ ಶೋಧಗಳ ಸರ್ವವಿಧವಾದ ಸಹಾಯದಿಂದ ವಿಶಾಲವಾದ ಬೀದಿಗಳನ್ನೂ ಎತ್ತರವಾದ, ಸುಂದರವಾದ ಮನೆಗಳನ್ನೂ ಕಟ್ಟಿದರು. ಮುಹಮ್ಮದೀಯ ಧರ್ಮದ ಪ್ರಭಾವವಿರುವ ವರೆಗೆ ವಿಗ್ರಹ ಗಳನ್ನು ಕೆತ್ತುವುದು ಪಾಪವಾಗಿದ್ದಿತು. ಆದರೆ ಕಮಾಲನು ವಿಗ್ರಹ ಕೆತ್ತುವ ಕಲೆಗೆ ಪ್ರೋತ್ಸಾಹನ ಕೊಟ್ಟು ಕೂಟಗಳಲ್ಲೂ ಸಾರ್ವಜನಿಕ ಕಟ್ಟಡಗಳಲ್ಲೂ ಸುಂದರವಾದ ವಿಗ್ರಹಗಳನ್ನಿಡುವಂತೆ ಏರ್ಪಾಡು ಮಾಡಿದನು. ಔಷಧಾಲಯಗಳೂ ಉಪಹಾರಗೃಹಗಳೂ ಶಿಕ್ಷಣಮಂದಿರ ಗಳೂ ಆಧುನಿಕ ಶೈಲಿಯಲ್ಲೂ ಸಾರ್ವಜನಿಕವಾಗಿಯೂ ಕಟ್ಟಿಸಲ್ಪಟ್ಟುವು. ಸ್ವಲ್ಪಾವಧಿಯಲ್ಲಿಯೆ ಮಯಸಭೆಯಂತೆ ಮನೋಹರವಾದ ನಗರದ ನಿರ್ಮಾಣವಾಯಿತು. ಇಷ್ಟೆಲ್ಲ ಮಾಡಿದ ಮೇಲೆ 'ಅಂಗೋರಾ' ಎಂಬ ಹೆಸರು ತುರ್ಕೀಯ ಭಾಷೆಯ ಶಬ್ದ ಅಲ್ಲವೆನಿಸಿ ಈ ರಾಜಧಾನಿಗೆ 'ಅಂಕೋರಾ' ಎಂಬ ಹೆಸರನ್ನು ಕೊಡಲಾಯಿತು.

ದೇಶವನ್ನಾದರೂ ನಗರದಂತೆ ನೀಟಾಗಿ, ನಿಯಮಿತವಾಗಿ, ನವೀನ ರೀತಿಯಿಂದ, ನಿಶ್ಚಯಬುದ್ಧಿಯಿಂದ ನಿಲ್ಲಿಸಿದನೆಂದು ಹೇಳಬಹುದು. ತುರ್ಕಸ್ಥಾನದ ಶಾಸನಪದ್ಧತಿ (Code of Law) ಗಳು ತೀರ ಹಳೆಯ ಕಾಲದವು; ಇಂದಿನ ವ್ಯವಹಾರಕ್ಕೆ ಸಂಬಂಧವಿಲ್ಲ; ನ್ಯಾಯಾಧಿಕಾರವು ಹೆಚ್ಚಾಗಿ ಅಶಿಕ್ಷಿತರಾದ ಧರ್ಮಗುರುಗಳ ಕೈಯಲ್ಲಿ. ಈ ಪದ್ಧತಿಯನ್ನು ತೆಗೆದೊಗೆದು ಸ್ವಿಝರ್ಲಂಡದ ಸಿವ್ಹಿಲ್ ಕೋಡ್, ಇಟಲಿಯ ಪಿನಲ್ ಕೋಡ್ ಇವುಗಳ ಆಧಾರದಿಂದ ಅತ್ಯಂತ ಆಧುನಿಕವಾದ ಮತ್ತು ಸಶಾಸ್ತ್ರೀಯ ( scientific ) ವಾದ ಪದ್ಧತಿಗಳನ್ನು ೧೯೨೬ರ ಮಾರ್ಚ ತಿಂಗಳಿನಿಂದ ಜಾರಿಯಲ್ಲಿ ತರಲಾಯಿತು. ಒಕ್ಕಲತನದ ವ್ಯವಸಾಯಕ್ಕೆ ಯಂತ್ರಗಳ ಸಹಾಯಗಳನ್ನು ಕೊಟ್ಟು, ಒಕ್ಕಲಿಗರ ಸಾಲದ ಭಾರವನ್ನು ಇಳುಹಿಸಿ, ತೆರಿಗೆಯ ಭಾರವನ್ನು ಕಡಮೆ ಮಾಡಿ ದೇಶಕ್ಕೆ ಅವಶ್ಯವೆನಿಸುವ

ಆಹಾರ-ದ್ರವ್ಯಗಳನ್ನು ಬೆಳೆಸುವುದಕ್ಕೆ ಪ್ರೋತ್ಸಾಹ ದೊರಕಿತು. ಕಮಾಲನು ಸ್ವತಃ ಮಾದರಿಯ ಒಕ್ಕಲನ್ನು ಇಟ್ಟಿದ್ದನು. ಶಿಕ್ಷಣದ ವಿಷಯದಲ್ಲಂತೂ ಕಮಾಲನು ಪಟ್ಟ ಪರಿಶ್ರಮವು ಅಷ್ಟಿಷ್ಟೆಂದು ಹೇಳು ವಂತಿಲ್ಲ. ಹಿಂದುಸ್ತಾನದಲ್ಲಿಯಂತೆ ತುರ್ಕಸ್ತಾನದಲ್ಲಿಯಾದರೂ ಪರ ಕೀಯರ ಆಡಳಿತೆಗೊಳಗಾದ ಶಿಕ್ಷಣಸಂಸ್ಥೆಗಳೇ ಹೇರಳವಾಗಿದ್ದುವು. ಇಂತಹ ಅನೇಕ ಸಂಸ್ಥೆಗಳನ್ನು ಕಮಾಲನು ತೆಗೆದೊಗೆದನು. ತುರ್ಕೀಯ ಭಾಷೆಯನ್ನೆ ಮಾಧ್ಯಮಿಕವನ್ನಾಗಿ ಮಾಡಲು ಮತ್ತು ಕೆಲವು ತುರ್ಕೀ ಯರನ್ನಾದರೂ ಶಿಕ್ಷಕರೆಂದು ನಿಯಮಿಸಲು ಒಪ್ಪಿದ ಸಂಸ್ಥೆಗಳಿಗೆಯ ಮಾನ್ಯತೆಯನ್ನು ಕೊಟ್ಟನು. ತುರ್ಕಸ್ತಾನದ ಜನರು ಬಡವರಾಗಿದ್ದಾರೆ. ಅನೇಕರಿಗೆ ತಮ್ಮ ಮಕ್ಕಳಿಗಾಗಿ ಪಠ್ಯಪುಸ್ತಕಗಳನ್ನು ಕೊಂಡು ಕೊಳ್ಳುವ ಯೋಗ್ಯತೆ ಇರಲಿಲ್ಲ. ಇಂತಹರಿಗಾಗಿ ರಾಷ್ಟ್ರದಿಂದ ಮುಂಗಡ ಹಣ ಕೊಡಿಸುವ ಅನುಕೂಲತೆ ಮಾಡಿಕೊಟ್ಟನು. ಇದಲ್ಲದೆ ಸ್ವತಃ ಆಗಾಗ ಯಾವುದಾದರೊಂದು ಶಿಕ್ಷಣಸಂಸ್ಥೆಯನ್ನು ನೋಡಲು ಅನಿರೀಕ್ಷಿತವಾಗಿ ಹೋಗುವನು. ರಾಷ್ಟ್ರೀಯ ಸಾಹಿತ್ಯ ಪರಿಷತ್ತು (Academy) ಒಂದು ನಿರ್ಮಿತವಾಗಿದೆ. ರಾಷ್ಟ್ರಭಾಷೆಯ ಶಬ್ದ ಕೋಶವನ್ನೂ ಸಾಹಿತ್ಯವನ್ನೂ ಬೆಳೆಸುವುದು ಈ ಪರಿಷತ್ತಿನ ಮುಖ್ಯ ಕಾರ್ಯಗಳಲ್ಲಿ ಒಂದಾಗಿದೆ. ರಾಷ್ಟ್ರದ ವ್ಯಾಪಾರವನ್ನೂ ವ್ಯವಸಾಯ ವನ್ನೂ ದೇಶಾಭಿಮಾನದ ದೃಷ್ಟಿಯಿಂದಲೆ ಬೆಳೆಸಿದ ಕಮಾಲನ ಧೈರ್ಯ ವನ್ನು ಹೊಗಳುವಂತಿದೆ. ತುರ್ಕಸ್ತಾನದಲ್ಲಿ ಹಣವಿರಲಿಲ್ಲ. ಇದ್ದ ಬಡತನವು ಯುದ್ಧದಿಂದ ಹೆಚ್ಚಾಗಿತ್ತು. ಪರರಾಷ್ಟ್ರಗಳು ಕಮಾಲನ ನೀತಿಯಲ್ಲಿ ಮತ್ತು ಅಧಿಕಾರಸ್ಥಿರತೆಯಲ್ಲಿ ವಿಶ್ವಾಸವಿಲ್ಲದ್ದಕ್ಕಾಗಿ ಸಾಲ ವನ್ನು ಕೊಡಲು ಹಿಂಜರಿಯುತ್ತಿದ್ದುವು. ಪರರಾಷ್ಟ್ರಗಳಿಂದ ಸಾಲ ವನ್ನು ಪಡೆಯಬಾರದೆಂದು ಕಮಾಲನೂ ನಿಶ್ಚಯಿಸಿದ್ದನು. ಆರ್ಥಿಕ ವಿಷಯಗಳಲ್ಲಿ ಪರಾವಲಂಬಿಯಾದುದಕ್ಕೆಯೆ ಸುಲ್ತಾನನ ತುರ್ಕಸ್ತಾ ನವು ತನ್ನ ಸ್ಥಾನ-ಮಾನಗಳನ್ನು ಕಳೆದುಕೊಂಡಿತ್ತು. ಆದಕಾಗಿ ಕಮಾಲನು ಇದ್ದಷ್ಟು ಹಣವನ್ನೆ ಉಪಯೋಗಿಸುವ ತತ್ತ್ವವನ್ನು

ತನ್ನಷ್ಟಕ್ಕೆ ಒಪ್ಪಿಕೊಂಡನು. ದೇಶದ ಧನಮೂಲ (Resources) ವನ್ನೆಲ್ಲ ದೇಶದ ಸುಧಾರಣೆಗಳಿಗಾಗಿಯೆ ವೆಚ್ಚ ಮಾಡಬೇಕು; ವೈಯಕ್ತಿಕ ಲಾಭಕ್ಕೆ ಯಾವ ಅವಕಾಶವೆ ಇಲ್ಲ; ವ್ಯಕ್ತಿಯು ಸಂಪತ್ತನ್ನೆಲ್ಲ ರಾಷ್ಟ್ರದ ಸೊತ್ತೆಂದು ತಿಳಿಯಬೇಕು-ಎಂಬುದು ಇವನು ಕೈಕೊಂಡ ಧೋರಣೆ. ರೈಲುದಾರಿಗಳನ್ನೂ, ಸೈನ್ಯದ ಯಾಂತ್ರಿಕ ಸಾಮಗ್ರಿಗಳನ್ನೂ, ನವೀನ ವ್ಯವಸಾಯಗಳನ್ನೂ ಈ ಧೋರಣೆಯಿಂದಲೆ ಸಜ್ಜುಪಡಿಸಿಕೊಂಡನು. ಸ್ತ್ರೀಯರ ಸ್ವಾತಂತ್ರ್ಯದ ವಿಷಯವಾಗಿ ಮಾಡಿದ ಕಾರ್ಯವನ್ನೆಲ್ಲ ಈ ಮೊದಲೇ ಸೂಚಿಸಿದ್ದೇವೆ. ಒಟ್ಟಾರೆ ರಾಷ್ಟ್ರಸಂಸ್ಥೆಯ ಧ್ಯೇಯವು ಪ್ರಜಾರಂಜನೆಯಾಗಿರಬೇಕೆಂಬ ತತ್ತ್ವವೆ ಕಮಾಲನ ಆಡಳಿತದ ಸೂತ್ರವೆಂದು ಹೇಳಬಹುದು.

---

## ೬ ತ್ರಿಗುಣಗಳೂ ತ್ರಿಗುಣಾತೀತನೂ

ತುರ್ಕಸ್ತಾನದ ನವಜಾಗೃತಿಯ ಇದುವರೆಗಿನ ಇತಿಹಾಸವೆಲ್ಲ ಕಮಾಲನ ಚರಿತ್ರೆಯೇ ಆಗಿದೆ. ಇಡಿಯ ದೇಶವನ್ನೆ ಸ್ವಲ್ಪಾವಧಿಯಲ್ಲಿ ಹೊಡೆದೆಬ್ಬಿಸಿದ ಸಾಹಸವನ್ನು ಕಮಾಲನೊಬ್ಬನೆ ಮಾಡಿದನೆಂದು ಓದುಗರ ಕಲ್ಪನೆಯಾಗಬಹುದು. ಹಾಗಾಗುವುದು ಅಶಕ್ಯವೆಂದು ಯಾರಾದರೂ ಒಪ್ಪುವಂತಿದೆ. ಈ ಅದ್ಭುತ ಸಾಹಸವು ಒಂದು ವ್ಯಕ್ತಿಯ ಕೆಲಸವಲ್ಲ; ವ್ಯಕ್ತಿಯು ಎಷ್ಟೊಂದು ಅಲೌಕಿಕವಾಗಿದ್ದರೂ ಈ ವಿಪುಲವಾದ ಕಾರ್ಯಭಾರವು ಒಂದು ವ್ಯಕ್ತಿಯ ಶಕ್ತಿ-ಸಾಮರ್ಥ್ಯಗಳನ್ನು ಮೀರಿದ್ದೆಂದು ಸ್ಪಷ್ಟವಿದೆ. ವಸ್ತುಸ್ಥಿತಿಯೂ ಹಾಗೆಯೇ ಇದೆ. ಕಮಾಲನು ಕೈಕೊಂಡ ಈ ಕ್ರಾಂತಿಸಾಹಸದಲ್ಲಿ ಅನೇಕರು ಅವನಿಗೆ ನೆರವಾಗಿದ್ದಾರೆ; ಅವರಲ್ಲಿ ಸಾಹಸಿಗಳಿದ್ದಾರೆ, ಶ್ರದ್ಧಾವಂತರಿದ್ದಾರೆ, ಮೇಧಾವಿಗಳಿದ್ದಾರೆ, ಸ್ತ್ರೀಯರೂ ಇದ್ದಾರೆ. ಆದರೂ ಕಮಾಲನೆ ಈ ಕ್ರಾಂತಿಯ ನಾಯಕನು; ಕಮಾಲನೆ ಈ ಕೆಲಸಗಾರರ ಮುಂದಾಳು; ಕಮಾಲನೆ ವಿಚಾರವನ್ನು ಮಾಡುವವನು; ಕಮಾಲನೆ ಸ್ಫೂರ್ತಿಯನ್ನು ಕೊಟ್ಟವನು; ಕಮಾಲನೆ ನಿರ್ಣಯಗಳನ್ನು ಕೊಡುವವನು; ಆದುದರಿಂದ ಈ ಕ್ರಾಂತಿಯ ಜೀವಾಳನಾದ ಕಮಾಲನ ಕತೆಯೆ ಕ್ರಾಂತಿಯ ಕತೆಯಾಗುವುದು. ಇದಲ್ಲದೆ ಕಮಾಲನ ಚರಿತ್ರೆಯನ್ನು ಬರೆಯುವುದೆ ಈ ಗ್ರಂಥದ ಮೂಲೋದ್ದೇಶವಾದುದರಿಂದ ಇದುವರೆಗೆ ಅವನನ್ನುಳಿದು ಮಿಕ್ಕ ವ್ಯಕ್ತಿಗಳನ್ನು ಚಿತ್ರಿಸಲಾಗಿಲ್ಲ. ಆದರೆ ಕ್ರಾಂತಿಯ ಇತಿಹಾಸದ ವಿಷಯವಾಗಿ ಸಮಂಜಸವಾದ ಕಲ್ಪನೆ ವಾಚಕರಿಗೆ ಬರಲೆಂದು ಕೊನೆಯದಾಗಿ ಅವನ ಸಂಗಡಿಗರ ಪರಿಚಯವನ್ನು ಮಾಡಿಕೊಡುವೆವು. ಅನೇಕ ವ್ಯಕ್ತಿಗಳ ಸಂಬಂಧವು ಇರುವುದು ಸಹಜವಾಗಿದೆ. ಆದರೂ ನಮ್ಮ ಮುಖ್ಯೋದ್ದೇಶಕ್ಕೆ ಒಪ್ಪುವಂತೆ ಮೂರೇ ವ್ಯಕ್ತಿಗಳ ಪರಿಚಯವನ್ನು ನಾವಿಲ್ಲಿ ಮಾಡಿಕೊಡುವೆವು.

ಕಮಾಲನ ಜೀವನದಲ್ಲಿ ಅತ್ಯಂತ ಮಹತ್ತ್ವವಾಗಿ ಮತ್ತು ಮೊದಲನೆಯದಾಗಿ ಬರುವ ಅವನ ಸ್ನೇಹಿತನೆಂದರೆ ಕರ್ನಲ್ ಆರಿಫ ಎಂಬವನು. ಕಮಾಲನ ಮತ್ತು ಆರಿಫನ ಮಿತ್ರತ್ವವು ಅತ್ಯಂತ ಸೋಜಿಗದ ವಿಷಯವಾಗಿತ್ತು. ಯಾರೊಡನೆಯೂ ಬೆರೆಯದ ಸ್ವಭಾವವು ಕಮಾಲನದು! ಅದರಂತೆಯೆ ಕಟುವಾತುಗಳ ಆರೀಫನಾದರೂ ಯಾರೊಡನೆ ಬೆರೆಯುವಂತಹನಿರಲಿಲ್ಲ. ಆದರೂ ಇವರಿಬ್ಬರ ಸ್ನೇಹವು ಅತ್ಯಂತ ನಿಕಟವಾಗಿ ಬೆಳೆಯಿತು. ಇವರು ಒಬ್ಬರನ್ನೊಬ್ಬರು ಅಗಲಿ ಇರುವುದೆ ಕಡಮೆ. ಕಮಾಲನು ಸೈನಿಕ ಶಿಕ್ಷಣದ ಸಂಸ್ಥೆಯಲ್ಲಿದ್ದಾಗ ಆರೀಫನೂ ಅಲ್ಲಿಯೆ ಇದ್ದನಂತೆ; ಮುಂದೆ ಜರ್ಮನಿಯಲ್ಲಿ ಉಚ್ಚ ಸೈನಿಕ ಶಿಕ್ಷಣವನ್ನು ಪಡೆದನು. ಸೈನ್ಯದಲ್ಲಿದ್ದಾಗ ಕೂಡ ಮೇಲಧಿಕಾರಿಗಳು ಆರೀಫನನ್ನು ಸಂಶಯದೃಷ್ಟಿಯಿಂದ ನೋಡುತ್ತಿದ್ದರು. ಮೊದಲು ಅವನು ಯಾರು, ಎಲ್ಲಿಂದ ಬಂದವನು, ತಂದೆತಾಯಿಗಳಾರು ಎಂಬುದು ಸಹ ಯಾರಿಗೂ ಗೊತ್ತಿರಲಿಲ್ಲ. ಆರೀಫನ ವರ್ತನೆಯಾದರೂ ಹಿಂದು–ಮುಂದು ದಿಕ್ಕಿಲ್ಲದ ಸಾಸಿಗನಂತಿದ್ದಿತು. ಮಹಾಯುದ್ಧವು ಮುಗಿದಂದಿನಿಂದ ಆರೀಫನು ಕಮಾಲನೊಡನೆ ಸ್ನೇಹವನ್ನು ಬೆಳೆಸಿದ್ದನು, ಇಬ್ಬರೂ ಉದ್ಧತ ಸ್ವಭಾವದವರು; ಇಬ್ಬರೂ ಬಿರುಸು ಮಾತಿನವರು. ಆರೀಫನು ನಾಲಗೆಯಂತೆ ಬಂದೂಕನ್ನು ಕೂಡ ಉಪಯೋಗಿಸಲು ಹಿಂದುಮುಂದು ನೋಡುತ್ತಿರಲಿಲ್ಲ, ಇಬ್ಬರ ರಕ್ತದಲ್ಲೂ ಕ್ರಾಂತಿಯ ಕಣಗಳು ಓಡಾಡುತ್ತಿದ್ದುವು. ಗ್ಯಾಲಿಪೋಲಿಯ ಯುದ್ಧದ ತರುವಾಯ ಆರೀಫನು ಕಮಾಲನನ್ನು ತನ್ನ ಗುರು, ತನ್ನ ಮುಂದಾಳು ಎಂದು ತಿಳಿಯತೊಡಗಿದನು. ಯಾರ ಮುಂದೂ ತುಟಿಬಿಚ್ಚದ ಕಮಾಲನು ಆರೀಫನೊಬ್ಬನೆ ಇದ್ದಾಗ ಮಾತಿನ ಸುರಿಮಳೆಯನ್ನೆ ಸುರಿಸುತ್ತಿದ್ದನು. ಇಪ್ಪತ್ತುನಾಲ್ಕು ತಾಸುಗಳನ್ನು ಇವರಿಬ್ಬರು ಕೂಡಿಯೆ ಕಳೆಯುವರು. ತನ್ನ ಮನಸಿನ ವಿಚಾರಗಳನ್ನೆಲ್ಲ ಒಂದೇ ಸವನೆ ಹೊರಗೆಡಹುತ್ತ, ಬೆನ್ನಿಗೆ ಕೈಕಟ್ಟಿಕೊಂಡು, ಕೋಣೆಯಲ್ಲಿ ಅತ್ತಿಂದಿತ್ತ ಇತ್ತಿಂದತ್ತ ತಿರುಗಾಡುವನು ಕಮಾಲನು; ಅವನನ್ನು ಅತ್ಯಂತ ಆದರದ ದೃಷ್ಟಿಯಿಂದ ಕಣ್ಣುನೆಟ್ಟು ನೋಡುತ್ತ,

ಅವನ ಮಾತುಗಳನ್ನು ಕೇಳುತ್ತ ಕುಳಿತಿರುವವನು ಆರೀಫನು. ಇದು ನಿತ್ಯದ ದೃಶ್ಯ. ಒಮ್ಮೆ ಕಮಾಲನು ತನ್ನ ವಿಚಾರಗಳ ಆವೇಶದಲ್ಲಿದ್ದಾಗ ಆರೀಫನು ಅವನಿಗೆ ಹೀಗೆ ಹೇಳಿದನು :- "ನನಗೆ ಜಗತ್ತಿನಲ್ಲಿ ನನ್ನವ ರೆಂಬುವವರು ಯಾರೂ ಇಲ್ಲ; ನನಗೆ ಯಾವುದರಲ್ಲೂ ವಿಶ್ವಾಸವಿಲ್ಲ, ಯಾವುದಕ್ಕಾಗಿ ಪ್ರೇಮವೂ ಇಲ್ಲ; ನಿನಗೆ ಯಾವಾಗಲೂ ನಿನ್ನ ಜತೆಯಲ್ಲಿ ತಿರುಗಾಡುತ್ತ ನಿನ್ನ ಸೇವೆ-ಸಂರಕ್ಷಣೆಗಳನ್ನು ಮಾಡಲು ನಾಯಿ ಯೊಂದು ಬೇಕಾದರೆ ಹೇಳು ನನಗೆ. ನಾನೇ ನಿನ್ನ ನಾಯಿಯಾಗುವೆ.'

ಈ ಮಾತು ಆರೀಫನ ಗುಣಾವಗುಣಗಳ ದ್ಯೋತಕವಾಗಿದೆ. ಕಮಾಲನಿಗಾಗಿ ಜೀವವನ್ನು ಕೊಡಲು ಕೂಡ ಅವನು ಸಿದ್ಧನಿದ್ದನು. ೧೯೧೯ರಲ್ಲಿ ಕಮಾಲನು ಕ್ರಾಂತಿಯನ್ನೆಬ್ಬಿಸುವ ಉದ್ದೇಶದಿಂದ ಅನಾ ಟೊಲಿಯಾಕ್ಕೆ ಹೊರಟಾಗ ಆರೀಫನು ಅವನನ್ನು ಹಿಂಬಾಲಿಸಿದನು. ರಾಷ್ಟ್ರೀಯ ಬೇಡಿಕೆ (National Pact) ಯನ್ನು ಕಮಾಲನ ಇಚ್ಛೆ ಯಂತೆ ಸದಸ್ಯರೆಲ್ಲರೂ ಒಪ್ಪಿಕೊಂಡಾಗ ಆರೀಫನು ಆವೇಶದಿಂದ 'ಮುಸ್ತಾಫಾ ಕಮಾಲಕೀ ಜಯ' ಎಂದು ಜಯಘೋಷವನ್ನು ಮಾಡಿದನು. 'ಎಲ್ಲರೂ ನಿನ್ನ ಕೈ ಬಿಟ್ಟರೆ, ನಾನು ಸಾಯುವವರೆಗೆ ನಿನ್ನ ಮುಂದೆ ದಾಸನಂತೆ ನಿನಗಾಗಿ ಹೋರಾಡುವೆ' ಎನುತ್ತಿದ್ದನು. ಮುಂದೆ ಗ್ರೀಕರೊಡನೆ ಯುದ್ಧ ನಡೆದಾಗ ರಾತ್ರಿ ಆರೀಫನು ಕಮಾಲನನ್ನು ಮಲಗಿದಾಗ ಬೆಳಗಿನ ಜಾವದವರೆಗೆ ಕಾಯುತ್ತ ನಿಲ್ಲುತ್ತಿದ್ದನು. ಕಮಾಲನಾದರೂ ಗೆಳೆಯನ ಈ ವೃತ್ತಿಯಿಂದ ಪ್ರೋತ್ಸಾಹಿತನಾಗು ತ್ತಿದ್ದನೆಂದು ಹೇಳಬಹುದು. ಆರೀಫನ ಮುಂದೆ ತನ್ನ ಎಲ್ಲ ವಿಚಾರ ಗಳನ್ನು ಮೊದಲು ಹೇಳುವನು. ಆರೀಫನಿಂದ ಅವನಿಗೊಂದು ತರದ ಸ್ಫೂರ್ತಿ ಬರುತ್ತಿದ್ದಿತೆಂದು ಹೇಳಬಹುದು. ಇಂತಹ ಪರಸ್ಪರವಿಶ್ವಾಸ ದಿಂದ ಇವರ ಸ್ನೇಹವು ಅನೇಕ ವರ್ಷಗಳವರೆಗೆ ಆದರ್ಶಪ್ರಾಯ ವಾಗಿತ್ತು.

ಕಮಾಲನಿಗೆ ಸ್ನೇಹಕ್ಕಿಂತಲೂ ಪವಿತ್ರವೆನಿಸುವುದೊಂದು ಧ್ಯೇಯ ವಿದ್ದಿತು; ದೇಶೋದ್ಧಾರ. ಆ ಧ್ಯೇಯಕ್ಕೆ ಅಡ್ಡಬರುವ ಯಾವ ವ್ಯಕ್ತಿಯೂ

ಕಮಾಲನ ಸ್ನೇಹಕ್ಕೆ ಪಾತ್ರವೆನಿಸಿ ಉಳಿಯುವುದು ಶಕ್ಯವಿದ್ದಿಲ್ಲ. ದೇಶೋದ್ಧಾರಕ್ಕಾಗಿ ಆರೀಫನೂ ಹೆಣಗಾಡಲು ಸಿದ್ಧನಿದ್ದನು. ಆದರೆ ಬುದ್ಧಿಮತ್ತೆ ಕಡಮೆ; ಯುದ್ಧಪ್ರಿಯತೆ ಹೆಚ್ಚು. ದೇಶಕ್ಕಾಗಿ ಯಾವಾಗಲೂ ಯುದ್ಧವನ್ನೆ ಆಡುವುದಾದರೆ ಆರೀಫನಿಗೆ ಸಂತೋಷ. ಆವನ ಸ್ವಭಾವಕ್ಕೆ ಒಂದಿಲ್ಲೊಂದು ಕಿಡಿಗೇಡಿತನ ಬೇಕು; ಸುಮ್ಮಸಿರುವುದು ಸಹನವಿಲ್ಲ. ಕಮಾಲನಿಗಾದರೂ ಯುದ್ಧವು ಬೇಕಿದ್ದಿತು! ಆದರೆ ಕೇವಲ ಆವಶ್ಯಕವೆನಿಸುವವರೆಗೆ ಮಾತ್ರ ಬೇಕಿದ್ದಿತು. ದೇಶದ ನಿಜವಾದ ಹಿತವು ಒದಗಬೇಕಾಗರೆ ಶಾಂತಿಸಮಯವು ಬೇಕೆಂದು ಕಮಾಲನ ಅಭಿಪ್ರಾಯ. ಇದರಂತೆಯೆ ಜನರ ಒಪ್ಪಿಗೆಯನ್ನು ಪಡೆದಲ್ಲಿ ದೇಶಕ್ಕೆ ಶಾಶ್ವತವಾದ ಹಿತ ಎಂದು ಕಮಾಲನು ಬಗೆದಿದ್ದನು. ಆರೀಫನಿಗೆ ಜನ-ಜನತೆಗಳ ಕಲ್ಪನೆಯೂ ಇದ್ದಿರಲಿಲ್ಲ, ಅವುಗಳಿಗಾಗಿ ಆದರವೂ ಇರಲಿಲ್ಲ. 'ರಾಷ್ಟ್ರೀಯ ಸಭೆ! ಜನರ ಪ್ರತಿನಿಧಿ! ಇವುಗಳನ್ನು ತೆಗೆದುಕೊಂಡೇನು ಸುಡುವುದಿದೆ? ಸೈನ್ಯದ ಬೆಂಬಲ ನಿನಗಿದೆ. ಆಜ್ಞೆ ಹೊರಡಿಸು, ಬೇಕಾದ್ದನ್ನು ಮಾಡೋಣ' ಎಂದು ಆರೀಫನು ಮಹಾರಾಷ್ಟ್ರೀಯ ಸಭೆಯ ಮೊದಲಿನ ಅನಧಿಕೃತ ಅಧಿವೇಶದಲ್ಲಿ ಉಪದೇಶ ಮಾಡಿದ್ದನು. ಕಾಲವು ಕಳೆದಂತೆ ಕಮಾಲನಿಗೆ ಆರೀಫನ ಸಹವಾಸವು ದೇಶಹಿತಸಾಧನೆಯ ದೃಷ್ಟಿಯಿಂದ ಉಪಯುಕ್ತವೆನಿಸಲಿಲ್ಲ. ಕಮಾಲನು ಮೊದಲಿನಂತೆ ಆರೀಫನಿಗೆ ತನ್ನ ವಿಚಾರಗಳನ್ನು ಹೇಳುತ್ತಿರಲಿಲ್ಲ. ಹೀಗೆ ಮೆಲ್ಲಗೆ ಇವರಿಬ್ಬರ ಸ್ನೇಹದಲ್ಲಿ ತಡೆ ಬಂದಿತು.

ಇಷ್ಟರೊಳಗಾಗಿಯೆ ಆರೀಫನಲ್ಲಾದರೂ ಅಸೂಯಾವೃತ್ತಿಯು ಕುದಿಯುತ್ತಿದ್ದಿತು. ಸ್ವಾತಂತ್ರ್ಯಯುದ್ಧದ ಪ್ರಾರಂಭಕ್ಕೆ ಇಸ್ಮೆತ್ ಪಾಶಾ ಎಂಬವನು ಕಮಾಲನ ಪಂಗಡಕ್ಕೆ ಬಂದು ಸೇರಿದನು. ಆ ಕ್ಷಣದಿಂದ ಕಮಾಲನು ಇಸ್ಮೆತ್‌ನಲ್ಲಿ ಸಂಪೂರ್ಣವಿಶ್ವಾಸವನ್ನಿಟ್ಟು ನಡೆಯತೊಡಗಿದನು. 'ಮೊದಲಿನಿಂದಲೂ ತಾನು ಜೀವಸ್ಮಿತ್ರ; ಜೀವದ ಹಂಗುದೊರೆದು ಕಮಾಲನನ್ನು ಹಿಂಬಾಲಿಸಿದವ; ಈಗ ಎಲ್ಲಿಂದಲೋ ಬಂದ ಈ ಇಸ್ಮೆತ್! ಇವನಲ್ಲಿ ನನ್ನಕಿಂತಲೂ ಹೆಚ್ಚು ವಿಶ್ವಾಸ; ಮಹತ್ವದ ಕೆಲಸಗಳ

ಆಪ್ತಾಲೋಚನೆಗಳೆಲ್ಲ ಇಸ್ಮೈತ್‌ನ ಕೂಡ; ಹೊತ್ತುಗಳೆಯುವ ಹಾಳು ಹರಟೆ ಮಾತ್ರ ನನ್ನ ಕೂಡ; ನಾನು ವಿದೂಷಕನಾದೆ; ಉಂಡು ಕೈ ಒರೆಸಿಕೊಳ್ಳುವ ಬಟ್ಟೆಯಾದೆ, ದಣಿದು ಕಾಲು ಚಾಚುವ ಚಾಪೆಯಾದೆ' ಎಂಬ ವಿಚಾರಗಳಿಂದ ಆರೀಫನು ಅತ್ಯಂತವಾಗಿ ಅಸೂಯಾಪರನಾದನು.

ಸ್ವಾತಂತ್ರ್ಯಯುದ್ಧ ಮುಗಿಯಿತು. ದೇಶದ ಸಂಘಟನಾ ಕಾರ್ಯವು ಎದುರು ನಿಂತಿತು. ಇಂತಹ ಕಾರ್ಯದಲ್ಲಿ ಕಮಾಲನಿಗೆ ಸಹಾಯಮಾಡುವಷ್ಟು ಬುದ್ಧಿಮತ್ತೆ ಆರೀಫನಿಗಿರಲಿಲ್ಲ. ಇನ್ನೂ ಯುದ್ಧವನ್ನು ನಡೆಸೋಣ ಎಂದು ಆರೀಫನ ಆಸೆ. ಆದರೆ ಕಮಾಲನು ಯುದ್ಧಪ್ರಿಯನೆ ಅಲ್ಲವೆಂದು ಕಂಡು ಅಸಹ್ಯವೆನಿಸಿ ಕೊನೆಗೆ ಆರೀಫನು ಕಾನಸ್ಟಾಂಟಿನೋಪಲಿನಲ್ಲಿ ಹೋಗಿ ಇದ್ದುಕೊಂಡನು. 'ಆರೀಫನು ಕಮಾಲನ ಪರಮಮಿತ್ರ, ಈಗ ಬಿಟ್ಟು ಬಂದಿದ್ದಾನೆ, ಇವನಿಗೇನೊ ಅಸಮಾಧಾನವಾಗಿರಬೇಕೆ'ಂಬ ವಿಚಾರದಿಂದ ಕಮಾಲನ ಶತ್ರುಗಳು ಆರೀಫನೊಡನೆ ಸಲಿಗೆಯನ್ನು ಬೆಳೆಸಿದರು, ಅವನ ಅಸೂಯಾಜ್ವರವನ್ನೂ ಹೆಚ್ಚಿಸಿದರು. 'ನೀನು ಕಮಾಲನಿಗಿಂತ ಹೆಚ್ಚಿನ ಯೋಗ್ಯತೆಯ ವ್ಯಕ್ತಿ' ಎಂದು ಎಷ್ಟೋ ಸಲ ಅವನನ್ನು ಸ್ತುತಿಸುತ್ತಿದ್ದರು. ಆದರೆ ಆರೀಫನು ಇಂತಹ ಸೀಮೆ ತಪ್ಪಿದ ಸ್ತುತಿಗೆ ಬಲಿ ಬೀಳುತ್ತಿರಲಿಲ್ಲ. ಕಮಾಲನ ವಿಷಯವಾಗಿ ಅವನಲ್ಲಿ ಅಸಂತೋಷವಿದ್ದಿತು, ದ್ವೇಷವಿರಲಿಲ್ಲ. ಆದರೂ ಕೊನೆಗೆ ಕಮಾಲನ ವಧ ಮಾಡುವ ಸಂಚಿಗೆ ಒಪ್ಪಿಗೆಯನ್ನು ಕೊಡುವಷ್ಟು ಆರೀಫನ ಅಸಂತೋಷವು ಹೆಚ್ಚಿತು. ಗ್ರೀಕರನ್ನು ಹೊಡೆದೋಡಿಸಿದ ಮೇಲೆ ಕಮಾಲನು ವಿಜಯಯಾತ್ರೆಯ ವೈಭವದಿಂದ ಕಾನಸ್ಟಾಂಟಿನೋಪಲಿಗೆ ಬರುವುದನ್ನು ನಿಶ್ಚಯಿಸಿದನು. ಆಗ ಮೆರವಣಿಗೆ ನಡೆದಾಗ ಕಮಾಲನನ್ನು ಕೊಲ್ಲಬೇಕೆಂದು ಆರೀಫನೂ ಅವನ ಮಿತ್ರರೂ ಆರೀಫನ ಮನೆಯಲ್ಲಿಯೆ ಕುಳಿತು ಸಂಚು ಮಾಡಿದರು. ಸುದೈವದಿಂದ ಸಂಚು ಹೊರಬಿದ್ದಿತು. ಆರೀಫ ಮೊದಲಾದವರ ವಿಚಾರಣೆಯಾಯಿತು. ಕಮಾಲನೂ ಆರೀಫನೂ ಸಹೋದರರಂತೆ ಇರುವಾಗಿನಿಂದ ಇವರ ಸುಖದುಃಖಗಳನ್ನು ನೋಡಿಕೊಳ್ಳುತ್ತಿದ್ದ ಆಯೇಷಾ ಎಂಬ ಮುದುಕಿಯು

ಯಾವುದನ್ನೂ ಮರೆಮಾಚದೆ ಆರೀಫನು ಸಂಚುಗಾರರೊಡನಿದ್ದುದನ್ನು ತನ್ನ ಸಾಕ್ಷ್ಯದಲ್ಲಿ ಹೇಳಿದಳು. ಆರೀಫನಿಗೆ ದೇಹಾಂತ ಶಿಕ್ಷೆಯಾಯಿತು. ಕೈ ನಡುಗದೆ, ಕೂದಲು ಕೊಂಕದೆ ಕಮಾಲನು ಆ ಶಿಕ್ಷೆಗೆ ತನ್ನ ಸಹಿಯನ್ನು ಕೊಟ್ಟನು! ದೇಶದ ಹಿತ ಹೆಚ್ಚಿನದಲ್ಲವೆ? ಅದಕಾಗಿಯೆ ಎಬ್ಬಿಸಿದ ಕ್ರಾಂತಿಯಲ್ಲಿ ಆರೀಫನು ತನಗೆ ಮೊದಲು ನೆರವಾಗಿದ್ದನು, ಸ್ಫೂರ್ತಿಯಾಗಿದ್ದನು; ನಿಜ. ಆದರೆ ಈಗ? ದೇಶವಿರೋಧಕರಿಗೆ ಶಿಕ್ಷೆಯಾಗಲೇಬೇಕು ಎಂದು ಕಮಾಲನ ತತ್ತ್ವ.

* * *

ಒಳಗಿದ್ದ ವಿಚಾರಗಳನ್ನು ವ್ಯಕ್ತಗೊಳಿಸಲು ಆರೀಫನ ಸಹವಾಸವು ಪ್ರೇರಕವಾದಂತೆ, ವಿಚಾರಗಳನ್ನು ಕಾರ್ಯರೂಪದಲ್ಲಿ ತರಲು ಇಸ್ಮೆತ್‌ನ ಸಹಾಯವು ಪ್ರೇರಕವಾಯಿತೆಂದು ಹೇಳಬಹುದು. ಮಹಾಯುದ್ಧದ ಕಾಲದಲ್ಲಿ ಕಮಾಲನು ಕಾಕೇಸಸದಲ್ಲಿ ಸೈನ್ಯಾಧಿಕಾರವನ್ನು ಪಡೆದಾಗ ಇಸ್ಮೆತ್‌ನು ಮೊದಲು ಅವನ ದೃಷ್ಟಿಗೆ ಬಿದ್ದುದು. ಕಮಾಲನಿಗೆ ಮಾನವ-ಸ್ವಭಾವದ ಪರೀಕ್ಷೆ ಎಷ್ಟು ತೀವ್ರವಾಗಿ ಮತ್ತು ತಪ್ಪದೆ ಆಗುತ್ತಿದ್ದಿತೆಂಬುದಕ್ಕೆ ಇಸ್ಮೆತ್‌ನ ಉದಾಹರಣವೆ ಸಾಕ್ಷ್ಯವಾಗಿದೆ. ಸಮರಾಂಗಣದಲ್ಲಿ ಮೈಮುರಿದು ದುಡಿಯುವ ಇಸ್ಮೆತ್‌ನ ಕೆಲಸಗಾರಿಕೆಯು ಕೂಡಲೆ ಇವನ ಲಕ್ಷ್ಯವನ್ನು ಸೆಳೆಯಿತು; ಇಸ್ಮೆತ್‌ನಲ್ಲಿ ನಿಜವಾದ ಯೋಗ್ಯತೆ ಇದೆ, ದೀರ್ಘಸಾಹಸವಿದೆ ಎಂಬುದನ್ನು ಆಗಲೆ ಅರಿತುಕೊಂಡನು. ಮಹಾಯುದ್ಧದ ತರುವಾಯ ತುರ್ಕಸ್ಥಾನದ ಸುಲ್ತಾನನ ಮಂತ್ರಿಮಂಡಳದಲ್ಲಿ ಇಸ್ಮೆತ್‌ನು ಯುದ್ಧಮಂತ್ರಿಯಾಗಿದ್ದನು. ಮಂತ್ರಿಪದವಿಯಲ್ಲಿದ್ದರೂ ಇಸ್ಮೆತ್‌ನಿಗೆ ಕಮಾಲನ ವಿಷಯವಾಗಿ ಅತ್ಯಂತ ಆದರವಿದ್ದಿತು. ಕಮಾಲನು ಅನಾಟೋಲಿಯಾಕ್ಕೆ ಹೋಗುವಮುಂಚೆ ಇಸ್ಮೆತ್‌ನೊಡನೆ ಗುಪ್ತಸಂಕೇತ ಭಾಷೆ (Code) ಯನ್ನು ಗೊತ್ತುಮಾಡಿಕೊಂಡಿದ್ದನು. ಮಹಾರಾಷ್ಟ್ರೀಯ ಸಭೆಯು ಕಾನಸ್ಟಾಂಟಿನೋಪಲಿನಲ್ಲಿ ಕೂಡಿದಾಗ ಸುಲ್ತಾನನು ರಾಷ್ಟ್ರೀಯ ಸದಸ್ಯರನ್ನು ಬಂಧಿಸಲು ಯತ್ನಿಸಿದನೆಂದು ಹಿಂದೆ ಹೇಳಿದೆಯಷ್ಟೆ. ಆ ಸಮಯದಲ್ಲಿ

ಇಸ್ಮೈತ್‌ನು ಜಾರಿ ಪಾರಾದನು. ಮುಂದೆ ಕೆಲವು ದಿವಸ ಸುಳುವಿಲ್ಲದೆ, ರಹಸ್ಯವಾಗಿ ಅತ್ತಿತ್ತ ಕಾಲಹರಣ ಮಾಡಿದನು. ಕಮಾಲನು ರಾಷ್ಟ್ರೀಯ ಪಕ್ಷವನ್ನೂ ಸೈನ್ಯವನ್ನೂ ಸಜ್ಜುಪಡಿಸುವ ಸಮಯದಲ್ಲಿ ಒಂದು ದಿವಸ ಅಕಸ್ಮಾತ್ತಾಗಿ, ಆಕಾಶದಿಂದಿಳಿದವನಂತೆ ಇಸ್ಮೈತ್‌ನು ಕಮಾಲನೆದುರು ಬಂದು ನಿಂತನು. ಇವನನ್ನು ಕಂಡಾಕ್ಷಣ ಕಮಾಲನಿಗೆ ಪುನರ್ಜೀವ ಬಂದಂತಾಯಿತು. ಕಣ್ಣುಗಳು ಅರಳಿದುವು, ಕೈಗಳು ಮುಂದೆ ಚಾಚಿದುವು, ಸಂತೋಷಭರದಿಂದ ಇವನನ್ನು ಸ್ವಾಗತಿಸಿದನು. ನೆರೆದವರಲ್ಲಿ ಎಷ್ಟೋ ಜನರಿಗೆ ಆಶ್ಚರ್ಯವಾಯಿತು. ಇಸ್ಮೈತ್‌ನು ಕಾಣಲಿಕ್ಕೆ ಮಹಾವ್ಯಕ್ತಿಯಲ್ಲ. ಗಿಡ್ಡ ದೇಹ, ಯಾವಾಗಲೂ ಮೈಮುದುಡಿಕೊಂಡು ನಡೆಯುವ ಸ್ವಭಾವ, ಮಾತುಗಳು ಹೆಚ್ಚಾಗಿಲ್ಲ, ಮುಖದಲ್ಲಿ ಆವೇಶದ ಕಳೆ ಇಲ್ಲ, ಮೇಲೆ ಕಿವಿ ತುಸು ಮಂದ! ಇಂತಹ ವ್ಯಕ್ತಿಯಲ್ಲಿ ಕಮಾಲನು ಅದಾವ ಅದ್ಭುತವನ್ನು ಕಂಡನೆಂದು ಆಶ್ಚರ್ಯ. ಆದರೆ ಕಮಾಲನು ಹಿಂದೊಮ್ಮೆ ಕಂಡ ಅದ್ಭುತವನ್ನು ಎಂದಿಗೂ ಮರೆತಿರಲಿಲ್ಲ. ಸದ್ಯಕ್ಕೆ ಪರರಾಷ್ಟ್ರಗಳನ್ನೂ ಗ್ರೀಕಸೈನ್ಯವನ್ನೂ ಸೋಲಿಸುವ ಕೆಲಸದಲ್ಲಿ ತನಗೆ ನೆರವಾಗುವ ಯೋಗ್ಯತೆಯುವರು ಯಾರು? ಹೊಣೆಗಾರಿಕೆಯನ್ನು ಹೊತ್ತುಕೊಂಡು ದುಡಿಯುವವರು ಯಾರು? ಎದೆಗುಂದದೆ ಅವಿಶ್ರಾಂತಪರಿಶ್ರಮದಿಂದ ಹೆಣಗುವವರು ಯಾರು? ಶಿಸ್ತನ್ನೂ ವ್ಯವಸ್ಥೆಯನ್ನೂ ಒದಗಿಸಿಕೊಂಡು ಸಾಗುವವರು ಯಾರು?- ಎಂದು ಕಮಾಲನು ದಿಗ್ಭ್ರಾಂತನಾಗಿದ್ದನು. ಆ ಸಮಯಕ್ಕೆ ಇಸ್ಮೈತ್‌ನು ಬಂದದ್ದು. ಇಸ್ಮೈತ್‌ನು ಬಂದ ಕೂಡಲೆ ಕಮಾಲನು ಎಲ್ಲ ಕಾರ್ಯಭಾರವನ್ನು ಅವನಿಗೊಪ್ಪಿಸಿದನು; ಅವನನ್ನು ಸೈನ್ಯದ ಮುಖ್ಯಾಧಿಕಾರಿಯನ್ನಾಗಿ ಮಾಡಿದನು.

ಆಗಿನ ಸೈನ್ಯದ ಮುಖ್ಯಾಧಿಕಾರಿಯಾಗುವುದೆಂದರೆ ಸಣ್ಣ ಕೆಲಸವಾಗಿರಲಿಲ್ಲ; ಯಾಕೆಂದರೆ, ಹೇಳಿಕೊಳ್ಳುವಷ್ಟು ಸೈನ್ಯವೆ ಇದ್ದಿರಲಿಲ್ಲ. ಬೆಳಗಿನ ಜಾವದಿಂದ ಸೈನಿಕರಿಗೆ ಕವಾಯಿತನ್ನು ಕಲಿಸುವುದು, ಮುಂದೆ ಅವರ ಕಡೆಯಿಂದಲೆ ಕಾಲುದಾರಿಯನ್ನೂ ರೈಲುದಾರಿಯನ್ನೂ

ಹಾಕಿಸುವುದು, ಆಗಾಗ ಅವರಿಗೆ ಕಲಿಸಿದ ಪಾಠವು ಮರೆಯಬಾರದೆನು ವಂತೆ ಆಕಸ್ಮಾತ್ತಾಗಿ ಶತ್ರುಗಳ ಮೇಲೆ ನುಗ್ಗಿ ಬಂದು ತಿರುಗಿ ತಮ್ಮ ದಿನದ ಕಾರ್ಯಕ್ರಮವನ್ನು ನಡೆಸುವುದು. ಪ್ರತಿಯೊಂದು ಕೆಲಸದಲ್ಲೂ ಇಸ್ಮೆತ್‌ನು ತನ್ನ ಕುದುರೆಯನ್ನೇರಿ ನಸುಕಿನಲ್ಲಿಯೆ ಸಜ್ಜಾಗಿ ಒಂದು ನಿಲ್ಲುವನು, ಮೊದಮೊದಲು ಸಿದ್ಧತೆ–ಸಲಕರಣೆಗಳಿಲ್ಲದುದಕ್ಕೆ ಇಸ್ಮೆತ್‌ನ ದಳವು ಸೋಲನ್ನು ತಪ್ಪಿಸಿಕೊಂಡರೆ ಸಾಕಾಗಿತ್ತು. ಆದರೆ ಇಷ್ಟರಲ್ಲಿಯೆ ಇಸ್ಮೆತ್‌ನು ಬಹು ಜನರಿಗೆ ಅಸಹ್ಯನಾಗಿದ್ದನು. ಈ ಆಗಂತುಕನಿಗೆ ಇಷ್ಟೇಕೆ ಅಧಿಕಾರ–ಎಂಬುದೆ ಆ ಅಸಹ್ಯಕ್ಕೆ ಕಾರಣ. ಆದರೆ ವಿರೋಧವು ಎಷ್ಟೇ ಬಲಿತರೂ ಕಮಾಲನು ಇಸ್ಮೆತ್‌ನಲ್ಲಿ ತನ್ನ ವಿಶ್ವಾಸವನ್ನು ಕಡಮೆ ಮಾಡಲಿಲ್ಲ. ಇಸ್ಮೆತ್‌ನಿಗಾದರೂ ಕಮಾಲನ ವಿಷಯವಾಗಿ ಆದರವೂ ಆಜ್ಞಾಧಾರಕತ್ವವೂ ದಿನದಿನಕ್ಕೆ ಬೆಳೆದುವು. ಕಮಾಲನ ಧ್ಯೇಯವನ್ನು ತಿಳಿದುಕೊಳ್ಳುವ ಬುದ್ಧಿಮತ್ತೆ ಇಸ್ಮೆತ್‌ಗೊಬ್ಬನಿಗೆಯೆ ಇದ್ದಿತೆಂದರೂ ಸಲ್ಲುವುದು. ಆ ಧ್ಯೇಯಕ್ಕಾಗಿ ಇಸ್ಮೆತ್‌ನು ತನ್ನನ್ನು ಕೂಡಾ ಮರೆ ತಿದ್ದನು. ಕಮಾಲನಲ್ಲಿ ಮುಂದಾಳು ಆಗುವ ಯೋಗ್ಯತೆ ಇದೆ. ಇಷ್ಟೇ ಸಾಕು ಇಸ್ಮೆತ್‌ನಿಗೆ. ತಾನೂ ಮುಂದಾಳಾಗಬೇಕೆಂಬ ಸ್ವಾರ್ಥವು ಅವನಲ್ಲಿರಲಿಲ್ಲ. ಶಿಸ್ತು ಬೇಕು, ವ್ಯವಸ್ಥೆ ಬೇಕು. ಅದಕಾಗಿ ಮುಂದಾಳಾದ ಕಮಾಲನು ಹೇಳುವುದನ್ನು ದಕ್ಷತೆಯಿಂದ ನಡೆಸುವುದೆ ತನ್ನ ಕಾರ್ಯ ಎಂದು ತಿಳಿದಿದ್ದನು. ಕೊನೆಗೆ ' ಇನ್‌ಯುನು ' ಎಂಬ ಸಮರದಲ್ಲಿ ಇಸ್ಮೆತ್‌ನು ವಿಜಯವನ್ನು ಪಡೆದು ಸ್ವಾತಂತ್ರ್ಯಯುದ್ಧವನ್ನೆ ಗೆದ್ದನೆಂದು ಹೇಳಬಹುದು. ಅಂದಿನಿಂದ ಅವನು ಇಸ್ಮೆತ್‌ಪಾಶಾ ಆದನು.

ಇಸ್ಮೆತ್‌ನು ಯಾವಾಗಲೂ ಕಮಾಲನ ಮಗ್ಗುಲಲ್ಲಿಯೆ ಇರುತ್ತಿದ್ದುದರಿಂದ ಅವನು ಮೆತ್ತಗಿನ ಸ್ವಭಾವದವನು ಎಂದು ಯಾರಿಗಾದರೂ ಕಲ್ಪನೆಯಾಗಬಹುದು. ಆದರೆ ಇಸ್ಮೆತ್‌ನು ಎಂತಹ ಸ್ವಾಭಿಮಾನಿ, ಧೀರ, ವೀರವೃತ್ತಿಯುವ ಎಂಬುದನ್ನು ತೋರಿಸಲು ಅನೇಕ ಉದಾಹರಣೆಗಳಿವೆ. ಅವುಗಳಲ್ಲಿ ಹೆಚ್ಚು ಲೋಕಪ್ರಿಯವಾದ ಉದಾಹರಣೆ

ಯೊಂದಿದೆ. ಮೋಸಲ ಪ್ರಾಂತದ ವಿಷಯವಾಗಿ ಇಂಗ್ಲಂಡಿಗೂ ತುರ್ಕಸ್ತಾನಕ್ಕೂ ತಂಟೆ ಎದ್ದಾಗ ಸಂಧಾನವನ್ನು ನಡೆಸಲಿಕ್ಕೆ ಇಸ್ಮೆತ್ ಪಾಶಾನು ತುರ್ಕಸ್ತಾನದ ಪ್ರತಿನಿಧಿಯಾಗಿ ಹೋದನು. ಸ್ವಿಝರ್ಲಂಡದ ಲೋಜಾನ (Lousanne) ಎಂಬ ಪಟ್ಟಣದಲ್ಲಿ ಎಲ್ಲ ಪ್ರತಿನಿಧಿಗಳೂ ಕೂಡಿದ್ದರು. ಇಂಗ್ಲಂಡದ ಪ್ರತಿನಿಧಿಯು ಲಾರ್ಡ ಕರ್ಝನ. ಕರ್ಝನ ದೊರೆಗಳ ಉದ್ದಾಮವೃತ್ತಿ ಅಷ್ಟಿಷ್ಟೆಂದು ನಮ್ಮ ದೇಶದವರಿಗೆ ಹೇಳಬೇಕಾಗಿಲ್ಲ. ಕಮಾಲನಾರು ? ಇಸ್ಮೆತ್ ಯಾರು ? ಅಸಂಸ್ಕೃತ ತುರ್ಕಸ್ತಾನಕ್ಕೆ ಇಷ್ಟೊಂದು ಮಹತ್ತ್ವ ಕೊಡುವುದೆ—ಎಂದು ಹೇಸಿ, ಮೂಗು ಮುಚ್ಚಿಕೊಂಡೇ ಕರ್ಝನನು ಸಂಧಾನಗೃಹಕ್ಕೆ ಒಂದಿದ್ದನು. ಗೊತ್ತಾದ ವೇಳೆಗೆ ಇಸ್ಮೆತ್ ಪಾಶಾ ಬಂದನು ! ಕಾಣಲು ಕುಳ್ಳ, ಕ್ಷುಲ್ಲಕನಂತಿದ್ದ ಇವನನ್ನು ನೋಡಿದೊಡನೆಯೆ ಕರ್ಝನನು ತಿರಸ್ಕಾರದಿಂದ ಒಳಗಿಂದೊಳಗೆಯೆ ನಕ್ಕನು. ಆದರೆ ಈಗ ಒಳಗೆ ನಡೆದು ಬಂದುದು ಇಸ್ಮೆತ್ ಎಂಬ ವ್ಯಕ್ತಿಯಲ್ಲ, ತುರ್ಕಸ್ತಾನದ ನವತಾರುಣ್ಯದ ಮೂರ್ತಿ ಎಂಬುದು ಚಾಣಾಕ್ಷರಾದವರಿಗೆ ಹೊಳೆದಿರಬಹುದು. ಇಸ್ಮೆತ್‌ನು ದರ್ಪೋದ್ಧತನಂತೆ ನಡೆದು ಬಂದನು; ಅತ್ತಿತ್ತ ನೋಡಿದನು. ಎಲ್ಲರೂ ತಂತಮ್ಮ ಆರಾಮಕುರ್ಚಿಗಳಲ್ಲಿ ಕುಳಿತಿದ್ದಾರೆ. ತನಗಾಗಿ ಒಂದೇ ಕುರ್ಚಿ ಬರಿದಾಗಿ ನಿಂತಿದೆ. ಆದರೆ ಅದು ಸಾದಾ ಕುರ್ಚಿ, **ಆರಾಮಕುರ್ಚಿ**ಯಲ್ಲ ! ಕೆರಳಿದ ಸಿಂಹದಂತಾದನು ಪಾಶಾ. ಈ ಉಚ್ಚ-ನೀಚ ಭಾವವೇಕೆ ? ತನಗಾಗಿ, ತನ್ನ ದೇಶಕ್ಕಾಗಿ ಅನಾದರವನ್ನು ತೋರಿಸಬೇಕೆನುವ ಈ ಕ್ಷುಲ್ಲಕ ಹುಡುಗಾಟದವರೊಡನೆ ಸಂಧಾನಕ್ಕಾಗಿ ಮಾತುಕತೆಗಳನ್ನಾಡಬೇಕೆ—ಎಂದುಕೊಂಡು ನಿಂತಲ್ಲಿಯೆ ನಿಂತು ತುರ್ಕಸ್ತಾನದ ಪ್ರತಿನಿಧಿಗಳಿಗಾಗಿ ಕಾದಿಟ್ಟ ಸ್ಥಳವನ್ನು ತೋರಿಸಿ ' ಇಲ್ಲಿ ಆರಾಮಕುರ್ಚಿಗಳೇಕೆ ಇಲ್ಲ ? ' ಎಂದು ಗದ್ದರಿಸಿದನು. ಸಭಾಮಂದಿರದಲ್ಲಿ ತುಸು ಅಲ್ಲೋಲ ಕಲ್ಲೋಲವಾಯಿತು. ' ಬೇಕಾಗುವಷ್ಟು ಆರಾಮಕುರ್ಚಿಗಳನ್ನು ತರಿಸಲು ವೇಳೆ ಇದ್ದಿರಲಿಲ್ಲ ' ಎಂದು ಹೇಳಿದರು. ' ಹಾಗಾದರೆ ಆರಾಮಕುರ್ಚಿಗಳು ಬಂದ ಮೇಲೆ ನನಗೆ ತಿಳುಹಿಸಿರಿ ' ಎಂದವನೆ ಹೊರಟು

ಬಿಟ್ಟನು ! ಕ್ಷಣಾರ್ಧದಲ್ಲಿ ಆರಾಮಕುರ್ಚಿಗಳನ್ನು ತಂದಿಡಲಾಯಿತೆಂದು ಬೇರೆ ಹೇಳುವ ಕಾರಣವೆ ಇಲ್ಲ.

ಇಸ್ಮೆತ್‌ನು ಅತ್ಯಂತ ಕುಶಾಗ್ರಬುದ್ಧಿಯುವನು. ಪರರಾಷ್ಟ್ರಗಳಲ್ಲಿ ತುರ್ಕಸ್ಥಾನಕ್ಕಾಗಿ ಆದರವನ್ನು ಗಳಿಸಿಕೊಟ್ಟವನು ಇಸ್ಮೆತ್‌ನೆ ಎಂದು ಹೇಳಬಹುದು. ಬೇಕಾದ ರಾಷ್ಟ್ರದೊಡನೆ ಸಂಧಾನವಿರಲಿ, ಮಾತುಕತೆಗಳನ್ನಾಡಲು ಇಸ್ಮೆತ್‌ಪಾಶಾನೇ ಹೋಗುವನು. ಇವನ ಕಿವಿ ತುಸು ಮಂದ ಎಂದು ಮೇಲೆ ಹೇಳಿದೆಯಷ್ಟೆ. ಇಸ್ಮೆತ್‌ನು ಅದರ ಸದುಪಯೋಗವನ್ನು ಮಾಡಿಕೊಳ್ಳುತ್ತಿದ್ದನು. ಯಾವುದೆ ಮಾತನ್ನು ಇನ್ನೊಮ್ಮೆ ಹೇಳಿರಿ, ನನಗೆ ಸರಿಯಾಗಿ ಕೇಳಿಸಲಿಲ್ಲ ಎಂದು ಸುಳ್ಳುಸುಳ್ಳೇ ಹೇಳುವನು. ಆ ಮಾತನ್ನು ಮತ್ತೊಮ್ಮೆ ಹೇಳುತ್ತಿರುವಾಗ ಮನಸಿನಲ್ಲಿ ಅದಕ್ಕೆ ಸಮರ್ಪಕವಾದ ಉತ್ತರವನ್ನು ಸಿದ್ಧಪಡಿಸಿಕೊಳ್ಳುತ್ತಿರುವನು. ಕಮಾಲನು ಸ್ವಾತಂತ್ರ್ಯವನ್ನು ಯುದ್ಧದಲ್ಲಿ ಗೆದ್ದನು; ಇಸ್ಮೆತ್‌ನು ಆ ಸ್ವಾತಂತ್ರ್ಯವನ್ನು ನದಿಯಾಗಿ ಕಾಲುವೆಗಳಾಗಿ ದೇಶದಲ್ಲಿ ಪಸರಿಸಿ ಬೆಳೆ ತಂದುಕೊಟ್ಟನು. ಘಟನೆಯನ್ನು ಬರೆಯುವುದು, ಶಾಸನಪದ್ಧತಿಯನ್ನು ಸಿದ್ಧಪಡಿಸುವುದು ಮುಂತಾದ ಬುದಿಯ ಕೆಲಸಗಳಲ್ಲಿ ಇಸ್ಮೆತ್‌ನ ಸಹಾಯವಿದ್ದಿಲ್ಲವಾದರೆ ಕಮಾಲನ ತುರ್ಕಸ್ಥಾನವು ತಾಳುತ್ತಿದ್ದಿತೆ. ಎಂದು ಸಂಶಯ ಬರುವುದು. ಕಮಾಲನ ಆಳಿಕೆಯ ಆಧಾರಸ್ತಂಭನು ಇಸ್ಮೆತ್‌ಪಾಶಾ. ಕಮಾಲನು ರಾಷ್ಟ್ರಾಧ್ಯಕ್ಷನಾದ ಮೇಲೆ ಇಸ್ಮೆತ್‌ನೆ ಮುಖ್ಯಮಂತ್ರಿಯಾದನು. ಕಮಾಲನ ಜೀವಮಾನವಿರುವವರೆಗೆ ಇಸ್ಮೆತ್‌ನು ಮುಖ್ಯಮಂತ್ರಿಯಾಗಿಯೆ ಉಳಿಯಬಹುದು ಎಂದು ಯಾರಾದರೂ ಹೇಳುವಂತಿದೆ. ಇಸ್ಮೆತ್‌ನಿಗೆ ಅಂತಹ ಯೋಗ್ಯತೆ ಇದೆ, ಬುದ್ಧಿಮತ್ತೆ ಇದೆ; ಕಮಾಲನ ವಿಶ್ವಾಸವಾದರೂ ಅವನಲ್ಲಿ ಅಪಾರವಿದೆ. ಆದರೆ ಇತ್ತಿತ್ತಲಾಗಿ ಕಮಾಲನಲ್ಲಿದ್ದ ಒಂದು ಗುಣವು ಅವನಲ್ಲಿಲ್ಲವೆಂದು ಕಂಡು ಬಂದಿತು. ಎಷ್ಟೇ ವಯಸ್ಸಾದರೂ ಕಮಾಲನು ಹೃದಯದಿಂದ, ಉತ್ಸಾಹದಿಂದ, ವಿಚಾರಗಳಿಂದ ತರುಣನಾಗಿಯೆ ಉಳಿದಿದ್ದಾನೆ. ಆದರೆ ಇಸ್ಮೆತ್‌ಪಾಶಾನ ಮೇಲೆ ವಯಸ್ಸಿನ ಪರಿಣಾಮವಾಯಿತು ಎಂದು

ಹೇಳಬಹುದು. ತರುಣರಿಗೆ ಇಸ್ಮೆತ್‌ಪಾಶಾನು ಮುಂದಗಾಮಿ ಎಂದೆನಿಸಿದನು. ಕೊನೆಗೆ ೧೯೩೭ರಲ್ಲಿ ಇಸ್ಮೆತ್‌ಪಾಶಾನ ಮುಖ್ಯಮಂತ್ರಿತ್ವವು ಮುಗಿಯಬೇಕಾಯಿತು. ಇದರಲ್ಲಿ ಪಾಶಾನಿಗೆ ಅಸಮಾಧಾನವಾಗುವ ಕಾರಣವಿಲ್ಲ. ಇಂದಿನ ತರುಣರ ಉತ್ಸಾಹವು ಕಾರ್ಯರಂಗಕ್ಕಿಳಿಯಲು ಅವಕಾಶಗಳನ್ನು ಒದಗಿಸಿಕೊಟ್ಟ ಮೊದಲ ಮಾನವು, ಅವಿಶ್ರಾಂತ ಪರಿಶ್ರಮವು, ಅತುಲಸಾಹಸವು, ಆದರ್ಶನೀಯ ನಿಸ್ವಾರ್ಥಬುದ್ಧಿಯು ಇಸ್ಮೆತ್‌ಪಾಶಾ ಇವನದೆ.

* * * *

ದೇಶದ ಸ್ವಾತಂತ್ರ್ಯಯುದ್ಧವನ್ನು ಗೆಲ್ಲಲು ಇಸ್ಮೆತ್‌ಪಾಶಾ ಮತ್ತು ಅರೀಫನು ಸಹಾಯ ಮಾಡಿದಂತೆ, ವೈಯುಕ್ತಿಕ ಸ್ವಾತಂತ್ರ್ಯಯುದ್ಧವನ್ನು ಗೆಲ್ಲಲು ಸಹಾಯ ಮಾಡಿದ ವ್ಯಕ್ತಿ ಲತೀಫಾ ಎಂಬ ಯುವತಿ. ರಾಷ್ಟ್ರದಲ್ಲಿ ಶಿಸ್ತು–ವ್ಯವಸ್ಥೆಗಳು ಬೇಕೆಂದು ಹಟ ತೊಡುವ ಕಮಾಲ ಮನೆಯಲ್ಲಿಯೆ ಶಿಸ್ತು–ವ್ಯವಸ್ಥೆಗಳನ್ನು ನೆಲೆಗೊಳಿಸಲು ಯತ್ನಿಸಿದಳು ಈ ಮಹಿಳೆ. ವಯಸ್ಸಿನಲ್ಲಿ, ಶಿಕ್ಷಣದಲ್ಲಿ ಕಮಾಲನಿಗೂ ಲತೀಫಾನಿಗೂ ಬಹಳೇ ಅಂತರವಿದ್ದಿತು. ಲತೀಫಾನ ಶಿಕ್ಷಣ ಪ್ಯಾರಿಸನಗರದಲ್ಲಿ, ಪಾಶ್ಚಾತ್ಯ ಪದ್ಧತಿಯಿಂದ ಪಡೆದುದು. ಲತೀಫಾನ ತಂದೆ ಒಂದು ಹಡಗದ ಕಂಪನಿಯ ಒಡೆಯನಾಗಿದ್ದು ಧನವಂತನಿದ್ದನು. ಲತೀಫಾನ ಆಚಾರ–ವಿಚಾರಗಳೆಲ್ಲ ಪಾಶ್ಚಾತ್ಯಪದ್ಧತಿಯವು. ಕಮಾಲನನ್ನು ಅವಳು ಮೊದಲನೆಯ ಸಲ ಕಂಡ ರೀತಿಯೆ ಅವಳ ಸ್ವಭಾವದ ದ್ಯೋತಕವಾಗಿದೆ. ಬೆನ್ನಟ್ಟುವ ಕಮಾಲನನ್ನು ತಪ್ಪಿಸಿ ಓಡಿ ಹೋಗುವಾಗ ಗ್ರೀಕರು ದಾರಿಯಲ್ಲಿ ನಗರಗಳನ್ನೂ ಬೆಳೆ–ಬಣಿವೆಗಳನ್ನೂ ಸುಡುತ್ತ ಹೋದರು. ಸ್ಮರ್ನಾ ಪಟ್ಟಣದಲ್ಲಿ ಅವರು ಮಾಡಿದ ಹಾವಳಿ ಬಣ್ಣಿಸಲಸಾಧ್ಯ. ನಿರಪರಾಧಿ ಜನರನ್ನು ಕೊಲ್ಲುವುದು, ಹೆಂಗಸರ ಮೇಲೆ ಬಲಾತ್ಕಾರ ಮಾಡುವುದು, ಪ್ರತಿಯೊಂದು ಮನೆಗೆ ಬೆಂಕಿ ಹಚ್ಚುವುದು–ಅವರ ಸಂತಾಪದ ಆಟವಾಗಿತ್ತು. ಗ್ರೀಕ ಸೈನಿಕರ ಹಿಂದಿನಿಂದಲೆ ಕಮಾಲನೂ ತನ್ನ ಸೈನಿಕರೊಡನೆ ಬಂದನು. ಕಟ್ಟಡಗಳು ಇನ್ನೂ ಭಿಟ್

ಛಿಟಿಲು ಎನುತ್ತ ಸುಡುತ್ತಲಿವೆ, ಹಗಲು ರಾತ್ರಿ ನಿರಾಶ್ರಿತರಾಗಿ ಗೋಳಿಡುವ ಜನಸಮುದಾಯಗಳ ಹಾಹಾಕಾರ, ಕೆಲಸಗಾರರ ಓಡಾಟ— ಹೀಗೆ ಇಡಿಯ ನಗರವೆಲ್ಲ ಗಲಭೆಯಿಂದ ಕ್ಷೋಭಿತವಾಗಿತ್ತು. ಕಮಾಲನು ನಗರದಲ್ಲಿಯೆ ಒಂದು ಕಟ್ಟಡದಲ್ಲಿದ್ದುಕೊಂಡು ತನ್ನ ಕೆಲಸವನ್ನೆಲ್ಲ ನೋಡಿಕೊಳ್ಳುತ್ತಿದ್ದನು. ಆ ಸಮಯದಲ್ಲಿ ಲತೀಫಾ ಆವನ ಕಡೆಗೆ ಬಂದಳು; ಅವನು ಕೆಲಸ ಮಾಡುವಲ್ಲಿ ಹೋಗಿ ಅವನ ಎದುರು ಕುಳಿತಳು. ಕಮಾಲನು ಎರಡೂ ಕಣ್ಣುಗಳನ್ನು ತಿಕ್ಕಿಕೊಂಡು ಮತ್ತೊಮ್ಮೆ ಅವಳನ್ನು ನೋಡಿದನು. ಆದರ–ಅಭಿಮಾನ–ಆಶ್ಚರ್ಯಗಳ ಕೋಲಾಹಲವೆದ್ದಿತು ಆವನ ಹೃದಯದಲ್ಲಿ. ತನ್ನ ದೇಶದ ಯುವತಿ ಆದೆಷ್ಟು ದಿಟ್ಟಳಾಗಿದ್ದಾಳೆ! ಅವಳ ಮುಖದಲ್ಲಿ ಉಚ್ಚ ಶಿಕ್ಷಣದ ಮತ್ತು ಸಂಸ್ಕೃತಿಯ ಕಳೆ ಮಿನುಗುತ್ತಲಿದೆ. ತಾರುಣ್ಯದಲ್ಲಿ ಕಾಲಿಟ್ಟವಳು, ಆದರೆ ಕಪಟಲಜ್ಜೆ ಮೊದಲಾದ ಹೊಯ್ಮಾಲಿತನ ಆವಳಲ್ಲಿಲ್ಲ. ಕೇಳಿದೊಡನೆ ತಡ, ಸ್ಪಷ್ಟವಾಗಿಯೂ ನಿರ್ಭಯವಾಗಿಯೂ ತಾನು ಬಂದ ಕೆಲಸದ ವಿವರವನ್ನು ಹೇಳತೊಡಗಿದಳು. ದೇಶೋದ್ಧಾರಕನಾದ ಕಮಾಲನು ಅವಳ ಆದರ್ಶನಾಗಿದ್ದನು, ಆದರವನ್ನು ಗಳಿಸಿಕೊಂಡಿದ್ದನು. ಈ ರಾಷ್ಟ್ರಪುರುಷನಿಗೆ ಯಾವರೀತಿಯಿಂದಲಾದರೂ ಸೇವೆ ಸಲ್ಲಿಸಬೇಕೆಂಬ ದೃಢನಿಶ್ಚಯದಿಂದ ಅವಳು ಬಂದಿದ್ದಾಳೆ. ಇಡಿಯ ನಗರವೆ ಸುಡುತ್ತಲಿದೆ. ನೋಡಿದಲ್ಲೆಲ್ಲ ಅಲ್ಲೋಲಕಲ್ಲೋಲವಾಗಿ ಕಿಲಕಿಲಾಟ ನಡೆದಿದೆ. ಕಮಾಲನಂತಹ ವೀರನಾಯಕನಿಗೆ ಉಳಿದುಕೊಳ್ಳಲಿಕ್ಕಾಗಲಿ ಮಹತ್ತ್ವದ ಕೆಲಸಗಳನ್ನು ನಡೆಸಲಿಕ್ಕಾಗಲಿ ಬೇಕಾದ ಶಾಂತಿ ಇಲ್ಲಿ ದೊರೆಯುವಂತಿಲ್ಲ. ನಗರದ ಹೊರಗೆ, ಸಮೀಪದಲ್ಲಿ ತನ್ನ ತಂದೆಯದೊಂದು ಭವ್ಯಮಂದಿರವಿದೆ. ಕಮಾಲನು ಅಲ್ಲಿ ಹೋಗಿ ಇದ್ದುಕೊಳ್ಳಬೇಕೆಂದು ಅವಳ ಆಗ್ರಹದ ಬೇಡಿಕೆ. ಈ ತರುಣಿಯನ್ನು ನೋಡಿದಾಕ್ಷಣವೆ ಕಮಾಲನಿಗೆ ಅವಳಿಗಾಗಿ ಆದರ ಹುಟ್ಟಿತು. ಅವಳ ಬೇಡಿಕೆಯನ್ನು ಒಪ್ಪಿಕೊಂಡನು.

ಕಮಾಲನು ತನ್ನ ಮನೆಯಲ್ಲಿ ಬಂದಂದಿನಿಂದ ಲತೀಫಾನು

ಅವನಿಗೆ ಎಲ್ಲ ಸೌಕರ್ಯಗಳನ್ನು ಒದಗಿಸಿ ಕೊಡುವುದರಲ್ಲಿ ಮಗ್ನಳಾಗಿ ಹೋದಳು. ಊಟ–ಉಡಿಗೆ, ಶಿಸ್ತು–ಸ್ವಚ್ಛತೆ ಇವುಗಳಲ್ಲಷ್ಟೆ ಅಲ್ಲದೆ ರಾಷ್ಟ್ರಕಾರ್ಯಗಳಲ್ಲಿ ಕೂಡ ಇವಳ ಸಹಾಯವಾಗತೊಡಗಿತು. ಲತೀಫಾನು ಸುಶಿಕ್ಷಿತಳಲ್ಲದೆ ಸ್ವತಂತ್ರವಿಚಾರದವಳೂ ಆಗಿದ್ದಳು. ಸಾರ್ವಜನಿಕ ವ್ಯವಹಾರದ ಸಮಸ್ಯೆಗಳ ವಿಷಯವಾಗಿ ಕಮಾಲನ ಕೂಡ ಚರ್ಚೆ ನಡೆಸುತ್ತಿದ್ದಳು. ಇದುವರೆಗೆ ಕಮಾಲನು ಇಂತಹ ಸೌಕರ್ಯಗಳನ್ನನುಭವಿಸಿದ್ದಿಲ್ಲ. ಮೊದಲು ಅವಳ ಜಾಣ್ಮೆಗೆ ಮನಸೋತನು, ಆ ಮೇಲೆ ಅವಳ ಸಹಾಯಕ್ಕೆ ಮನಸೋತನು, ಕೊನೆಗೆ ಅವಳಿಗೆಯೆ ಮನಸೋತನು. ಇದನ್ನು ಕಂಡು ಲತೀಫಾನಿಗೆ ಆಶ್ಚರ್ಯವಾಗಿರಬಹುದು. ಕಮಾಲನು ಆದರ್ಶಪುರುಷನು, ಗುರುಸಮಾನನು ಎಂಬ ಆದರಬುದ್ಧಿಯಿಂದಲೆ ಅವಳು ತನ್ನ ಸೇವೆಯನ್ನು ಸಲ್ಲಿಸುತ್ತಿದ್ದಳು; ಇಂತಹ ಕಮಾಲನು ತನ್ನ ಪ್ರಣಯಪುರುಷನಾಗಬಹುದೆಂದು ಅವಳು ಕನಸು–ಮನಸುಗಳಲ್ಲಿ ಕಂಡಿರಲಿಲ್ಲ. ಇದಲ್ಲದೆ ಕಮಾಲನು ವಯಸ್ಸಿನಿಂದ ಬಹಳೇ ಹಿರಿಯನಾಗಿದ್ದನು. ಆದರೂ ಲತೀಫಾನು ಹೆದರಲಿಲ್ಲ; ಯಾಕೆಂದರೆ, ಒಳಗಿಂದೊಳಗೆ ಅವಳಿಗೆ ಕಮಾಲನಲ್ಲಿ ಪ್ರೇಮವೂ ಇದ್ದಿತು. ಆದಕ್ಕಾಗಿ ಕಮಾಲನನ್ನು ಮದುವೆಯಾಗಲು ಒಪ್ಪಿಕೊಂಡಳು. 'ಮದಿವೆ' ಎಂಬ ಶಬ್ದವನ್ನು ಕೇಳಿದೊಡನೆಯೆ ಕಮಾಲನ ಕಣ್ಣುಗಳೇ ಕೆಂಪೇರಿದುವು. ತಾನು ದೇಶಕಾರ್ಯಕ್ಕಾಗಿ ತನ್ನ ದೇಹವನ್ನು ಮೀಸಲಿಟ್ಟವನು, ಮದಿವೆಯಾಗಿ ಯಾವ ಸ್ತ್ರೀಯೂ ಆ ದೇಹದ ಒಡೆತನವನ್ನು ಗಳಿಸಲಾರಳು, ಗಳಿಸಗೊಡಲಿಕ್ಕಿಲ್ಲ ಎಂಬ ವಿಚಾರ ಕಮಾಲನದು. ಇದಲ್ಲದೆ ಅವನ ಮನೋವೃತ್ತಿಗೆ 'ಮದಿವೆ' ಎಂಬ ಮಾತು ಒಪ್ಪುವಂತಿರಲಿಲ್ಲ. ಮಿಕ್ಕ ಹಿಂದುಳಿದ ಸಮಾಜಗಳಲ್ಲಿದ್ದಂತೆ ತುರ್ಕಸ್ಥಾನದಲ್ಲಾದರೂ ಮದಿವೆ ಎಂದರೆ ಒಂದು ಧಾರ್ಮಿಕ ವಿಧಿಯಾಗಿತ್ತು; ಸಮಾಜನೀತಿಯಾಗಿರಬೇಕಾದ ವಿವಾಹವು ಧರ್ಮದ ರೀತಿಯಾಗಿತ್ತು. ಹಳೆಬರು ಹಾಕಿಕೊಟ್ಟ ಈ ಮೂಢ ಪದ್ಧತಿ ಅವನ ಕ್ರಾಂತಿಕಾರಕ ಮನಸಿಗೆ ಒಪ್ಪಲಿಲ್ಲ.

'ನಮ್ಮಿಬ್ಬರ ಪರಸ್ಪರ ಅಭಿವಚನಗಳೆ ಸಾಲವೆ? ಕಾಝಿಗಳ

ಗೊಣಗ್ಗುಗಳ ಗಲಭೆಯಲ್ಲಿ ನಡೆದರೆ ನಿನಗೆ ಸಮಾಧಾನವೆ?. ನನಗೆ ನೀನು ಬೇಕು, ಈ ಗೊಡ್ಡು ಮದಿವೆ ಬೇಡ' ಎಂದನು.

'ನನಗೆ ನೀನೂ ಬೇಕು, ಮದಿವೆಯೂ ಬೇಕು' ಎಂದು ಉತ್ತರ ಕೊಟ್ಟಳು ಲತೀಫಾ!

ಆ ಮಾತು ಅಲ್ಲಿಗೆ ತಡೆಯಿತು. ಕಮಾಲನಿಗೆ ಅಸಮಾಧಾನವಾಯಿತೇನೊ? ಬೇಕಾದುದನ್ನು ಬರಮಾಡಿಕೊಂಡೇ ತೀರುವ ಅವನ ಇದುವರೆಗಿನ ಹಟಮಾರಿ ಸ್ವಭಾವಕ್ಕೆ ಅಪಮಾನವೆನಿಸಿತೇನೊ? ಕಾರ್ಯದ ಒತ್ತಾಯದಲ್ಲಿ ಪ್ರೇಮದ ಒತ್ತಾಯವನ್ನು ಮರೆತುಬಿಟ್ಟನು. ಆದರೆ ಲತೀಫಾನು ಮಾತ್ರ ಅವನ ಸಹವಾಸವನ್ನು ಬಿಡಲಿಲ್ಲ. ಸ್ವಾತಂತ್ರ್ಯದ ಇತಿಹಾಸವು ಅವಳ ಮನಸ್ಸನ್ನು ಸೆಳೆದಿತ್ತು. ಈಗ ಅವಳು ಕಮಾಲನ ಖಾಸಗೀ ಕಾರ್ಯದರ್ಶಿಯಾದಳು. ರಾಜಕಾರಣದ ವಿಷಯಗಳಲ್ಲಿ, ಆಲೋಚನಾ–ಸಭೆಗಳಲ್ಲಿ ಮುಂದುಮುಂದಾಗಿ ಮಾತಾಡಿ ಮುಖ್ಯಭಾಗವನ್ನು ವಹಿಸಿದಳು. ನವಚೈತನ್ಯದಿಂದ ತೊಳಗುವ ತುರ್ಕಸ್ತಾನದ ನವಸ್ತ್ರೀತ್ವ–ಉದಯದ ಉಷೆಯಂತಾದಳು. ಕೊನೆಗೆ ಕಮಾಲನು ಸೋತನು; ಇಡಿಯ ಜೀವನದಲ್ಲಿ ಅವನು ಸೋತುದು ಇದೊಂದೇ ಸಲ. ಲತೀಫಾನ ಹೇಳಿಕೆಯಂತೆ ಅವಳನ್ನು ಮದುವೆಯಾದನು.

ಲತೀಫಾನು ಸ್ವತಂತ್ರವಿಚಾರದವಳೆಂದು ಮೊದಲೇ ಹೇಳಿದೆ. ಅವಳ ಈ ಗುಣವು ಹೊಸಸಂಸಾರದ ಸುಖಕ್ಕೆ ಸಾಧನವಾಗುವಂತಿರಲಿಲ್ಲ. ಕಮಾಲನೂ ಸ್ವತಂತ್ರವಿಚಾರದವನು. ಒಂದೇ ಮನೆಯಲ್ಲಿ ಇಬ್ಬರು ಸ್ವತಂತ್ರವಿಚಾರದವರು. ಒಬ್ಬರೊಡನೊಬ್ಬರು ಮತಭೇದವನ್ನು ತೋರಿಸುವ ಸ್ವಾತಂತ್ರ್ಯವೆ ಇಬ್ಬರಿಗೂ ಹೆಚ್ಚಾಗಿ ಉಳಿಯಿತು. ಇಬ್ಬರ ಸ್ವಭಾವವೂ ಇನ್ನೊಬ್ಬರ ಅಧೀನವಾಗಿರುವಂತಹದಲ್ಲ. ಇಬ್ಬರೂ ವಿಚಾರಧೀರರು; ಮನಸಿನ ಮಾತುಗಳನ್ನು ಮುಚ್ಚಿಟ್ಟು ಮುದ್ದುಮಾತುಗಳನ್ನಾಡಿ ಮೋಸಹೋಗುವುದು ಇಬ್ಬರಿಗೂ ಸೇರುತ್ತಿರಲಿಲ್ಲ. ಇಬ್ಬರೂ

ಹಟವಮಾರಿಗಳೆ! ಸಾಕಲ್ಲವೆ ಇಷ್ಟು ಸಂಸಾರವನ್ನು ಕೆಡಿಸಲಿಕ್ಕೆ? ದಿನ ದಿನಕ್ಕೆ ಕಲಹದ ಪ್ರಸಂಗಗಳೆ ಹೆಚ್ಚಾಗತೊಡಗಿದುವು. ಹೀಗೆಯೆ ನಡೆದರೆ ಒಬ್ಬರೊಬ್ಬರ ವಿಷಯವಾಗಿ ದ್ವೇಷ ಬೆಳೆಯುವದು ಖಂಡಿತ. ಆದರೆ ಕಮಾಲನಿಗೆ ಲತೀಫಾಸ ವಿಷಯವಾಗಿ, ಲತೀಫಾನಿಗೆ ಕಮಾಲಸ ವಿಷಯ ವಾಗಿ ದ್ವೇಷವಿದ್ದಿರಲಿಲ್ಲ. ಹೀಗಿರುವಾಗ ದ್ವೇಷವನ್ನು ಬೆಳೆಯಗೊಟ್ಟರೆ ಲತೀಫಾನ ಬುದ್ಧಿಮತ್ತೆಯ ಸಹಾಯ ತಪ್ಪುವುದು, ಕಮಾಲನ ಮನಃಸ್ಥಿತಿ ಕೆಡುವುದು; ಹೀಗಾದರೆ ದೇಶಕಾರ್ಯಕ್ಕೆ ವಿಘ್ನ ಬಂದಂತಾ ಗುವುದು, ಇದು ಮೂರ್ಖತನವೆ ಸರಿ ಎನಿಸಿತು ಇಬ್ಬರಿಗೂ. ಕೊನೆಗೆ ಒಂದು ದಿನ ಕಮಾಲನು ಸ್ವತಃ ವಿವಾಹವಿಚ್ಛೇದದ ವ್ಯವಸ್ಥೆಯನ್ನು ಮಾಡಿದನು. ರಾಷ್ಟ್ರದ ತಂದೆಗೆ ಸ್ವತಃ ಸಂಸಾರವೆ ನಡೆಯುವಂತಿರಲಿಲ್ಲ. ಕಮಾಲನಿಗೆ ಸ್ವತಃದ ಸಂಸಾರದ ಮಹತ್ತ್ವವೂ ಇದ್ದಿರಲಿಲ್ಲ. ಅವನ ದೃಷ್ಟಿಯಿಂದ ಲತೀಫಾನಂತಹ ಮಹಿಳೆಯರ ಮಹತ್ತ್ವವು ಮತ್ತು ಆವಶ್ಯಕತೆಯು ರಾಷ್ಟ್ರಕ್ಕಿದ್ದಿತು. ಲತೀಫಾನನ್ನು ಕಂಡಂದಿನಿಂದ ಕಮಾಲನಿಗೆ ಸ್ತ್ರೀಶಿಕ್ಷಣ, ಸ್ತ್ರೀಸ್ವಾತಂತ್ರ್ಯ ಮೊದಲಾದವುಗಳ ಮಹ ತ್ತ್ವವು ಕಂಡು ಬಂದಿರಬೇಕು. ರಾಷ್ಟ್ರಜೀವನದ ಸುಧಾರಣೆಯ ಪ್ರಯತ್ನಗಳಲ್ಲಿ, ಸ್ತ್ರೀಯರನ್ನು ಸಮಸ್ವಾತಂತ್ರ್ಯದ ತಳಹದಿಯ ಮೇಲೆ ನಿಲ್ಲಿಸುವ ಪ್ರಯತ್ನದಲ್ಲಿ ಲತೀಫಾನಿಂದ ಕಮಾಲನ ಮೇಲೆ ಎಷ್ಟೋ ಪರಿಣಾಮವಾಗಿರಬಹುದು. ಅದೇ ಅವನ ಸುಖವಲ್ಲವೆ? ಕಮಾಲನೆಂಬ ವ್ಯಕ್ತಿಗೆ ಸಂಸಾರವಿದ್ದರಲ್ಲವೆ ಆ ಸಂಸಾರಸುಖಕ್ಕಾಗಿ ಯತ್ನಿಸುವುದು? ಆದರೆ ಕಮಾಲನು ತನಗಾಗಿ ಬಾಳುವ ವ್ಯಕ್ತಿಯಲ್ಲ. ಅವನು ರಾಷ್ಟ್ರ ಪತಿ, ರಾಷ್ಟ್ರಪುರುಷ.

* * * *

ಇಸ್ಮೆತ್–ಲತೀಫಾ–ಆರೀಫ ಇವರು ಸತ್ವ, ರಜಸ್, ತಮಸ್ ಎಂಬ ಮೂರು ಗುಣಗಳು. ಇವರಂತಹರನ್ನೊಳಗೊಂಡ ದೇಶವೆ

ಪ್ರಧಾನ. ಕಮಾಲನು ಪುರುಷ. ಈ ತ್ರಿಗುಣಾತ್ಮಕಪ್ರಧಾನವು ಪುರುಷನೊಡನೆ ಬೆರೆತುದರಿಂದ ನವೀನಸೃಷ್ಟಿಯಾಯಿತು.

---

# ವಿರಾಟಪುರುಷ

ಇಂದಿನ ರಾಜಕೀಯ ಜಗತ್ತಿನಲ್ಲಿ ಎರಡು ಸಂಗತಿಗಳನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾಗಿದೆ: ಒಂದು, ತತ್ತ್ವದಲ್ಲಿ ವ್ಯಕ್ತಿಸ್ವಾತಂತ್ರ್ಯವು ಸರ್ವಸಮ್ಮತವಾಗಿದೆ; ಇನ್ನೊಂದು, ವ್ಯವಹಾರದಲ್ಲಿ ವ್ಯಕ್ತಿಪಾರತಂತ್ರ್ಯವು ರೂಢವಾಗಿದೆ. ಇವೆರಡು ಸಂಗತಿಗಳು ಪರಸ್ಪರ ಅತ್ಯಂತ ವಿರುದ್ಧವಾಗಿವೆ ಎಂಬುದೇನೊ ನಿಜ. ಆದರೆ ಸ್ಟಾಲಿನ (ರಶಿಯಾ), ರೂಝ್ವೆಲ್ಟ (ಅಮೇರಿಕ), ಮುಸೋಲಿನಿ (ಇಟಲಿ), ಹಿಟ್ಲರ್ (ಜರ್ಮನಿ ಮತ್ತು ಆಸ್ಟ್ರಿಯಾ), ಫ್ರಾಂಕೊ (ಸ್ಪೇನದ ಅರ್ಧಭಾಗ), ಕಮಾಲಪಾಶಾ (ತುರ್ಕಸ್ಥಾನ), ಮಹಾತ್ಮಾಗಾಂಧಿ (ಹಿಂದುಸ್ಥಾನ) ಮೊದಲಾದವರ ಚರಿತ್ರೆಗಳನ್ನು ನೋಡಿದರೆ ಜಗತ್ತಿನ ಅರ್ಧಕ್ಕಿಂತ ಹೆಚ್ಚು ಭಾಗದಲ್ಲಿ ಪ್ರಜಾಸತ್ತಾತ್ಮಕತೆ (democratic government) ಗಿಂತ ಪ್ರಭುಸರ್ವಾತ್ಮಕತೆಯೆ (totalitarian government) ನೆಲೆಗೊಂಡಿದೆ ಎಂದು ಒಪ್ಪಬೇಕಾಗುವುದು. ಈ ವಿರೋಧಾತ್ಮಕತೆಯ ಗೂಢವೇನು? ಪ್ರಜಾಸತ್ತಾತ್ಮಕತೆಯು ಹಳೆಯ ಮಾತೇ ಆಯಿತೆಂದು ಹೇಳಬೇಕೆ? ಇನ್ನು ಮುಂದೆ ರಾಜಕಾರಣದಲ್ಲಿ ಪ್ರಭುಸರ್ವಾತ್ಮಕತೆಯೆ ರೂಢವಾಗುವುದೆಂದು ಹೇಳಬೇಕೆ?

ತತ್ತ್ವವಿಶಾರದರಲ್ಲಿ ಭಿನ್ನಾಭಿಪ್ರಾಯವುಂಟು. ಪ್ರಜಾಸತ್ತಾತ್ಮಕತೆಯು ಇಂದಿನ ವ್ಯವಹಾರಕ್ಕೆ ಅಯೋಗ್ಯವೆಂದು ಹೇಳುವ ಅನೇಕ ವಿದ್ವಾಂಸರಿದ್ದಾರೆ. ಪ್ರಜಾಸತ್ತಾತ್ಮಕತೆಯ ತತ್ತ್ವವು ಪ್ರಜಾಪ್ರತಿನಿಧಿತ್ವ (representative government) ದ ತಳಹದಿಯ ಮೇಲೆ ನಿಂತಿದೆ. ಪ್ರಜೆಗಳು ತಮ್ಮ ಪ್ರತಿನಿಧಿಗಳನ್ನಾರಿಸುವರು. ಈ ಪ್ರತಿನಿಧಿಗಳು ಒಂದುಗೂಡಿ ಶಾಸನ-ಸಭೆಯಾಗುವುದು. ದೇಶದ ಆಡಳಿತದ ಸ್ವಾಮ್ಯವೆಲ್ಲ ಈ ಶಾಸನಸಭೆಯ ಕೈಯೊಳಗಿರತಕ್ಕುದು. ಈ ಪದ್ಧತಿಯಲ್ಲಿ ಎರಡು

ಮಹತ್ತ್ವದ ದೋಷಗಳಿವೆ. ಒಂದು, ಪ್ರತಿನಿಧಿಗೆ ವ್ಯವಹಾರದ ಮತ್ತು ಆಡಳಿತದ ಜ್ಞಾನಯೋಗ್ಯತೆ ಇರಬೇಕೆಂಬ ನಿಯಮವಿಲ್ಲ. ವ್ಯಕ್ತಿ ಸ್ವಾತಂತ್ರ್ಯದ ತತ್ತ್ವಕ್ಕನುಸರಿಸಿ ಯಾವನು ಮತದಾರನಿರುವನೊ ಅವನಿಗೆ ಪ್ರತಿನಿಧಿಯಾಗುವ ಯೋಗ್ಯತೆ ಇದೆ. ಆದರೆ ಇಂದಿನ ವ್ಯವಹಾರ ವಾಗಲಿ ಆಡಳಿತವಾಗಲಿ ಕ್ಲಿಷ್ಟವಿಷಯಗಳ ಜ್ಞಾನವನ್ನೊಳಗೊಂಡಿವೆ. ಆರೋಗ್ಯ, ಶಿಕ್ಷಣ, ಸಂರಕ್ಷಣೆ, ಯುದ್ಧಸಾಮಗ್ರಿ, ವಿದ್ಯುದುದ್ಯೋಗ, ಯಂತ್ರಶಕ್ತಿಯ ಪ್ರಭುತ್ವ ಮುಂತಾದ ವಿಷಯಗಳೆಲ್ಲವೂ ಇಂದು ಸರಕಾರದ ಅಧೀನವಾಗಿವೆ. ಈ ಅನೇಕ ವಿಷಯಗಳ ಜ್ಞಾನವಿಲ್ಲದ ಪ್ರತಿನಿಧಿಯು ಇವುಗಳ ಆಡಳಿತದಲ್ಲಿ ಎಷ್ಟರಮಟ್ಟಿಗೆ ಸಹಾಯಕನಾಗ ಬಹುದು? ಸಾಮಾನ್ಯವಾಗಿ ಇಲ್ಲವೇ ಇಲ್ಲ ಎಂದು ಹೇಳಬಹುದು. ಆಡಳಿತಕ್ಕೆ ಬೇಕಾದ ತಜ್ಞತೆ ( specialist's knowledge ) ಗೂ ಪ್ರತಿನಿಧಿ ಗಿರುವ ಅಜ್ಞತೆಗೂ ಹೊಂದಿಕೆ ಇಲ್ಲದಿರುವುದು ಮೊದಲನೆಯ ದೋಷ. ಎರಡನೆಯ ದೋಷವೆಂದರೆ, ಪಕ್ಷ–ಪದ್ಧತಿ ( party system ). ಪ್ರತಿ ಯೊಬ್ಬ ಪ್ರತಿನಿಧಿಗೆ ವ್ಯಕ್ತಿ–ವಿಚಾರ–ಸ್ವಾತಂತ್ರ್ಯವಿದ್ದರೆ ಶಾಸನಸಭೆಯು ಕೇವಲ ಹರಟೆಯ ಕಟ್ಟೆಯಾಗುವುದು. ಆದರೆ ಅನೇಕ ಪ್ರತಿನಿಧಿಗಳು ತಂತಮ್ಮೊಳಗೆ ಹೊಂದಿಕೆಯಾಗುವ ವಿಚಾರಗಳಿಗನುಸರಿಸಿ ತಮ್ಮದೊಂದು ಗುಂಪನ್ನೂ ಆ ಗುಂಪಿಗೊಬ್ಬ ನಾಯಕನನ್ನೂ ಗೊತ್ತುಮಾಡಿಕೊಳ್ಳು ತ್ತಾರೆ. ಆದರೆ ಬಹುಮತಕ್ಕೆಯೆ ಅಧಿಕಾರದ ಹಕ್ಕು ಇದ್ದ ಕಾಲದಲ್ಲಿ ಗುಂಪು ಅವ್ಯವಸ್ಥೆಯ ಕಾರಣವಾಗುತ್ತಿದೆ. ಉದಾಹರಣಾರ್ಥವಾಗಿ ಫ್ರಾನ್ಸದೇಶದ ಶಾಸನಸಭೆಯಲ್ಲಿ ಅನೇಕ ಗುಂಪುಗಳಿವೆ. ಬೇರೆ ಬೇರೆ ಗುಂಪುಗಳು ಕೂಡದೆ ಬಹುಮತದ ಪಕ್ಷವೆ ಸಿದ್ಧವಾಗುವುದಿಲ್ಲ. ಒಂದೇ ಗುಂಪಿನ ಸದಸ್ಯರಲ್ಲಿದ್ದ ವಿಚಾರಸಾಮ್ಯವು ಗುಂಪು–ಗುಂಪುಗಳ ನಡುವೆ ಇರುವುದು ಶಕ್ಯವಿಲ್ಲ. ಹೀಗಾಗಿ ಗುಬ್ಬಿಗೂಡಿನ ಸರಕಾರವೆ ಸಿದ್ಧವಾಗ ಬೇಕಾಗುವುದು. ಅಲ್ಲಿ–ಇಲ್ಲಿ ಅನೇಕ ಕಡೆಯಿಂದ ಕಸ–ಕಡ್ಡಿಗಳನ್ನು ಕೂಡಿಸಿ ಗುಬ್ಬಿಯು ತನ್ನ ಗೂಡನ್ನು ಕಟ್ಟುವುದು. ಕಸವು ಕಸದಲ್ಲಿ ಸೇರಿದ ಮೇಲೆ, ಕಡ್ಡಿಗಳು ಗಾಳಿಗೆ ತೂರಿಹೋದಮೇಲೆ ಮುಗಿಯಿತು

ಗೂಡಿನ ಕತೆ. ಆ ಮೇಲೆ ಮತ್ತೊಂದು ಗೂಡು. ಅದರಂತೆಯೆ ಗುಂಪು-ಗುಂಪು ಕೂಡಿ ಒಂದು ಬಹುಮತದ ಸರಕಾರ; ಇಷ್ಟರಲ್ಲಿ ಒಂದು ಗುಂಪಿಗೆ ಇನ್ನೊಂದು ಗುಂಪಿಗಾಗಿ ಸಲಿಗೆಯಾಗಲಿ ಸ್ವಾವಮ್ಯವಾಗಲಿ ಇರದ್ದರಿಂದ ವಿಚಾರಭೇದವಾಗಿ ಸರಕಾರವು ಸಡಿಲಾಗುವುದು. ಆ ಮೇಲೆ ಇನ್ನಿತರ ಗುಂಪುಗಳ ಗೂಡು. ಹೀಗೆ ಗುಬ್ಬಿಗೂಡಿನ ( coalition ) ಸರಕಾರ ಪದ್ಧತಿಯಿಂದ ಫ್ರಾನ್ಸದಲ್ಲಿ ಯಾವ ಸರಕಾರವೂ ಆರು ತಿಂಗಳ ಮೇಲೆ ಬಾಳಿಲ್ಲ. ಎಷ್ಟೋ ಸರಕಾರಗಳು ( ministry ) ಒಡವನ ವಿಚಾರದಂತೆ ಹುಟ್ಟಿದ ಕೂಡಲೆ ಕಮರಿಹೋದುದುಂಟು. ಈ ಪದ್ಧತಿಯಿಂದ ಆಡಳಿತಕ್ಕೆ ಶಾಶ್ವತತೆಯಾಗಲಿ ಸುಧಾರಣೆಯಾಗಲಿ ಬರುವುದು ಹೇಗೆ? ಇದಲ್ಲದೆ ಶಾಸನಸಭೆಯಲ್ಲಿ ಬಹುಮತವಿದ್ದ ಪಕ್ಷ ( party ) ಕ್ಕೆ ದೇಶದಲ್ಲೂ ಬಹುಮತವಿದೆ ಎಂದು ಎಷ್ಟೋಸಲ ಹೇಳಲಿಕ್ಕಾಗುವುದಿಲ್ಲ. ಇಂಗ್ಲಂಡದಲ್ಲಿ ಸನಾತನ, ಉದಾರಮತವಾದಿ ಮತ್ತು ಕೂಲಿಕಾರ ಎಂಬ ಮೂರು ಪಕ್ಷಗಳಿವೆ. ಚುನಾವಣೆಯಲ್ಲಿ ಕೊನೆಯ ಎರಡು ಪಕ್ಷಗಳಿಗೆ ಕೂಡಿ ಸನಾತನ ಪಕ್ಷಕ್ಕಿಂತ ಹತ್ತುಸಾವಿರ ಗಟ್ಲೆ ಹೆಚ್ಚು ಮತಗಳು ಬಿದ್ದಿದ್ದುವು. ಆದರೂ ಶಾಸನ ಸಭೆಯಲ್ಲಿ ಸನಾತನಪಕ್ಷವೊಂದಕ್ಕೇ ಮಿಕ್ಕ ಎರಡೂ ಪಕ್ಷಗಳಿಗಿಂತ ( ಇವೆರಡನ್ನೂ ಕೂಡಿಸಿದರೆ ಅದಕ್ಕಿಂತಲೂ ) ಹೆಚ್ಚು ಪ್ರತಿನಿಧಿಗಳು ದೊರೆತಿದ್ದರು; ಎಂದರೆ, ಅಲ್ಪಸಂಖ್ಯಾಕರಾದ ಸನಾತನಪಕ್ಷೀಯರ ಸರಕಾರವು ಬಹುಮತದ ವಿರುದ್ಧವಾಗಿ ದೇಶವನ್ನು ಆಳುತ್ತಿದ್ದಿತು! ಇಂತಹ ಉದಾಹರಣೆಗಳೆ ಎಲ್ಲಕಡೆ ಕಂಡು ಬಾರದಿದ್ದರೂ ಇನ್ನೊಂದು ತರದಿಂದ ಪ್ರಜಾಸತ್ತಾತ್ಮಕತೆಯಲ್ಲಿ ಅನ್ಯಾಯವು ಅಡಕವಾದಂತೆ ಕಂಡುಬರುವುದು; ಅದೆಂದರೆ, ಅಲ್ಪಸಂಖ್ಯಾಕರಿಗೆ ಭದ್ರತೆಯೆ ಇಲ್ಲದಂತಾಗುವುದು. ಹಿಂದುಸ್ತಾನದ ಸದ್ಯದ ಪರಿಸ್ಥಿತಿಯ ಉದಾಹರಣೆಯನ್ನೆ ನೋಡಬಹುದು. ರಾಷ್ಟ್ರೀಯ ಸಂಸ್ಥೆಯಲ್ಲದೆ ಹಿಂದು ಮಹಾಸಭೆ, ಮುಹಮ್ಮದೀಯ ಸಂಘಟನೆ (Muslim League ) ಮುಂತಾದ ಪಕ್ಷಗಳು ನಮ್ಮಲ್ಲಿವೆ. ಆ ಪಕ್ಷಗಳು ಬೇಕೊ ಬೇಡವೊ ಎಂಬುದು ಈ ಚರ್ಚೆಗೆ ಅಪ್ರಸ್ತುತ. ಆ ಪಕ್ಷಗಳ ಸದಸ್ಯತ್ವವು

ಇಡಿಯ ಹಿಂದುಸ್ಥಾನವನ್ನೆಲ್ಲ ವ್ಯಾಪಿಸಿದ್ದೂ ಆ ಪಕ್ಷಕ್ಕೆ ಹತ್ತುಸಾವಿರ ಗಟ್ಟಲೆಯಾಗಿ ಜನತೆಯ ಬೆಂಬಲವಿದ್ದೂ ಇಂದು ಅಲ್ಪಸಂಖ್ಯಾಕರಾಗಿ ಅವರು ಅಸಹಾಯರಂತಿದ್ದುದು ವಸ್ತುಸ್ಥಿತಿ. ಬಹುಮತವಿದ್ದರೆ ಮಾತ್ರ ನ್ಯಾಯವಾಗಲಿ ಅಧಿಕಾರವಾಗಲಿ ದೊರಕುವುದೆಂಬ ತತ್ತ್ವದಲ್ಲಿ ಬಹುಮತವನ್ನು ದೊರಕಿಸಲು ಬೇಕಾದಂತೆ ನಡೆಯುವ, ಬೇಕಾದ್ದನ್ನು ಮಾಡುವ 'ಬೇಜವಾಬದಾರ' ಪ್ರವೃತ್ತಿಗೆ ಪುಟವನ್ನು ಕೊಟ್ಟಂತಾಗುವುದು. ಮತ್ತು ಯಾವಾಗಲೂ ಜ್ವಾಲಾಮುಖಿಯಂತೆ ಅಲ್ಪಸಂಖ್ಯಾಕರ ಅಸಂತೋಷವು ಕುದಿಯುವಂತಹ ಪರಿಸ್ಥಿತಿ ಪ್ರಾಪ್ತವಾಗುವುದು. ಕೊನೆಯದಾಗಿ, ಪ್ರಜಾಸತ್ತಾತ್ಮಕ ಪದ್ಧತಿಯಲ್ಲಿ ಒತ್ತರದ ಕಾರ್ಯವನ್ನು ಮಾಡುವುದು ಶಕ್ಯವೆ ಇಲ್ಲ ಎಂದು ಹೇಳಲಾಗುವುದು. ಪ್ರತಿಯೊಂದು ಕಾರ್ಯಕ್ಕೆ ಶಾಸನಸಭೆಯ ಸಮ್ಮತಿ ಬೇಕು; ಅರಿತವರೂ ಅರಿಯದವರೂ ಪ್ರತಿನಿಧಿಗಳಾದ ನಿಮಿತ್ತಕ್ಕೆ ಪ್ರತಿಯೊಂದು ಕಾರ್ಯದ ವಿಷಯವಾಗಿ ತಮ್ಮ ಅಭಿಪ್ರಾಯವನ್ನು ಭಾಷಣ-ರೂಪದಿಂದ ವ್ಯಕ್ತಗೊಳಿಸಬೇಕು. ಹೀಗೆ ವೇಳೆಯ ಪರಿವೆ ಇಲ್ಲದೆ ಚರ್ಚೆಯಾಗಬೇಕು; ಕೊನೆಗೆ ಸಾಮಾನ್ಯರಿಂದಲೆ ತುಂಬಿದಂತಹ ಶಾಸನಸಭೆಯಲ್ಲಿ ಮತಗಣನೆಯಾಗಬೇಕು—ಇಲ್ಲವೆ, ತಜ್ಞರ ಉಪಸಮಿತಿಯೊಂದನ್ನು ಗೊತ್ತುಪಡಿಸಿ ಅದರ ವರದಿಯ ದಾರಿಯನ್ನು ಕಾಯುತ್ತ ಕೂಡ್ರಬೇಕು. ಯಾವುದೆ ಒಂದು ಲೋಕೋಪಯುಕ್ತ ಕಾನೂನು ಸ್ವೀಕೃತವಾಗಬೇಕಾದರೆ ಸರಾಸರಿ ಆರರಿಂದ ಒಂಬತ್ತು ತಿಂಗಳ ಅವಧಿ ಬೇಕಾಗುವುದೆಂದು ಲೆಕ್ಕ ಹಾಕಲಾಗಿದೆ. ಸರಕಾರದ (ಎಂದರೆ ಬಹುಮತಪದ್ದವರ) ವತಿಯಿಂದ ಮಂಡಿಸುವ ಕಾನೂನಿನ ಹಣೆಬರೆಹವಿದು. ಇನ್ನು ವೈಯಕ್ತಿಕವಾಗಿ ಸಭಿಕರು ಮಂಡಿಸಿದ ಕಾನೂನು ಮುಂದಿನ ಪೀಳಿಗೆಯ ಕಾಲಕ್ಕಾದರೂ ಸ್ವೀಕೃತವಾಗಬಹುದೆ—ಎಂದು ಸಂಶಯ. ಹೀಗೆ (೧) ಅಜ್ಞರ ಆಳಿಕೆ, (೨) ಬಹುಮತದ ಅನ್ಯಾಯ ಮತ್ತು ಅಲ್ಪಸಂಖ್ಯಾಕರ ಅಸಂತೋಷ, ಮತ್ತು (೩) ಕಾರ್ಯದ ಕೂರ್ಮಗತಿ—ಈ ದೋಷಗಳಿಗಾಗಿ ಪ್ರಜಾಸತ್ತಾತ್ಮಕತೆಯು ಇಂದಿನ ವ್ಯವಹಾರಕ್ಕೆ ಹೊಂದುವುದಿಲ್ಲ ಎಂಬುದೊಂದು ಪೂರ್ವಪಕ್ಷ.

ಮೇಲೆ ಕಾಣಿಸಿದ ದೋಷಗಳು ಪ್ರಭುಸರ್ವಾತ್ಮಕತೆಯಲ್ಲಿ ಕಂಡು ಬರುವುದಿಲ್ಲವಂತೆ. ಮೊದಲನೆಯ ಮಾತೆಂದರೆ ಆಳಿಕೆಯು ಒಂದೇ ವ್ಯಕ್ತಿಯ ಕೈಯಲ್ಲಿರುವುದು. ಈ ವ್ಯಕ್ತಿಯು ದೇಶಕ್ಕೆ ಸರ್ವಸಮ್ಮತನಾದ, ಸರ್ವಜ್ಞನಾದ ನಾಯಕ. ಮಹಾತ್ಮಾ ಗಾಂಧಿಯವರಿಗೆ ಮೀರಿದ ವಿಷಯವು ಯಾವುದೂ ಇಲ್ಲವೆಂದು ನಾವು ತಿಳಿವಂತೆ ಕಮಾಲ ಪಾಶಾ ಇವರ ವಿಷಯವಾಗಿ ತುರ್ಕೀಯರೂ, ಹಿಟ್ಲರರ ವಿಷಯವಾಗಿ ಜರ್ಮನರೂ, ಮುಸೋಲಿನಿಯವರ ವಿಷಯವಾಗಿ ಇಟಲಿಯವರೂ ತಿಳಿಯುತ್ತಾರೆ. ಸಂತಾನ-ಸಂಯಮವೆ ಆಗಲಿ, ಶಿಕ್ಷಣಸುಧಾರಣೆಯೆ ಆಗಲಿ, ರಾಜಕೀಯ ಕೈದಿಗಳ ಬಿಡುಗಡೆಯೆ ಆಗಲಿ-ಮಹಾತ್ಮರು ಹೇಳಿದರೆಂದರೆ ಶಾಸನಸಭೆಯಲ್ಲಿ ಕಾನೂನು ಗೊತ್ತಾದಂತೆಯೆ. ಎಲ್ಲರಿಗೂ ಬೇಕೆನಿಸಿ, ಸ್ವತಃಕ್ಕೆ ಸರ್ವಜ್ಞನೆನಿಸಿದ ನಾಯಕನೊಬ್ಬನು ದೊರೆತರೆ ಸಾಮಾನ್ಯನಿಗೆ ಸಂತೋಷವೆ ಇದೆಯಲ್ಲವೆ? ಇದಲ್ಲದೆ ದೇಶದ ನಾಯಕನೆನಿಸಿದ ಮೇಲೆ ಈ ವ್ಯಕ್ತಿಯು ಯಾವುದೊಂದು ಪಕ್ಷವನ್ನು ಕಟ್ಟಿಕೊಳ್ಳುವುದಿಲ್ಲ. ಇಂದು ಮಹಾತ್ಮರು ಕಾಂಗ್ರೆಸಿನ ಸದಸ್ಯರಲ್ಲ, ಆದಕಾಗಿ ಅವರು ಮುಸಲ್ಮಾನರ ಪರವಾಗಿಯೂ ಮಾತನಾಡುವ ಅಧಿಕಾರ ತಮಗಿದೆ—ಇಷ್ಟೇಕೆ?—ಎಲ್ಲ ಪಂಗಡಗಳ ಹಿತವನ್ನು ಮಾಡುವುದು ಪಕ್ಷಾತೀತರಾದ ತಮಗೆಯೆ ಸಾಧ್ಯವಿದೆ, ಯುಕ್ತವಿದೆ ಎಂದು ತಿಳಿಯುತ್ತಾರೆ. ಕಮಾಲ ಪಾಶಾ ಅವರಾದರೂ ಇಡಿಯ ದೇಶವೆ ಒಂದು ಪಕ್ಷ, ಅದೇ ತಮ್ಮ ಪಕ್ಷ ಎಂದುದನ್ನು ಹಿಂದೆ ತೋರಿಸಿದ್ದೇವೆ. ಬಂಡವಳಗಾರರಾಗಲಿ, ಕೂಲಿಕಾರರಾಗಲಿ, ಎಲ್ಲರ ಹಿತವನ್ನು ನಾನೇ ನೋಡಬಲ್ಲೆ ಎಂದು ಮುಸೋಲಿನಿ ಹೇಳುತ್ತಾರೆ. ಹೀಗಾಗಿ ಪ್ರಭುಸರ್ವಾತ್ಮಕತೆಯಲ್ಲಿ ಬಹುಮತದ ಅನ್ಯಾಯಕ್ಕಾಗಲಿ ಅಲ್ಪಸಂಖ್ಯಾಕರ ಅಸಂತೋಷಕ್ಕಾಗಲಿ ಆಸ್ಪದವೆ ಉಳಿಯುವುದಿಲ್ಲ. ಅದರಂತೆಯೆ ಒಂದೇ ವ್ಯಕ್ತಿಯ ನಿರ್ಣಯದ ಮೇಲೆ ಎಲ್ಲವೂ ಅವಲಂಬಿಸಿದ್ದರಿಂದ ಕಾರ್ಯವನ್ನು ಒತ್ತರದಿಂದ ಮಾಡುವುದು ಈ ಪದ್ಧತಿಯಲ್ಲಿ ಸಹಜವೆನಿಸುವುದು, ತೀರ ಸುಲಭವೆನಿಸುವುದು. ಪ್ರಜಾಸತ್ತಾತ್ಮಕತೆಯಲ್ಲಿದ್ದಂತೆ ಬಹುಮತದ ಪಕ್ಷದ

ಮುಂದಾಳುವಿಗೆ ಎಲ್ಲ ಅಧಿಕಾರಗಳನ್ನು ಕೊಡುವುದಕ್ಕಿಂತ ಇಡಿಯ ದೇಶದ ನಾಯಕನಿಗೆಯೆ ಎಲ್ಲ ಅಧಿಕಾರಗಳನ್ನು ಕೊಡುವುದು ನ್ಯಾಯವೂ ಸಯುಕ್ತಿಕವೂ ಅಲ್ಲವೆ? ಯೋಗ್ಯತೆ ಇದ್ದವರು, ಬುದ್ಧಿವಂತರು ತಂತಮ್ಮ ವ್ಯವಸಾಯದೊಳಗೆ ಧನಸಂಪಾದನೆ ಮಾಡುವುದನ್ನು ಬಿಟ್ಟುಕೊಟ್ಟು ಶಾಸನಸಭೆಯಲ್ಲಿ ಪ್ರತಿನಿಧಿಗಳಾಗುವರೆಂಬ ಭರವಸೆ ಇಲ್ಲ. ಆದರೆ ದೇಶದ ನಾಯಕತ್ವವನ್ನೆ ವ್ಯವಸಾಯವಾಗಿಟ್ಟುಕೊಂಡ ಮೇಧಾವಿಯಾದ ವ್ಯಕ್ತಿ ಇರುವಾಗ ಶಾಸನಸಭೆಗಳಲ್ಲಿ ಬುದ್ಧಿ ಇಲ್ಲದ ಪ್ರತಿನಿಧಿಗಳಿದ್ದರೂ ನಡೆ ಯುವುದು. ಹೀಗೆ ಇಂದಿನ ವ್ಯವಹಾರದ ಧೋರಣೆಯು ನಮ್ಮ ರಾಜ ಕೀಯ ಜೀವನವನ್ನು ಪ್ರಭುಸರ್ವಾತ್ಮಕತೆಗೆಯೆ ಎಳೆಯುವುದು—ಎಂಬುದು ಉತ್ತರಪಕ್ಷ.

ಈ ಪೂರ್ವಪಕ್ಷ–ಉತ್ತರಪಕ್ಷಗಳ ವಿವರವಾದ ಚರ್ಚೆಯು ಈ ಚರಿತ್ರಗ್ರಂಥಕ್ಕೆ ಪ್ರಸ್ತುತವಿಲ್ಲ. ನಾವು ನೋಡಬೇಕಾದುದು ಇಷ್ಟೆ. ಕಮಾಲಪಾಶಾ ಇವರು ಒಂದು ತತ್ತ್ವದ ದ್ಯೋತಕವೆ, ಇಲ್ಲವೆ ವ್ಯಕ್ತಿ ಚಾರಿತ್ರ್ಯದ ಪ್ರಭಾವವೆ? ಮೇಲೆ ಚರ್ಚಿಸಿದ ವಿಷಯದಲ್ಲಿ ನಿಜವಾಗಿಯೆ ತತ್ತ್ವಗಳ ತಿಕ್ಕಾಟವಿದೆಯೆ ಇಲ್ಲವೆ ತಾತ್ಕಾಲಿಕ ಸಂಗತಿಗಳ ಪರಿಣಾಮ ವಿದೆಯೆ? ಸರ್ವಾಧಿಕಾರಿಯು ಇಂದಿನ ರಾಜಕೀಯ ಜೀವನದ ಧ್ಯೇಯವೆ ಇಲ್ಲವೆ ಆಯಾದೇಶದ ವಿಶಿಷ್ಟಪರಿಸ್ಥಿತಿಯ ಪ್ರಭಾವವೆ? ಭಾರತವನ್ನು ಮೊದಲ್ಗೊಂಡು ಸರ್ವಾಧಿಕಾರಿತ್ವದ ಪ್ರಭಾವವುಳ್ಳ ಯಾವ ದೇಶವನ್ನು ನೋಡಿದರೂ ಆ ದೇಶದ ಪರಿಸ್ಥಿತಿಯಲ್ಲಿ ಒಂದು ತರದ ಸರ್ವಸಾಮಾನ್ಯ ವಾದ ವಿಶೇಷವು ಕಂಡುಬರುವುದು. ರಶಿಯಾದಲ್ಲಿ ಅಜ್ಞಾನ–ಬಡತನ-ದಾಸ್ಯ, ಇಟಲಿಯಲ್ಲಿ (ಮಹಾಯುದ್ಧದ ತರುವಾಯ) ಅರಾಜಕತೆ-ಅವ್ಯವಸ್ಥೆ, ಜರ್ಮನಿಯಲ್ಲಿ ಸೋಲಿನ ಅವಮಾನ–ಸಾಲದಿಂದ ಬಂದ ಬವಣಿಕೆ, ತುರ್ಕಸ್ತಾನದಲ್ಲಿ ಅಜ್ಞಾನ–ದಾರಿದ್ರ್ಯ, ಭಾರತೀಯರಲ್ಲಿ ರಕ್ತಗತವಾದ ದಾಸ್ಯಬುದ್ಧಿ–ದೈವಗತವಾದ ದಾರಿದ್ರ್ಯ; ಹೀಗೆ ಯಾವ ದೇಶದಲ್ಲಿ ಅಜ್ಞಾನ-ಅವ್ಯವಸ್ಥೆ, ದಾಸ್ಯ-ದಾರಿದ್ರ್ಯ ಇವು ಕಂಡು ಬರುವವೊ ಆ ದೇಶದಲ್ಲಿಯೆ ಸರ್ವಾಧಿಕಾರಿತ್ವದ ಪ್ರಭಾವ ಕಂಡು ಬರುವುದೆಂದು

ಹೇಳಬಹುದು. ಅಬಿಸೀನಿಯಾದಂತಹ ದೇಶದಲ್ಲಿ ಕೂಡ ಈ ಸಂಗತಿಗಳು ಕಂಡು ಬರುತ್ತಿದ್ದರೆ ಅಲ್ಲಿ ಸರ್ವಾಧಿಕಾರಿತ್ವ ಬರಲಿಲ್ಲ. ಯಾಕೆಂದರೆ ಹೊರಗಿನ ಈ ಸಂಗತಿಗಳೊಡನೆ ಅವುಗಳ ಉಪಯೋಗವನ್ನು ಮಾಡಿ ಕೊಳ್ಳುವ ವ್ಯಕ್ತಿಯೊಂದು ಬೇಕಾಗುವುದು. ಹಿಟ್ಲರ್, ಮುಸೋಲಿನಿ, ಮಹಾತ್ಮಾಗಾಂಧಿ, ಕಮಾಲ–ಇವರು ಮೊದಲಿನಿಂದಲೂ ತಂತಮ್ಮ ದೇಶದ ರಾಜಕೀಯ ಜೀವನದಲ್ಲಿ ಒಂದೊಂದು ತರದ ಭಾಗವನ್ನು ವಹಿಸಿದ್ದರು. ಆದರೆ ನಾವು ಮೇಲೆ ಸೂಚಿಸಿದ ಪರಿಸ್ಥಿತಿ ಪ್ರಾಪ್ತವಾದ **ತರುವಾಯದಲ್ಲಿಯೆ** ಇವರು ಸರ್ವಾಧಿಕಾರಿತ್ವದ ಧೋರಣೆಯಿಂದ ಮುಂದೆ ಬಂದು ಇಂದು ತಂತಮ್ಮ ದೇಶದ ಏಕಮೇವಾದ್ವಿತೀಯ ನಾಯಕರಾಗಿದ್ದಾರೆ. ಆದುದರಿಂದ ಪ್ರಭುಸರ್ವಾತ್ಮಕತೆಯು ಹೊಸ ತಾದ ತತ್ತ್ವವಲ್ಲೆಂದೂ, ಕೇವಲ ಒಂದು ವಿಶಿಷ್ಟಪರಿಸ್ಥಿತಿಯ ತಾತ್ಕಾ ಲಿಕ ಪ್ರಭಾವವೆಂದೂ ಹೇಳಬಹುದಲ್ಲವೆ? ಅಜ್ಞಾನ-ಅವ್ಯವಸ್ಥೆ, ದಾಸ್ಯ–ದಾರಿದ್ರ್ಯ ಇವು ಇಂದಿನ ಮಾನವನಿಗೆ ತಾತ್ಕಾಲಿಕ ಸನ್ನಿವೇಶ ಗಳಾಗಿವೆ. ಇವುಗಳನ್ನು ಹೋಗಲಾಡಿಸಿದ ಮೇಲೆ–ಕೈದಿಗಳೆ ಇಲ್ಲವಾದ ಮೇಲೆ ಕಾರಾಗೃಹಗಳೇಕೆ ಎಂಬಂತೆ–ಸರ್ವಾಧಿಕಾರಿತ್ವದ ಧೋರಣೆಯೂ ಮಾಯವಾಗಬಹುದಲ್ಲವೆ? ಇಲ್ಲವೆ ತಮ್ಮ ಪ್ರಭುತ್ವವು ಅಬಾಧಿತವಾಗಿ ಸಾಗಬೇಕೆಂಬ ಇಚ್ಛೆಯಿಂದ ಸರ್ವಾಧಿಕಾರಿಗಳು ಇಂತಹ ಪರಿಸ್ಥಿತಿ ಯನ್ನೆ ಉಳಿಸಿ ಬೆಳೆಸುವರೊ? ಈ ಮಹತ್ತ್ವದ ಪ್ರಶ್ನೆಗೆ ಉತ್ತರವನ್ನು ಕೊಡಬೇಕಾದರೆ ಸರ್ವಾಧಿಕಾರಿಗಳ ಹೃದಯವನ್ನು ಒಳಹೊಕ್ಕು ನೋಡಬೇಕಾಗುವುದು, ಅವರ ಸ್ವಭಾವವನ್ನು ವಿಂಗಡಿಸಿ ಅರಿತುಕೊಳ್ಳ ಬೇಕಾಗುವುದು.

*    *    *    *

ಮಾನವನ ಸ್ವಭಾವವೂ ಬೆಳವಣಿಗೆಯೂ ಅವನ ಚಿಕ್ಕಂದಿನ ಸುತ್ತುಮುತ್ತಿನ ಮೇಲೂ ತಂದೆ–ತಾಯಿಗಳ ಮೇಲೂ ಹೆಚ್ಚಾಗಿ ಅವಲಂಬಿಸಿರುತ್ತಿದೆ ಎಂದು ಮಾನಸಶಾಸ್ತ್ರಜ್ಞರು ಸಪ್ರಮಾಣವಾಗಿ ಹೇಳುತ್ತಾರೆ. ಈ ದೃಷ್ಟಿಯಿಂದ ನಾವು ಕಮಾಲ ಇವರ ಸ್ವಭಾವವನ್ನು

ತಿಳಿದುಕೊಳ್ಳಲು ಯತ್ನಿಸೋಣ. ಚಿಕ್ಕಂದಿನಲ್ಲಿ ತಂದೆಗೆ ಹೆದರಿ, ತಾಯಿಯನ್ನು ಹೆದರಿಸುವ ಸಾಮಾನ್ಯವೃತ್ತಿಯ ಗಂಡುಮಗುವಾಗಿದ್ದನು ಕಮಾಲನು. ಆದರೂ ಒಂದು ವಿಶೇಷವಿದೆ. ತಾಯಿಯ ಹಟಮಾರಿತನವು ಕಮಾಲಿನಲ್ಲಿದೆ ಎಂದು ನಾವು ಈ ಮೊದಲು ಹೇಳಿರುವೆವಷ್ಟೆ? ವಿಕ್ಕ ಸರ್ವಾಧಿಕಾರಿಗಳ ಮತ್ತು ಕಮಾಲನ ನಡುವೆ ಒಂದು ಅತ್ಯಂತ ಮನದಟ್ಟುವಂತಹ ಸಾಮ್ಯವಿದೆ. ಕಮಾಲನಲ್ಲಿ ತಾಯಿಗಾಗಿ ಅತ್ಯಂತ ಪ್ರೇಮವಿದ್ದಿತು, ಆದರವಿದ್ದಿತು; ಹಿಟ್ಲರನಾದರೂ ಮಾತೃಭಕ್ತನು; ಮುಸೋಲಿನಿಯೂ ತನ್ನ ತಾಯಿಯ ಮರಣದಿಂದ ತನಗಾದ ವ್ಯಥೆಯನ್ನು ಹೇಳುವುದು ನೋಡಿದರೆ ಇವನೂ ಎಂತಹ ಮಾತೃಭಕ್ತನಿದ್ದನೆಂಬ ಕಲ್ಪನೆ ಬರುವುದು.* ಮುಂದೆ ನಾಯಕನಾಗುವುದಕ್ಕೂ ಮುಂಚೆ ತಾಯಿಯ ನಿಕಟಸ್ನೇಹ ಸಹವಾಸಕ್ಕೂ ಸಂಬಂಧವಿದ್ದಿರಬಹುದೆ? ಮಾನಸಶಾಸ್ತ್ರವನ್ನು ಅರಿಯದವರಾದರೂ ನಾವು ಈ ಪ್ರಶ್ನೆಗೆ ಉತ್ತರವನ್ನು ಕೊಡಬಹುದು, ಸಂಬಂಧ ಇದೆ ಎಂದು ಹೇಳಬಹುದು. ತಾಯಿಯ ಸಲಿಗೆಯಿಂದ ಮಗುವಿನಲ್ಲಿ ಅಹಂಭಾವವು ಹುಟ್ಟುವುದು; ಸಲಿಗೆ ಹೆಚ್ಚಾದರೆ ಅದೇ ಅಹಂಕಾರವಾಗುವುದು. ತಂದೆಯೊಡನೆ ಕಮಾಲನು ಹೆಚ್ಚಾಗಿ ಮಾತನಾಡುತ್ತಿರಲಿಲ್ಲ; ಆದುದರಿಂದ ಹಾಗೆ ತಡೆದ ಕುತೂಹಲವಾಗಲಿ ಕಿಡಿಗೇಡಿತನವಾಗಲಿ ತಾಯಿಯ ಎದುರು ಹೊರಸೂಸುತ್ತಿತ್ತು. ಮಾಡಿದ್ದಕ್ಕೆಲ್ಲ ತಾಯಿಯ ಅನುಮೋದನ, ಉತ್ತೇಜನ, ಆದಕಾಗಿ ತಾನು ಮಾಡುವುದೆಲ್ಲ ಯೋಗ್ಯವಾದುದು, ಮಾಡಲೇಬೇಕಾದುದು ಎಂಬ ಬಾಲಿಶತನದ ಬಢಾಯಿ. ಇಂದು ನಮಗೆ ಕಾಣಬರುವ ಎಲ್ಲ ಸರ್ವಾಧಿಕಾರಿಗಳಲ್ಲಿ ಎಳೆತನದ ಈ ಅಹಂಕಾರವೆ ಆತ್ಮವಿಶ್ವಾಸ, ಆತ್ಮಶಕ್ತಿ

---

* All the independent strength of my soul, all my intellectual or philosophical resources, even my deep religious beliefs were helpless to comfort that great grief. For many days I was lost. ( ನನ್ನ ಆತ್ಮಿಕ ಬಲವಾಗಲಿ, ನನ್ನ ಬುದ್ಧಿಮತ್ತೆಯಾಗಲಿ, ನನ್ನ ಧಾರ್ಮಿಕ ಶ್ರದ್ಧೆಯಾಗಲಿ ದುಃಖವನ್ನು ಕಡಮೆ ಮಾಡಲಾರದಾದುವು. ಎಷ್ಟೋ ದಿವಸಗಳವರೆಗೆ ನಾನು ದಿಕ್ಕುಗಾಣದಂತಾದೆ. )

ಆಗಿ ಬೆಳೆದಿದೆ. ಮಹಾತ್ಮಾ ಗಾಂಧಿಯವರು Inner Voice –ಒಳದನಿ- ಎಂದು ಹೇಳುವುದು ಇದೇ ಮನೋವೃತ್ತಿ ಇದ್ದಿರಬೇಕು. ತನ್ನದೆ ನಿಜ ಎಂಬುದಕ್ಕೆ ಹೊರಗಿನ ಪ್ರಮಾಣ ಬೇಡ ಈ ಮನೋವೃತ್ತಿಗೆ. ಈ ವೃತ್ತಿಯ ಪರಿಣಾಮವಾಗಿ ನಿರ್ಣಯಾತ್ಮಕಬುದ್ಧಿಯೂ ಬರುವುದು. ಇದನ್ನು ಮಾಡಬೇಕೆ, ಮಾಡಬಾರದೆ ಎಂಬುದನ್ನು ಮುಸೋಲಿನಿಯು ಕ್ಷಣಾರ್ಧದಲ್ಲಿ ನಿಶ್ಚಯಿಸುತ್ತಾನಂತೆ. ಎಳೆತನದಲ್ಲಿ ಗಳಿಸಿದ ಶಕ್ತಿ ಇದು; 'ಬೇಡ, ಬೇಡ' ಎಂಬ ಬೇಡರ ಸೈನ್ಯದ ಹೆದರಿಕೆ ಇಲ್ಲದೆ ಬೆಳೆದುದರ ಫಲವಿದು; ಮನಸಿಗೆ ಬಂದುದನ್ನು ತತ್‌ಕ್ಷಣದಲ್ಲಿ ಮಾಡಿ ಬಿಡುವ ಹುಡುಗನ ಕುತೂಹಲಬುದ್ಧಿಯ ಕೈಚಳಕವಿದು. ಅಹಂಕಾರ– ಆತ್ಮವಿಶ್ವಾಸ, ಕಿಡಿಗೇಡಿತನ–ಕೂಡಲೆ ನಿರ್ಣಯಿಸುವ ದಿಟ್ಟತನ, ಈ ಗುಣಗಳು ಒಂದೇ ಮಾಲೆಯಲ್ಲಿ ಪೋಣಿಸಿದುವು. ಈ ಗುಣಗಳಿದ್ದಲ್ಲಿ ಪರರಿಂದ ನಿರ್ಬಂಧ ಇಲ್ಲವೆ ವಿರೋಧ ಎನುವಂತಹ ಪ್ರಸಂಗಗಳೆ ಇರುವುದಿಲ್ಲ. ಕಮಾಲನು ಅಧಿಕಾರಾರೂಢನಾದ ತರುವಾಯ ರಶಿಯಾದಿಂದ ಒಂದು ಶಿಷ್ಟಮಂಡಳ ಬಂದಿತು. ಸುಲ್ತಾನನನ್ನೂ ಧರ್ಮವನ್ನೂ ಹೊಡೆದೋಡಿಸಿದ ಕಮಾಲನು ಸಾಮ್ರಾಜ್ಯವಾದದ ವಿರೋಧಿ ಎಂಬ ಉಬ್ಬಿನಿಂದ ಈ ಬೋಲ್‌ಶೆವ್ಹಿಕ್ ಶಿಷ್ಟಮಂಡಳವು ಅವನನ್ನು ಅಭಿನಂದಿಸಿತು. 'ಜಗತ್ತಿನ ದಲಿತ (oppressed) ವರ್ಗದ ಉದ್ಧಾರಕನು ನೀನು' ಎಂದು ಭಟ್ಟಂಗಿಯಂತೆ ಅವನನ್ನು ಹೊಗಳತೊಡಗಿತು. ಕೂಡಲೆ ಕಮಾಲನು ಸಿಡಿದೆದ್ದನು. ಅವನಿಗೆ ಈ ಮಾತಿನ ಅರ್ಥವೆ ಆಗಲಿಲ್ಲ. 'ದಲಿತವರ್ಗ!' ಎಂದು ಚಕಿತನಾಗಿಯೂ ತಿರಸ್ಕಾರದಿಂದಲೂ ಉಸಿರಿ, 'ಜಗತ್ತಿನಲ್ಲಿ ದಲಿತರೂ ಇಲ್ಲ, ದಂಭಕ (oppressor)ರೂ ಇಲ್ಲ; ಆದರೆ ಕೆಲವು ರಾಷ್ಟ್ರಗಳಿವೆ; ತಮ್ಮನ್ನು ಕಾಲ್ಕೆಳಗೆ ತುಳಿವಂತೆ ಅನ್ಯರಿಗೆ ಅವು ತಾವಾಗಿವೆ ಆಸ್ಪದವನ್ನುಂಟುಮಾಡಿಕೊಡುತ್ತಿವೆ' ಎಂದು ಹೇಳಿದನು. 'ನೀವು ಸೆಟೆದು ನಿಂತರೆ, ಗದ್ದರಿಸಿದರೆ, ಪ್ರತಿಭಟಿಸಿದರೆ ನಿಮ್ಮನ್ನು ತಡೆಯುವರಾರು?' ಎಂದು ಕಮಾಲನು ಇಡಿಯ ಜಗತ್ತಿಗೆ ಕೇಳುವ ಪ್ರಶ್ನೆ; ಯಾಕಂದರೆ ಬಾಲಕನಾದ ಕಮಾಲನು ಚಿಕ್ಕಂದಿನಲ್ಲಿ ಆ

ಸೂತ್ರದಂತೆಯೆ ನಡೆದು ಸಾಧಿಸಿಕೊಂಡಿದ್ದನು, ತನ್ನ ವ್ಯವಹಾರವನ್ನೂ ಹಾಗೆಯೆ ಸಾಗಿಸಿಕೊಂಡಿದ್ದನು.

ಮಾತೃವಾತ್ಸಲ್ಯವು ಎಲ್ಲ ಜಾತಿ–ಜನಾಂಗ–ದೇಶಗಳಲ್ಲಿ ನೈಸರ್ಗಿಕ ವಾಗಿ ಕಂಡುಬರುವುದರಿಂದ ಮೇಲೆ ಹೇಳಿದ ಗುಣಗಳು ಎಲ್ಲ ಬಾಲಕ ರಲ್ಲೂ ಬರಬೇಕಾದುವು; ನಿಜ. ಆದರೆ ಮಗುವು ಒಂದೆರಡು ವರ್ಷಗಳಲ್ಲಿ ಮನೆಯನ್ನು ಬಿಟ್ಟು ಬೀದಿಯಲ್ಲಿ, ಓಣಿಯಲ್ಲಿ, ಮುಂದೆ ಶಾಲೆಯಲ್ಲಿ ಮಿಕ್ಕ ಚಿಕ್ಕಮಕ್ಕಳೊಡನೆ ಕಲೆಯುವನು. ಆ ಸಂದರ್ಭದೊಳಗಿನ ಆಟ–ಪಾಟ, ಕಲಹ–ಕುಚೇಷ್ಟೆಗಳಿಂದ ಮಗುವಿನ ಎಷ್ಟೋ ಕಲ್ಪನೆಗಳು ಬದಲಾವಣೆಯನ್ನು ಹೊಂದುವುವು. ತಾನೇ ಸಮರ್ಥ, ತಾನೇ ಜಾಣ, ತಾನೇ ಇಂದ್ರ, ತಾನೇ ಚಂದ್ರ ಎಂದು ತಾಯಿಯಿಂದ ಕೇಳಿದ ಜೋಗು ಳದ ಅರ್ಥವು ಸತ್ಯವಲ್ಲೆಂಬ ಅನುಭವವು ಅವನಿಗೆ ಬರುವುದು. ತಿಂದ ಪೆಟ್ಟುಗಳಿಂದ, ಉಂಡ ನಗೆಯಾಟದಿಂದ, ಕಂಡ ಅವಮಾನಾದಿಗಳಿಂದ ಆ ಅನುಭವವು ಸ್ಥಿರವಾಗಿ ಉಳಿಯುವುದು. ಕಮಾಲನಿಗೂ ಹಾಗಾಗ ಬಹುದಾಗಿತ್ತು; ಆದರೆ ಆಗಲಿಲ್ಲವೆಂಬುದು ಮಹತ್ತ್ವದ ಮಾತು. ಕಮಾ ಲನ ಅಹಂಭಾವವು ಮೇಲಿನ ಮೆಟ್ಟಿಲನ್ನು ಮುಟ್ಟಿತ್ತು, ತಾಯಿಯ ಜೋಗುಳವು ಆಗಲೇ ಅವನ ತಲೆಗೆ ತಟ್ಟಿತ್ತು; ತಾನು ಅದ್ವಿತೀಯ, ತನಗೂ ಮಿಕ್ಕವರಿಗೂ ಸಾಮ್ಯವೆ ಇಲ್ಲ, ತಾನು ಎಲ್ಲರಿಗಿಂತಲೂ ಮಿಗಿಲು ಎಂದು ಬೀದಿಗೆ ಕಾಲಿಡುವ ಮುಂಚೆಯೆ ಇವನ ಚುರುಕುಬುದ್ಧಿಯ ನಿರ್ಣಯವಾಗಿತ್ತು. ಆದುದರಿಂದ ಮೊದಲಿನಿಂದಲೂ ಕಮಾಲನು ಅನ್ಯ ರೊಡನೆ ಬೆರೆಯಲೆ ಇಲ್ಲ. ಈಗಲೂ ಕಮಾಲನು ಅನ್ಯರಿಂದ ದೂರದಲ್ಲಿಯೆ ಇದ್ದಾನೆ; ಅವನಿಗೆ ಮಿತ್ರರೆಂಬವರು, ಸರಿಕರೆಂಬವರು ಇಲ್ಲವೆ ಇಲ್ಲವೆಂದು ಹೇಳಬಹುದು.

ತನಗಾಗಿದ್ದ ಹೆಮ್ಮೆಗಾಗಿ, ಅನ್ಯರೊಡನೆ ಬೆರೆಯಲಾರದುದಕ್ಕಾಗಿ ಕಮಾಲನ ಜೀವನದಲ್ಲಿ ಇನ್ನೊಂದು ವೈಶಿಷ್ಟ್ಯವು ಸಂಭವಿಸಿತು; ಅದೆಂ ದರೆ, ಶಿಕ್ಷಣ–ಸಂಸ್ಥೆಯ ಸಂಸ್ಕಾರದ ಅಭಾವ. ಶಾಲೆಗಳ ಸರ್ವ ಸಾಮಾನ್ಯ ಸ್ವರೂಪವನ್ನು ಅರಿತವರಿಗೆ ಕಮಾಲನಂತಹನು ಶಾಲೆ ಬಿಟ್ಟು

ಕೊಟ್ಟಿದ್ದು ಆಶ್ಚರ್ಯವೆನಿಸುವಂತಿಲ್ಲ. ಎಲ್ಲವನ್ನೂ ಬಲ್ಲ ತನಗೆ ಹೆಚ್ಚಿನ ದನ್ನು ಕಲಿಸುವರಾರು? ಇದಲ್ಲದೆ ಮಿಕ್ಕ ಬಾಲಕರಿಗಿಂತ ತಾನು ಶ್ರೇಷ್ಠ ನಾದವನು; ಇದನ್ನರಿಯದೆ ಮಿಕ್ಕ ಬಾಲಕರಿಗೆ ಕಲಿಸುವುದನ್ನೆ ತನಗೆ ಕಲಿಸಬೇಕೆ? ಇಡಿಯ ಶಿಕ್ಷಣಪದ್ಧತಿಯೆ ಕಮಾಲನಿಗೆ ಅಪಮಾನಕಾರಕ ವೆನಿಸಿತು. ಶಾಲಾಸಂಸ್ಥೆಗಳ ಶಿಕ್ಷಣವು ಸರ್ವಾಧಿಕಾರಿಯ ಮನೋವೃತ್ತಿ ಯವರಿಗೆ ರುಚಿಸುವುದಿಲ್ಲವೇನೊ! ಎಲ್ಲ ಸರ್ವಾಧಿಕಾರಿಗಳಲ್ಲಿ ಅತ್ಯಂತ ಸುಶಿಕ್ಷಿತನಾದ ಮುಸೋಲಿನಿ ಕೂಡ ಈ ಶಿಕ್ಷಣದ ವಿಷಯವಾಗಿ ತಿರಸ್ಕಾರದ ಅಭಿಪ್ರಾಯವನ್ನು ವ್ಯಕ್ತ ಮಾಡಿದ್ದಾನೆ. 'ನಾನು ಶಾಲೆ ಯಲ್ಲಿ ಚುರುಕನಾಗಲಿಲ್ಲ. ಅಲ್ಲಿ ಕಲಿಯಲು ನಾನು ಉತ್ಸುಕನಿರಲಿಲ್ಲ, ಮುಂದೆ ಶಿಕ್ಷಕನಾಗುವುದಂತೂ ನನಗೆ ಬೇಡೆನಿಸಿತು. ನಾನು ಓದಿ ಕೊಂಡದ್ದು ಒಂದೇ ಒಂದು ಗ್ರಂಥ; ಅದು **ನನ್ನ ಜೀವನ.** ನನಗೆ ಕಲಿಸಿದ **ಶಿಕ್ಷಕನೆ** ಬೇರೆ; ಅವನು **ನಿತ್ಯವ್ಯವಹಾರದ ಅನುಭವ.**' ಕಮಾಲನಾದರೂ ಇದೇ ಮಾತನ್ನು ಹೇಳಬಹುದು. ತನಗೆ ಶಿಕ್ಷಣದ ಆವಶ್ಯಕತೆ ಇಲ್ಲವೆಂದು ಮಿಕ್ಕವರಿಗೂ ಆ ಆವಶ್ಯಕತೆ ಇಲ್ಲವೆಂಬ ಅಭಿಪ್ರಾಯವಿಲ್ಲ. ಮಿಕ್ಕವರು ತನಗಿಂತಲೂ ಕಡಮೆ ಯೋಗ್ಯತೆಯವರು. ಅವರಿಗೆ ಶಿಕ್ಷಣ ಸಂಸ್ಕಾರವು ಅತ್ಯಗತ್ಯವಾಗಿದೆ. ಅದಕಾಗಿಯೆ ಅಧಿಕಾರಾರೂಢನಾದ ಕಮಾಲನು ತನ್ನ ದೇಶಬಾಂಧವರನ್ನು ಒತ್ತಾಯ ದಿಂದ ಕಲಿಸಲುದ್ಯುಕ್ತನಾದನು.

ಕಮಾಲನಲ್ಲಿದ್ದ ತೀವ್ರವಾದ ಸ್ವಾಭಿಮಾನ-ಅಹಂಕಾರಗಳ ಮೂಲಕ ಅವನಿಗೆ ಮಿತ್ರರಾಗಲಿ, ಸರಿಕರಾಗಲಿ ಇರುವುದು ಶಕ್ಯವಿರಲಿಲ್ಲ ಎಂದು ಹೇಳಿದೆವು. ಆದರೆ ಅವೇ ಗುಣಗಳಿಗಾಗಿ ಅವನಿಗೆ ವಿಶಿಷ್ಟ ಸ್ವಭಾವದ ಸಂಗಡಿಗರ ಆವಶ್ಯಕತೆ ಇದ್ದಿತು. ತನ್ನಲ್ಲಿ ವಿಶ್ವಾಸವಿಡುವ ವರು, ತಾನು ಮಾಡಿದ್ದಕ್ಕೆ ತಲೆದೂಗುವವರು, ತಾನು ಹೇಳಿದಂತೆ ಕೇಳುವವರು ಕಮಾಲನಂತಹ ಮನೋವೃತ್ತಿಯವರಿಗೆ ಆಗತ್ಯವಾಗಿ ಬೇಕೆನಿಸುವರು. ಚಿಕ್ಕಂದಿನಲ್ಲಿ ತಾಯಿಯು ಈ ಹೊಣೆಗಾರಿಕೆಯನ್ನು ಹೊತ್ತಿದ್ದಳೆಂದು ಹೇಳಬಹುದು. ಚಿಕ್ಕತನದ ಆಶೆ-ಆಕಾಂಕ್ಷೆಗಳಿಗೆ

ಅಷ್ಟೇ ಸಾಕೆನಿಸಿತು. ಆದರೆ ಬೆಳೆದ ಮೇಲೆ, ದೊಡ್ಡ ದೊಡ್ಡ ಕಾರ್ಯ ಕ್ಷೇತ್ರದ ಆಕಾಂಕ್ಷೆಗಳನ್ನು ಕೈಕೊಂಡ ಮೇಲೆ, ಬಯಲ ಜಗತ್ತಿನ ವ್ಯವಹಾರದಲ್ಲಿ ತೊಡಗಿದ ಮೇಲೆ ಆ ವ್ಯವಹಾರಕ್ಕೆ ಉಪಯುಕ್ತರಾದ, ಉಪಯುಕ್ತರೆನಿಸುವ ಸಂಗಡಿಗರು ಬೇಕಲ್ಲವೆ? 'ಉಪಯುಕ್ತ' ಎಂಬ ಶಬ್ದವು ಈ ಸಂದರ್ಭದಲ್ಲಿ ಅತ್ಯಂತ ಮಹತ್ತ್ವದ್ದಾಗಿದೆ. ತನ್ನ ಕೂಡ ಚರ್ಚಿಸುವವರು ಬೇಡ; ತನ್ನನ್ನು ಎದುರಿಸುವವರು ಬೇಡ; ತಾನು ನಿಶ್ಚಯಿಸಿದ ವಿಚಾರಕ್ಕೆ, ತಾನು ಕೈಕೊಂಡ ಕೆಲಸಕ್ಕೆ, ತಾನು ಹೇಳಿದ ರೀತಿಯಲ್ಲಿಯೆ 'ಉಪಯುಕ್ತ'ರಾಗುವವರು ಬೇಕು; 'ಉಪಯುಕ್ತ' ರಾಗಿರುವವರೆಗೆಯೆ ಬೇಕು; ಯಾವ ಕ್ಷಣ 'ಉಪಯುಕ್ತ' ಎನಿಸುವು ದಿಲ್ಲವೊ ಆ ಕ್ಷಣ ಅರೀಫನನ್ನು ಬೀಸಾಡಿದಂತೆ ಅವರನ್ನು ದೂರದಲ್ಲಿ ಬೀಸಾಡುವುದು. ಇದ್ದ ಬುದ್ಧಿಯನ್ನೆಲ್ಲ **ತನ್ನಲ್ಲಿ**ಯ ವಿಶ್ವಾಸದಿಂದ **ತನ್ನ** ನಿರ್ಣಯವನ್ನು ನಡೆಸುವುದರಲ್ಲಿ ತೊಡಗಿಸುವವರೇ ಸಂಗಡಿಗರಾಗಿರ ಬೇಕೆಂಬುದು ಪ್ರತಿಯೊಬ್ಬ ಸರ್ವಾಧಿಕಾರಿಯ ಮನೋವೃತ್ತಿಯಾಗಿದೆ. ಕಮಾಲನು ಬಹಳ ವರ್ಷಗಳವರೆಗೆ ಮದಿವೆಯಾಗದಿದ್ದಕ್ಕೂ, ಮುಂದೆ ಮದಿವೆಯಾದ ಅಲ್ಪಾವಧಿಯಲ್ಲಿಯೆ ಹೆಂಡತಿಯಿಂದ ಬಿಡುಗಡೆ ಹೊಂದಿ ದ್ದಕ್ಕೂ ಈ ಮನೋವೃತ್ತಿಯೆ ಕಾರಣವಿರಲು ಸಾಕು. ಝುಬೇದಾನ ಸ್ವಭಾವವು ಹೇಗಿದ್ದಿತು, ಮನೆಯಲ್ಲಿ ಆಕೆ ಎಷ್ಟರ ಮಟ್ಟಿಗೆ ಅಧಿಕಾರ ನಡೆಸುತ್ತಿದ್ದಳು ಎಂಬುದನ್ನು ಹಿಂದೆ ಸೂಚಿಸಿದ್ದೇವೆ. ಬಾಲಕನಾದ ಕಮಾಲನ ಹೃದಯಪಟಲದ ಮೇಲೆ ಸಂಸಾರದ ಈ ಚಿತ್ರ ಮೂಡಿರಲು ಸಾಕು. ಮಾತುಮಾತಿಗೆ ಕೇಳದೆಯೆ ಹೆಂಡತಿ ಸಲಹೆ ಕೊಡುವುದು; ಮಾತಿನಲ್ಲಿ ಸೋತರೂ ಕೊನೆಗೆ ತನ್ನ ಮನಸಿನಲ್ಲಿದ್ದುದನ್ನೆ ಹೆಂಡತಿ ಸಾಧಿ ಸಿಕೊಳ್ಳುವುದು; ಗಂಡನಿಗೆ ವಿಚಾರಸ್ವಾತಂತ್ರ್ಯ, ಚರ್ಚಾಸ್ವಾತಂತ್ರ್ಯ; ನಿರ್ಣಯಸ್ವಾತಂತ್ರ್ಯ ಮಾತ್ರ ಪೂರ್ತಿಯಾಗಿ ಹೆಂಡತಿಗೆ; ಇದೇ ಮದಿವೆಯ ಮರ್ಮ ಎಂದು ಈ ಬಾಲಕನ ಬುದ್ಧಿಯ ಮೇಲೆ ಬಿಂಬಿಸಿ ತೇನೊ! ಸಾಮಾನ್ಯಜೀವನದ ದಿನನಿತ್ಯವ್ಯವಹಾರದ ಅನುಭವವು ಹೀಗಿದ್ದರೆ ಸಾರ್ವಜನಿಕ ಸಾಹಸಗಳಲ್ಲಿ ತೊಡಗಿದ ತನ್ನ ಅನುಭವವು

ಎಂತಹದಾಗಬಹುದು–ಎಂದು ಕಣ್ಣು ಮುಚ್ಚಿರಬಹುದು ಕಮಾಲನು ಬಂದ ಕನ್ಯೆಗಳ ಎದುರಿನಲ್ಲಿ.

ಈ ಸಂದರ್ಭದಲ್ಲಿ ಒಂದು ಚರಿತ್ರಾಂಶವನ್ನು ವಿಮರ್ಶಿಸಬೇಕಾಗುವುದು. ಕಮಾಲಪಾಶಾ ಇವರ ಚರಿತ್ರವನ್ನು ಬರೆದ ಬೇರೆ ಬೇರೆ ಮಹನೀಯರು ತಮ್ಮ ಚರಿತ್ರನಾಯಕನ ಒಂದು 'ದುರ್ಗುಣ'ವನ್ನು ಮರೆಮಾಚಿಲ್ಲದೆ ಬಣ್ಣಿಸಿದ್ದಾರೆ. ಕಮಾಲನ ಮದಿರೆಯು ಬಹುದಿವಸಗಳ ಕತೆ ಅಲ್ಲ; ಆದರೆ ಮದನಚೇಷ್ಟೆಗಳು ಮಾತ್ರ ಹರೆತನದಿಂದಲೂ (ಇಂದಿಗೂ) ನಡೆದುಬಂದುವು. ಹಿಟ್ಲರನಾಗಲಿ ಮುಸೋಲಿನಿಯಾಗಲಿ ತಮ್ಮ ಆಹಾರ-ವಿಹಾರಗಳನ್ನು ನಿಯಮಿತವಾಗಿಟ್ಟುಕೊಂಡುದಕ್ಕೆ ಹೆಸರಾಗಿದ್ದಾರೆ; ಇವರಿಬ್ಬರೂ ಮದ್ಯವನ್ನಂತೂ ಕುಡಿಯುವುದೆ ಇಲ್ಲ, ಆದರೆ ತಮ್ಮ ಸಮಾಜಕ್ಕೆ ಬಹುಕಾಲದಿಂದ ಸಹಜವಾದ ಮಾಂಸಾಹಾರವನ್ನು ಕೂಡ ಬಿಟ್ಟಿದ್ದಾರಂತೆ! ಆಹಾರ–ವಿಹಾರಗಳ ಅತಿರೇಕದಿಂದ ಪುಷ್ಟನಾದ ಸರ್ವಾಧಿಕಾರಿ ಎಂದರೆ ಇಂದಿನ ಜಗತ್ತಿನಲ್ಲಿ ಕಮಾಲನೊಬ್ಬನೆ. ಇಷ್ಟೇಕೆ? ಇಡಿಯ ಜಗತ್ತಿನಲ್ಲಿ ಇಷ್ಟೊಂದು ಹೊಣೆಹೊತ್ತವರು ಇಷ್ಟೊಂದು ಅನಿಯತವಾದ ಜೀವನವನ್ನು ನಡೆಸಿದವರೆಂದರೆ ಕಮಾಲನೊಬ್ಬನೆ. ಮೀನವು ನೀರು ಕುಡಿಯಲಿಕ್ಕಿಲ್ಲ, ಅದರ ಹತ್ತರಷ್ಟು ಮದ್ಯವನ್ನು ಕಮಾಲನು ಯಾವಾಗಲೂ ಕುಡಿದಿರುವನಂತೆ!* ಇವನ ಕಾಮಚೇಷ್ಟೆಗಳ ಕ್ಷೇತ್ರಕ್ಕೆ ಇಡಿಯ ಕನ್ನಡ ಕಾವ್ಯಸಾಹಿತ್ಯದಲ್ಲಿ ಬಣ್ಣಿಸಿದ ಸೂಳೆಗೇರಿಗಳು ಸಾಲಲಿಕ್ಕಿಲ್ಲವಂತೆ! ಇದೊಂದು ಸೋಜಿಗವೆ ಅಲ್ಲವೆ? ಆದರೆ ಇದಕ್ಕೂ ಹೆಚ್ಚಿನ ಸೋಜಿಗವೆಂದರೆ ಇಷ್ಟೆಲ್ಲ

---

* ಈ ಸಂದರ್ಭದಲ್ಲಿ ಒಂದು ಸೊಗಸಾದ ಕತೆ ಇದೆ. ೧೯೧೭ ರಲ್ಲಿ ವ್ಹಿಯನ್ನಾದ ಡಾಕ್ಟರ ಝುಕರಕಂದಲ ಎಂಬ ತಜ್ಞರು ಕಮಾಲನ ಪ್ರಕೃತಿಯನ್ನು ಪರೀಕ್ಷಿಸಿ ಹೀಗೆ ಹೇಳಿದರು : 'ಮದ್ಯಸೇವನೆಯನ್ನು ಬಿಡದಿದ್ದರೆ ನೀವು ಬಾಳುವುದು ಕಷ್ಟ' ಇಂದಿಗೆ ಇಪ್ಪತ್ತು ವರುಷಗಳಾದುವು; ತಾರುಣ್ಯದ ಹೃದಯಾವೇಶದಿಂದಲೆ ಕಮಾಲನು ಬಾಳುತ್ತಿದ್ದಾನೆ. ಆದರೆ– ಪಾಪ!– ಮುಂದೆ ಎರಡೇ ವರ್ಷಗಳಲ್ಲಿ ಆ ತಜ್ಞ ಡಾಕ್ಟರನೆ ತೀರಿಕೊಂಡನು! ಕಮಾಲನು ಮದ್ಯಸೇವನೆಯನ್ನು ಒಂದು ವೇಳೆ ಹೆಚ್ಚಿಸಿದ್ದರೂ ನಯುಕ್ತಿಕವೆ ಎನಬಹುದೇನೊ!

'ವ್ಯಸನ'ಸಾಗರದಲ್ಲಿ ಈಸಾಡಿದರೂ ಕಮಾಲನು ವ್ಯವಹಾರಸಾಗರದಲ್ಲಿ ಈಸುವುದಕ್ಕೆ ದಣಿದಿಲ್ಲ; ಅವನ ಬುದ್ಧಿಯಾಗಲಿ ದೇಹವಾಗಲಿ ವ್ಯಸನಗಳಿಂದ ಕೊಳೆತಿದೆ ಎಂದು ಹೇಳುವಂತಿಲ್ಲ. ಕಮಾಲನು ಸದಾಚಾರಿಯೊ ವ್ಯಭಿಚಾರಿಯೊ ಎಂಬುದರ ಗೊಡವೆ ನಮಗಿಲ್ಲ. ಬೆರಗುಗೊಳಿಸುವ ಈ ಸ್ವಭಾವವೈಶಿಷ್ಟ್ಯದ ಆಳನ್ನು ಶೋಧಿಸಬೇಕಾಗಿದೆ ನಮಗೆ. ಮೊದಲು ನಾವು ಲಕ್ಷ್ಯದಲ್ಲಿಡತಕ್ಕುದೆಂದರೆ ಕಮಾಲನ ಸಮಾಜದ ಆಚಾರನೀತಿ. ಧರ್ಮದ ದೃಷ್ಟಿಯಿಂದ ನೋಡಿದರೆ ಸೂಳೆಯೊಡನೆ ಬೆರೆಯುವುದು ಎಲ್ಲ ಕಡೆಗೂ 'ಪಾಪ' ಎನಿಸಿದೆ. ಆದರೂ ವ್ಯವಹಾರದಲ್ಲಿ ಬಹುಪತ್ನೀಕ ಸಮಾಜಗಳಲ್ಲಿ ಸೂಳೆಯೊಡನೆ ಸಂಸಾರವು ಸಾಮಾನ್ಯವಾಗಿ ಕಂಡು ಬರುವುದು. ಚಿಕ್ಕ ಹೆಂಡತಿಯು ಪ್ರಬುದ್ಧಳಾಗುವವರೆಗೆ (ಮತ್ತು ಅಷ್ಟರೊಳಗಾಗಿ) ಗಂಡನು ವೇಶ್ಯೆಯ ಸಹವಾಸದಲ್ಲಿ ಪ್ರೋಬೇಶನರ (= ಪದಪೀಧರ) ನಾಗುವುದು ನಮ್ಮ ದೇಶದಲ್ಲಿಯೆ ತೀರ ಸ್ವಲ್ಪ ಕಾಲದ ಮುಂಚೆ ಕಂಡುಬರುತ್ತಿದ್ದಿತು. ಯಾವ ಸಮಾಜದಲ್ಲಿ ಗಂಡನಿಗೆ ಒಂದೇ ಕಾಲಕ್ಕೆ ಒಬ್ಬಳಿಗಿಂತ ಹೆಚ್ಚು ಹೆಂಡಂದಿರನ್ನು ಮದಿವೆಯಾಗುವುದು ಧರ್ಮಸಮ್ಮತವಾಗಿದೆಯೊ ಆ ಸಮಾಜದಲ್ಲಿ ಹೆಂಗಸಿನ ಯೋಗ್ಯತೆಯಾಗಲಿ ಸ್ಥಾನ-ಮಾನಗಳಾಗಲಿ ಕಡಮೆ ದರ್ಜೆಯವಿರುವುವು. ಇದಲ್ಲದೆ ಮದಿವೆಯು ಕೇವಲ ಧರ್ಮದ ಆಜ್ಞೆ ಎನಿಸುವಲ್ಲಿ ರತಿರಂಜನೆಗೆ ಅನ್ಯ ಸ್ತ್ರೀಯಳು ಬೇಕೆನಿಸುವುದು ಮಾತಿಲ್ಲದೆ ಒಪ್ಪಿಕೊಂಡ ತತ್ತ್ವವಾಗಿದ್ದಿತು. ಕಮಾಲನ ತಾರುಣ್ಯಕಾಲದ ತುರ್ಕಸ್ಥಾನದ ಸಮಾಜವು ಈ ಮಟ್ಟಿಲಿನಲ್ಲಿದ್ದಿತು. ಸ್ತ್ರೀಯರ ವಿಷಯವಾಗಿಯೂ ರತಿಯ ವಿಷಯವಾಗಿಯೂ ಇಂತಹ ಧೋರಣೆಯು ಕಮಾಲನಿಗೆ ರಕ್ತಗತವಾಗಿದ್ದಿತೆಂದು ಹೇಳಬಹುದು. ಇದರ ಜೊತೆಗೆ ಕಮಾಲನ ದರ್ಪಬುದ್ಧಿಯೊಂದು; ಆದಕಾಗಿ ತಾರುಣ್ಯದಲ್ಲಿ ಸೈನ್ಯಶಿಕ್ಷಣಸಂಸ್ಥೆಯಲ್ಲಿದ್ದಾಗ ಇವನಿಗೆ 'ಮಿತ್ರ' ಎಂಬವರು ಯಾರೂ ಇದ್ದಿರಲಿಲ್ಲ. ಮನಸಿನ ಮಾತುಗಳನ್ನು ಹೇಳಬೇಕು, ಮಂದಿಯಿಂದ 'ಭೇಷ್' ಎನಿಸಿಕೊಳ್ಳಬೇಕು ಎಂಬ ಹೆಮ್ಮೆಯ ಹಟ ಬೇರೆ. ಸೂಳೆಯರ ಮನೆಯನ್ನು ಸೇರುವುದು,

ಮನದಣಿ ಮದ್ಯವನ್ನು ಸುರಿಯುವುದು, ಮದೋನ್ಮತ್ತನಾಗಿ ಮನೋಗತ ಆಕಾಂಕ್ಷೆಗಳನ್ನು ವಾಕ್‌ಪ್ರವಾಹದಿಂದ ಹೇಳಿಕೊಳ್ಳುವುದು; 'ಕೊಡೋ ಗಿರಾಕಿ' ಎಂಬ ಭಾವನೆಯಿಂದಾದರೂ ಆ ಸೂಳೆಯರು ಇವನ ಸಾಹಸದ, ಬುದ್ಧಿವುತ್ತೆಯ ಮಾತುಗಳನ್ನು ನಂಬಿದಂತೆ ನಟಿಸಿ ಪ್ರೋತ್ಸಾಹಿಸುವುದು. ಹೀಗೆ ಕಮಾಲನು ಹೆಚ್ಚಾಗಿ ಅಹಂಕಾರ ಬುದ್ಧಿಯ ತೃಪ್ತಿಗಾಗಿಯೆ ಸೂಳೆಯರ ಮನೆಯನ್ನು ಸೇರುತ್ತಿದ್ದನೆಂದು ಹೇಳಬಹುದು. 'ಸ್ತ್ರೀಯರೆಂದರೆ ಕಾಮದ ಬುಟ್ಟಿ, ಕಾಲ್ಕೆಳಗಿನ ಕಸ ಎಂದು ತಿಳಿದು ಕಮಾಲನು ಪಶುವಿನಂತೆ ಅವರೊಡನೆ ವರ್ತಿಸುತ್ತಿದ್ದನು' ಎಂದು ಮುಂತಾಗಿ ಅನೇಕ ಚರಿತ್ರಕಾರರು ಬರೆದುದು ನಂಬಲಸಾಧ್ಯವಾಗಿದೆ. ವ್ಯವಹಾರದಲ್ಲಿ ಪುರುಷರಿಂದ ದೂರಾಗಿ, ಏಕಾಂತವಾಗಿ ಸ್ತ್ರೀಯರಿರುವ ಸಮಾಜದಲ್ಲಿ ಗಂಡಸಿಗೆ ಸ್ತ್ರೀದರ್ಶನದಿಂದ ಕಾಮವಾಸನೆ ಉದ್ಭವಿಸುವದೇನೊ ಸಹಜವೆನಬಹುದು. ಆದರೆ ಕಮಾಲನ ಗಟ್ಟಿಗತನವನ್ನೂ ಕಷ್ಟಸಹಿಷ್ಣುತೆಯನ್ನೂ ಅರಿತರೆ ಅವನಿಗೆ ಸ್ತ್ರೀ ವಿಷಯದಲ್ಲಿ ಮನೋನಿಗ್ರಹವಿರಲಿಲ್ಲ ಎಂದು ಯಾರೂ ಹೇಳುವಂತಿಲ್ಲ. ಕಾಮವಾಸನೆಯಲ್ಲಿ ಪೌರ್ವಾತ್ಯರು—ಎಂದರೆ ನಾವು—ಪಶುಗಳೆ ಆಗಿರುವೆವೆಂದು ಹೇಳುವುದು ಪಾಶ್ಚಾತ್ಯರ—ಯುರೋಪೀಯ ಜನರ—ಹಟವಾಗಿದೆ, ಹುಚ್ಚು ಹಿರಿತನದ ಹೆಮ್ಮೆಯಾಗಿದೆ. ಕಮಾಲನಿಗೆ ಇಂದ್ರಿಯನಿಗ್ರಹ ವಿಷ್ಟೆ ಇರಲಿಲ್ಲ, ಇಂದ್ರಿಯ—ಸಂಗ್ರಹ (Sublimation) ವಾದರೂ ಇದ್ದಿತೆಂದು ಹೇಳಬಹುದು. ಇಂದ್ರಿಯಗಳ ಪ್ರವೃತ್ತಿಯನ್ನು ಸಹಜವಾದುದಕ್ಕಲ್ಲದೆ ಶ್ರೇಷ್ಠವಾದ ಕಾರ್ಯಕ್ಕೆ ಸಂಗ್ರಹಿಸಿದುದರ ದೃಷ್ಟಾಂತವು ಇವನ ಇಡಿಯ ಜೀವನದಲ್ಲಿ ಕಂಡುಬರುವುದು. ತರುಣನಿದ್ದಾಗ ಕೆಲವೊಂದು ಸಲ ಸಹಜವಾಗಿಯೆ ಇವನು ಸೂಳೆಗೇರಿಯನ್ನು ಸೇರಿರಬಹುದು. ಆದರೆ ಕೂಡಲೆ ತನ್ನ ಸ್ವಭಾವವೈಶಿಷ್ಟ್ಯಕ್ಕೆ ಅಲ್ಲಿ ತೃಪ್ತಿ ದೊರೆಯುವುದೆಂದು ಕಂಡುಹಿಡಿದು ಮುಂದೆ ಬುದ್ಧಿಪೂರ್ವಕವಾಗಿ ಕಮಾಲನು 'ಸೂಳೆಸಂಸಾರಿಗ' ನಾಗಿರಬಹುದು. ಸೂಳೆಯ ವಿಷಯವೆ ಮದ್ಯದ ವಿಷಯ; ಅಥವಾ ಮದ್ಯಸೇವನೆಗೆ ಇವನ ಸ್ವಭಾವವೃತ್ತಿಯು

ಇನ್ನೊಂದು ಕಾರಣಕ್ಕಾಗಿ ಪ್ರೇರಕವಾಯಿತೆಂದು ಹೇಳಬಹುದು. ಯಾವಾಗಲೂ ಕಾರ್ಯದಲ್ಲಿ ನಿರತನಾಗಿರಬೇಕೆನುವ ಸ್ವಭಾವ ಕಮಾಲ ನದು. ಕಾರ್ಯದಲ್ಲಿ ತೊಡಗಿದರೂ ಅದೆಂತಹ ಕಾರ್ಯಾವೇಶ! ಹಸಿವೆ-ನೀರಡಿಕೆ-ನಿದ್ದೆ-ದಣಿವುಗಳ ಪರಿವೆ ಇಲ್ಲದೆ ದುಡಿಯುವುದು. ಸಾರಾಸಾರ ವಿಚಾರದ ತರುವಾಯ, ದೃಢವಾಗಿ ನಿಶ್ಚಯಿಸಿದ ತರುವಾಯ, ಮನಸಿಗೆ ಒಪ್ಪಿಗೆಯಾಗಿ ಅದನ್ನು ಮಾಡದಿದ್ದರೆ ಮನಸ್ಸು ತೃಪ್ತಿಯನ್ನು ಪಡೆಯುವುದಿಲ್ಲವೆಂದು ಕಂಡ ತರುವಾಯ ಕಾರ್ಯವನ್ನು ಕೈಕೊಳ್ಳುವ ಕರ್ಮವೀರನಿವ. ಹೀಗಿದ್ದುದರಿಂದ ಕಾರ್ಯಕ್ಕಾಗಿ ಆವೇಶ, ಕಾರ್ಯದಲ್ಲಿ ತನ್ಮಯತೆ ಇವನಲ್ಲಿ ಕಂಡು ಬರುವುವು. ಯಾವಾಗಲೂ ಕಾರ್ಯನಿರತನಾಗಿರಬೇಕೆನುವ ಇವನಿಗೆ ಯಾವಾಗಲೂ ಆವೇಶ, ಯಾವಾಗಲೂ ತನ್ಮಯತೆ ಇವುಗಳಿದ್ದರೆಯೆ ಸಮಾಧಾನವಿರುತ್ತಿದ್ದಿತು. ಒಂದು ವೇಳೆ ಕೈಯಲ್ಲಿ ಕಾರ್ಯವೆ ಇಲ್ಲದಿದ್ದರೆ—? ಆಗಲೂ ಆವೇಶ ಬೇಕು, ತನ್ಮಯತೆ ಬೇಕೇಬೇಕು. ಅವುಗಳನ್ನು ಪಡೆಯುವುದಕ್ಕಾಗಿ ಮದ್ಯವು ಒಂದು ಉಪಾಯ. 'ಮದ್ಯ-ಮಾನಿನಿಯರ ಮೋಹ ಇಳಿದ ಮೇಲೆ ನಾಚಿಕೆಯಿಂದಾಗಲಿ, ಇಳಿದುದಕ್ಕೆ ಅತೃಪ್ತಿಯ ಕೋಪದಿಂದಾಗಲಿ ಕಮಾಲನು ರಾಷ್ಟ್ರಸುಧಾರಣೆಯ ಕೆಲಸವನ್ನು-ಆವೇಶದಿಂದ-ಕೈಕೊಳ್ಳುತ್ತಿದ್ದನು' ಎಂದು ಒಬ್ಬ ಚರಿತ್ರಕಾರನು ಬರೆದಿದ್ದಾನೆ! ಇದು ಆ ಚರಿತ್ರಕಾರನ ದೃಷ್ಟಿದೋಷ ಎಂದೇ ನಮ್ಮ ಅಭಿಪ್ರಾಯ. ವೈದ್ಯರ ಉಪಜೀವನ ಸಾಗಲಿ ಎಂಬ ಕರುಣಾಬುದ್ಧಿಯಿಂದ ರೋಗಗಳನ್ನು ತಂದುಕೊಳ್ಳುವ ಮಹಾತ್ಮರು ಎಲ್ಲಿಯ ವರೆಗೆ ಈ ಜಗತ್ತಿನಲ್ಲಿ ಹುಟ್ಟುವುದಿಲ್ಲವೊ ಅಲ್ಲಿಯ ವರೆಗೆ ನಾವು ಮೇಲಿನ ಮಾತನ್ನು ನಂಬುವುದಿಲ್ಲ. ಮದ್ಯವಾಗಲಿ ಮಾನಿನಿಯರಾಗಲಿ ಕಮಾಲನಿಗೆ ವ್ಯಸನವಾಗಿರಲಿಲ್ಲ; ಸ್ವಭಾವಪರಿಪೋಷಕದ್ರವ್ಯಗಳಾಗಿದ್ದುವು ಎಂದು ಹೇಳುವುದು ಅತಿಶಯೋಕ್ತಿಯೂ ಅಲ್ಲ, ಅಂಧಭಕ್ತಿಯೂ ಅಲ್ಲ. ಕಮಾಲನ ಬೆಳವಣಿಗೆಯನ್ನು ಸಾಮಾನ್ಯರ ಅನುಭವಗಳಿಂದ ಅಳೆಯುವಂತಿಲ್ಲ. ತನ್ನ ವಿಚಾರಗಳನ್ನು ತನ್ನಲ್ಲಿಯೆ ತಡೆದುಕೊಂಡು ಬೆಳೆಸುವಂತೆ ಅವನು ತನ್ನ ಇಂದ್ರಿಯಗಳನ್ನಾದರೂ

ತನ್ನಲ್ಲಿಯೆ ತಡೆದುಕೊಂಡು ಬೆಳೆಸಿದನು. ಆದಕಾಗಿಯೇ ಅವನಿಗೀಗ ನಾವು 'ವಿರಾಟಪುರುಷ' ಎಂಬ ಬಿರುದನ್ನು ಕೊಡಬಯಸಿದ್ದೇವೆ. ತನ್ನ ಅವಯವಗಳನ್ನು ಸುಟ್ಟು ಹೊಸಸೃಷ್ಟಿಯನ್ನು ನಿರ್ಮಿಸಿದನು ವೇದದ ವಿರಾಟಪುರುಷ; ತನ್ನ ಇಂದ್ರಿಯಗಳ (ಸಹಜ ಪ್ರವೃತ್ತಿಯ)ನ್ನು ಸುಟ್ಟು ಹೊಸಸೃಷ್ಟಿಯನ್ನು ನಿರ್ಮಿಸಿದನು ಈ ಅವೈದಿಕ ವಿರಾಟ ಪುರುಷ. ಸ್ತ್ರೀಯರಿಗಾಗಿ ಕಮಾಲನಿಗೆ ಯಾವ ಭಾವನೆ ಇದ್ದಿತೆಂದೂ ಸ್ತ್ರೀಯರ ಸ್ಥಿತಿ-ಗತಿಗಳ ಸುಧಾರಣೆಗಾಗಿ ಅವನು ಯಾವ ವಿಚಾರ ಗಳನ್ನು ಕಾರ್ಯರಂಗಕ್ಕೆ ತಂದನೆಂದೂ ಹಿಂದೆ ಒಂದು ಸಂದರ್ಭದಲ್ಲಿ ಸೂಚಿಸಿದ್ದೇವೆ. ಮದ್ಯಮಾನಿನಿ-ಮೋಹವು ಮೂಲದಲ್ಲಿ ಅಹಂಕಾರ ಪ್ರವೃತ್ತಿಗೆ ಹೇಗೆ ಸಂಬಂಧಿಸಿದೆ ಎಂಬುದನ್ನಿಷ್ಟೆ ಇಲ್ಲಿ ಹೇಳಬೇಕಾಗಿತ್ತು. ಈ ವಿಷಯಕ್ಕೆ ಮಿಕ್ಕ ಚರಿತ್ರೆಗಳಲ್ಲಿ ಸಲ್ಲದ ಪ್ರಾಧಾನ್ಯವಿದ್ದುದರಿಂದ ಅದನ್ನು ವಿವರವಾಗಿ ಚರ್ಚಿಸಬೇಕಾಯಿತು. ಇನ್ನು ಅದೇ ಅಹಂಕಾರ ಪ್ರವೃತ್ತಿಗಾಗಿ ಕಮಾಲನಿಗೆ ಶಿಕ್ಷಣವಿಲ್ಲದೆ ಹೋಯಿತೆಂದು ಮೊದಲು ಹೇಳಿದ ಮಾತನ್ನೆ ಮುಂದರಿಸುವಾ.

* * *

ಕಮಾಲನಿಗೆ ಶಿಕ್ಷಣಸಂಸ್ಥೆಯ ಸಂಸ್ಕಾರವೆ ಇರಲಿಲ್ಲವೆಂದು ಹೇಳಿದೆಯಷ್ಟೆ. ಈ ಕಾರಣಕ್ಕಾಗಿ ಅವನ ಸ್ವಭಾವದಲ್ಲಿ ಮಿಕ್ಕಸರ್ವಾಧಿ ಕಾರಿಗಳಿಗಿಂತ ಬೇರೆಯಾದ ಒಂದು ವೈಶಿಷ್ಟ್ಯವು ಕಂಡುಬರುವುದು. ಕಮಾಲನು ಗ್ರಂಥಗಳನ್ನು ಓದಲಿಲ್ಲ, ಬರಿಯ ಪಾಂಡಿತ್ಯದ ಪ್ರಭಾವಕ್ಕೆ ಪರತಂತ್ರನಾಗಲಿಲ್ಲ, ಕೇವಲ ತತ್ತ್ವಗಳನ್ನು ತುಂಬಿಕೊಂಡು ತಲೆಹಿಡಿದು ಕುಳಿತುಕೊಳ್ಳಲಿಲ್ಲ, ತಾತ್ತ್ವಿಕ ಧ್ಯೇಯದ ದಾಸನಾಗಿ ಬರಿಯ ಶಬ್ದಗಳ ಜಾಲದಲ್ಲಿ ತನ್ನ ವಿಚಾರಗಳನ್ನು ತೊಡಕಿಸಲಿಲ್ಲ. ಜಗತ್ತಿನಲ್ಲಿ ಯಾವ ಕ್ರಾಂತಿಯನ್ನು ನೋಡಿದರೂ ಅದಕ್ಕೊಂದು ತಾತ್ತ್ವಿಕ ಧ್ಯೇಯ ಕಂಡು ಬರುವುದು. ಯಾವ ಕ್ರಾಂತಿಯಿಂದ ದಾಸ್ಯಸಂಕೋಲೆಗಳು ಕಡಿದು ಬೀಳಬೇಕಾಗಿವೆ; ಯಾವುದರಿಂದ ಸಕಲರಿಗೂ ಸಮನಾದ ಸ್ವಾತಂತ್ರ್ಯ

ಸಾಧಿಸಬೇಕಾಗಿದೆ; ಯಾವುದರಿಂದ ಎಲ್ಲರಿಗೂ ದುಡಿದು ದೊಡ್ಡವರಾಗುವ ಅವಕಾಶ ದೊರೆಯಬೇಕಾಗಿದೆ; ಯಾವುದರಿಂದ ದೇಶದ ಸಂಪತ್ತು ಸರಿಯಾಗಿ ಎಲ್ಲರಲ್ಲೂ ಹಂಚಲ್ಪಡಬೇಕಾಗಿದೆ; ಯಾವುದರಿಂದ ಧನಮದಾಂಧರ ಸೊಕ್ಕು ಅಡಗಬೇಕಾಗಿದೆ; ಯಾವುದರಿಂದ ಸಾಮ್ರಾಜ್ಯ ಲಾಲಸೆಯ ಜ್ವಾಲೆಯನ್ನು ನೊಂದಿಸಬೇಕಾಗಿದೆ; ಯಾವುದರಿಂದ ಜಗತ್ತೇ ಸ್ವರ್ಗವಾಗಬೇಕಾಗಿದೆ. ಆದರೆ ಕಮಾಲನ ಕ್ರಾಂತಿಯಲ್ಲಿ ಇಂತಹ ದೊಂದೂ ಕೂಗು ಇರಲಿಲ್ಲ. ಸಮಾಜದ ಸಾಮ್ರಾಜ್ಯವಾದಿಗಳನ್ನು ಮುರಿದೊಗೆಯಲು ಸನ್ನದ್ಧರಾದ ರಶಿಯಾದ ಕ್ರಾಂತಿಕಾರಕರು ಕಮಾಲನೂ ತಮ್ಮ ಧ್ಯೇಯದವನೆ ಎಂದೆಣಿಸಿದರು. ಅವರಿಗೆ ಯಾವ ಉತ್ತರವನ್ನು ಕಮಾಲನು ಕೊಟ್ಟನೆಂಬುದನ್ನು ಹಿಂದೆಯೆ ಹೇಳಿದ್ದೇವೆ. ಸಮಾಜ ಬಾಂಧವರ ಸ್ಥಿತಿ-ಗತಿಗಳ ಹೆಚ್ಚು ಕೊರತೆಗಳನ್ನು ಸರಿಪಡಿಸಬೇಕೆನುವ ಸಮತಾವಾದವೂ ಕಮಾಲನದಲ್ಲ. ದೇಶದ ಧನವನ್ನು ದೇಶಬಾಂಧವರಿಗೆ ಸಮನಾಗಿ ಹಂಚಬೇಕೆನುವ ಧ್ಯೇಯವು ಕಮಾಲನನ್ನು ಮರುಳುಗೊಳಿಸಲಿಲ್ಲ. ಸಮತಾವಾದವೇನೊ ಸರಿಯಾದ ಮಾರ್ಗವೆಂದೇ ಇಟ್ಟುಕೊಳ್ಳೋಣ; ದೇಶದ ಧನವನ್ನು ದೇಶಕ್ಕಾಗಿ ದುಡಿಯುವ ಎಲ್ಲರಲ್ಲೂ ಸಮನಾಗಿ ವಿಭಾಗಿಸಬೇಕೆಂಬುದೂ ಸದುದ್ದೇಶವೆಂದೇ ಭಾವಿಸೋಣ. ಆದರೆ ವಿಭಾಗಿಸಲು ಮೊದಲು ಧನನಿಧಿಯಾದರೂ ಬೇಕಲ್ಲ ? ಸದ್ಯಕ್ಕೆ ತುರ್ಕಸ್ತಾನದಲ್ಲಿ ಸಮನಾಗಿ ಹಂಚಬೇಕಾದುದು ಧನವಲ್ಲ, ದಾರಿದ್ರ್ಯ. ಭಾರವಾದ ಸಾಲ, ಉದ್ಯೋಗ-ವ್ಯವಸಾಯಗಳ ಅಭಾವ, ಮೇಲೆ ತೊಗಲಿನಂತೆ ಅಂಟಿಕೊಂಡ ಅಜ್ಞಾನ; ಇದಿಷ್ಟೆ ಸಾಕಾಗಲಿಲ್ಲವೇನೊ ಎನುವಂತೆ ಧರ್ಮದಾಸ್ಯದಿಂದ ಬಂದ ಸಂಕುಚಿತದೃಷ್ಟಿ. ಮೊದಲು ಈ ಜನರಿಗೆ ತಮಗಾಗಿ ಅಭಿಮಾನ ಬೇಕು, ಜೀವನದಲ್ಲಿ ಆಸಕ್ತಿ ಬೇಕು, ಧರ್ಮಕ್ಕಿಂತ ಸಮಾಜ ಹೆಚ್ಚಿನದು ಪಂಥಕ್ಕಿಂತ ದೇಶ ಹೆಚ್ಚಿನದು ಎಂಬ ಭಾವನೆ ಬೇಕು, ದೇಶಕ್ಕಾಗಿ ದುಡಿಯುವುದರಲ್ಲಿ ಸ್ವಾರ್ಥ-ಪರಾರ್ಥ ಸಾಧನೆ ಇದೆ ಎಂಬ ಅರಿವು ಬೇಕು, ಜ್ಞಾನವಿಲ್ಲದೆ ಹೋದರೆ ಇಂದಿನ ಜಗತ್ತಿನಲ್ಲಿ ಬದುಕುವುದು ಸಾಧ್ಯವಿಲ್ಲ ಎಂಬ ಎಚ್ಚರ ಬೇಕು, ಧನದ

ಉಪಯುಕ್ತತೆ ತಿಳಿಯಬೇಕು; ಅಲ್ಲಿಯವರೆಗೆ ಸಮಾಜಸತ್ತಾವಾದವು 'ನೀರಿಳಿಯದ ಗಂಟಲಲ್ಲಿ ಕಡಬು ತುರುಕಿದಂತೆ'; ಇದಲ್ಲದೆ ಮುಖ್ಯವಾದ, ಮೂಲಭೂತವಾದ ಕಾರ್ಯವನ್ನು ಬಿಟ್ಟು ಉದಾತ್ತವಾದರೂ ದೂರ ದಲ್ಲಿದ್ದ ಧ್ಯೇಯಕ್ಕಾಗಿ ಹಣಗಾಡಿದರೆ ದೇಶದಲ್ಲಿ ಅನವಶ್ಯಕವಾದ ಪಂಗಡಗಳು ಬೆಳೆಯಬಹುದು. ಕಮಾಲನ ದೃಷ್ಟಿ ಸೈನಿಕನ ದೃಷ್ಟಿ, ಎದುರು ಕಾಣಿಸಿದ್ದಕ್ಕೆಯೆ ಗುರಿ ಇಡುವ ದೃಷ್ಟಿ, ಹವೆಯಲ್ಲಿ ಗುಂಡು ಹಾರಿಸುವ ಹೃದಯಾವೇಶವು ಅವನಿಗೆ ಎಂದಿಗೂ ಸಮ್ಮತವೆನಿಸದು. ಇಂತಹ ಕಾರಣಕ್ಕಾಗಿ ಕಮಾಲನಿಗೆ ಇಂದಿನವರೆಗೆ ಯಾವ ತಾತ್ತ್ವಿಕ ಧ್ಯೇಯಕ್ಕಾಗಿಯೂ ಮನಸ್ಸು ಸೋತಿಲ್ಲ. ಮಾನವನ ಜೀವನ, ಮಾನವನ ಧ್ಯೇಯ, ಮಾನವನ ಪ್ರಗತಿ, ವಿಶ್ವದ ಬೆಳವಣಿಗೆ, ವಿಶ್ವ ಬಾಂಧವ್ಯ, ಪರಾರ್ಥಸಾಧನೆ, ಪುಣ್ಯಸಂಪಾದನೆ ಇಂತಹ ಶಬ್ದಗಳಿಗೆ ಕಮಾಲನ ದೃಷ್ಟಿಯಿಂದ ಅರ್ಥವೆ ಇಲ್ಲ; ಇಂತಹ ಶಬ್ದಗಳಿಂದ ಸೂಚಿತ ವಾದ ವಸ್ತುಗಳೆ ಇಲ್ಲವೆಂದೂ ಅವನು ತಿಳಿದಿರಲು ಸಾಕು. ತುರ್ಕಸ್ತಾನವೆ ಅವನ ವಿಶ್ವ, ತುರ್ಕೀಯನೆ ಅವನಿಗೆ ಗೊತ್ತಿದ್ದ ಮಾನವ, ಆ ತುರ್ಕೀ ಯನ ಅಜ್ಞಾನ–ದಾರಿದ್ರ್ಯಗಳೆ ಪಾಪ, ಅವುಗಳನ್ನೆ ಸುಧಾರಿಸುವುದು ಪುಣ್ಯ. ತುರ್ಕಸ್ತಾನಕ್ಕೆ ಮತ್ತು ತುರ್ಕೀಯನಿಗೆ ಸಂಬಂಧವಿಲ್ಲದ ವಿಷಯವು ಅವನಿಗೆ ಅನವಶ್ಯಕ ಇಲ್ಲವೆ ಅಸತ್ಯ ಎಂದು ತೋರುವುದು. ಅದಕಾಗಿಯೆ ಮುಹಮ್ಮದೀಯ ಧರ್ಮದ ಇಲ್ಲವೆ ಆ ಧರ್ಮಸಾಮ್ರಾ ಜ್ಯದ ಮೋಹ ಅವನಿಗಿರಲಿಲ್ಲ. ತನ್ನ ದೇಶಕ್ಕೆ ದಾಸ್ಯ–ದಾರಿದ್ರ್ಯಗಳು ಒದಗಲು ಈ ಧರ್ಮವೂ ಅದರ ಉಪದೇಶಕರೂ ಈ ಧರ್ಮಸಾಮ್ರಾ ಜ್ಯದ ಕಲ್ಪನೆಯೂ ಬಹುಮಟ್ಟಿಗೆ ಕಾರಣವೆಂದು ಅವನು ದೃಷ್ಟಾಂತ ಗಳನ್ನು ಕೊಟ್ಟು ಹೇಳುತ್ತಿದ್ದನು. ಸಾಕು. ತುರ್ಕಸ್ತಾನದ ಬೆಳವಣಿಗೆಗೆ ವಿರೋಧಕವಾದುದೆಂದ ಮೇಲೆ ಆ ವಿಷಯಕ್ಕೆ ತನ್ನ ವ್ಯವಹಾರದಲ್ಲಿ ಎಡೆಯೆ ಇಲ್ಲ. ಮುಹಮ್ಮದೀಯ ಧರ್ಮಾಭಿಮಾನಿಗಳಿಗೆ ಅವನು ಕೊಟ್ಟ ಉತ್ತರವನ್ನು ಹಿಂದೆ ಕಾಣಿಸಿದ್ದೇವೆ. ಆ ಮಾತಿನಲ್ಲಿ 'ಧರ್ಮಲಂಡತನ' ವಿಲ್ಲ, ವ್ಯವಹಾರವನ್ನೆದುರಿಸುವ ಸತ್ಯದೃಷ್ಟಿಯ ಧೈರ್ಯವಿದೆ.

ಕಮಾಲನು ಶಿಕ್ಷಣ-ಸಂಸ್ಥೆಯಲ್ಲಿ ತರಬೇತಾಗಿದ್ದರೆ ಅವನ ವಿಚಾರಗಳು ಯಾವ ಮಾರ್ಗವನ್ನನುಸರಿಸುತ್ತಿದ್ದುವೆಂಬುದನ್ನು ಹೇಳಬೇಕಾಗಿಲ್ಲ. 'ನಮ್ಮನ್ನು ಹುಟ್ಟಿಸಿದವನು ದೇವನು, ಅವನು ತೋರಿಸಿದ ದಾರಿ ಎಂದರೆ ನಮ್ಮ ಧರ್ಮ, ಆ ದಾರಿಯಲ್ಲಿ ಪಾಪವಾಸನೆಗಳು ಅಡಗಿದ್ದರಿಂದ ಧರ್ಮ-ಗುರುಗಳ ಸಹಾಯವಿಲ್ಲದೆ ನಡೆಯುವುದು ಶಕ್ಯವೆ ಇಲ್ಲ, ಆದುದರಿಂದ ಧರ್ಮಗುರುಗಳು ಹೇಳಿದಂತೆ ನಡೆಯುವುದೆ ಪ್ರತಿಯೊಬ್ಬನ ಕರ್ತವ್ಯ' ಎಂಬ ಪಾಠವನ್ನು ಎಳೆತನದಲ್ಲಿಯೆ ಮೈಗೂಡಿಸಿಕೊಂಡು ಮುಂದೆ ಅದರ ಯುಕ್ತಾಯುಕ್ತತೆಯನ್ನು ನೋಡುವ ಶಕ್ತಿ ಇಲ್ಲದೆ ಹೋಗುತ್ತಿತ್ತು.

ಹಿಟ್ಲರ್-ಮುಸೋಲಿನಿಯವರಿಗಿದ್ದಂತೆ ಕಮಾಲನಿಗೆ ಸಾಮ್ರಾಜ್ಯ ಲಾಲಸೆ ಇಲ್ಲ; ಈ ಸಂಗತಿಗೂ ಮೇಲಿನ ಕಾರಣವನ್ನೆ ಕೊಡಬಹುದು. ಹಿಟ್ಲರನಾಗಲಿ ಮುಸೋಲಿನಿಯಾಗಲಿ ಕಮಾಲನಿಗಿಂತ ಹೆಚ್ಚು ಸುಶಿಕ್ಷಿತರಿದ್ದಾರೆ. ಸ್ವಾರ್ಥದ ದೃಷ್ಟಿಯಿಂದಲೂ ಆರ್ಥಿಕದೃಷ್ಟಿಯಿಂದಲೂ ತಮಗೆ ಸಾಮ್ರಾಜ್ಯವು ಅತ್ಯವಶ್ಯವಾಗಿದೆ ಎಂದು ಅವರು ದೃಢವಾಗಿ ನಂಬಿಕೊಂಡಿದ್ದಾರೆ. ಸಾಮ್ರಾಜ್ಯಸಂಪಾದನೆಯು ದೇಶಕ್ಕೆ ಹಿತಕರನೆಂದು ತಿಳಿಯುವರಲ್ಲದೆ ತಮ್ಮ ವೈಯಕ್ತಿಕ ಧ್ಯೇಯವೆಂದೂ ಇಟ್ಟುಕೊಂಡಿದ್ದಾರೆ. ಇವರಿಬ್ಬರೂ ಧ್ಯೇಯವಾದಿಗಳು. 'ರೋಮಸಾಮ್ರಾಜ್ಯವು ಹಿಂದಿನ ಕಾಲದಲ್ಲಿ ಜಗತ್ತಿನಲ್ಲಿ ತನ್ನ ಪ್ರಭಾವವನ್ನು ಹರಡಿಸಿ ಜಗತ್ತಿಗೆಯೆ ಆದರ್ಶಭೂತವಾಗಿದ್ದಿತು. ಇಂದು ನಾವು ಮತ್ತೆ ರೋಮವನ್ನು ಜ್ಞಾನದ, ಪ್ರಗತಿಯ, ವೈಭವದ ಕೇಂದ್ರವನ್ನು ಮಾಡೋಣ' ಎಂದು ಬಾಯ್ದೆರೆದು ಕುರಿಗಳಂತೆ ಹಿಂಡುಗಟ್ಟಿ ನಿಂತ ಬಾಂಧವರೆದುರು ದಿನಾಲು ಮುಸೋಲಿನಿಯು ಆವೇಶದ ಹಾವ-ಭಾವಗಳಿಂದ ಕೂಗುವನು. 'ಜರ್ಮನ ಜನಾಂಗವು ಅತ್ಯಂತ ಜ್ಞಾನಸಂಪನ್ನವಾದುದು; ಇಡಿಯ ಜಗತ್ತಿಗೆ ಮಾರ್ಗದರ್ಶಕನಂತೆ ಮುಂದಾಗಿ ನಡೆಯುವ ಜನಾಂಗ; ಅದು ಇನ್ನೊಬ್ಬರಿಗೆ ಎಂದಿಗೂ ಶರಣುಹೊಕ್ಕು ಹಿಂಬಾಲಿಸಲಿಕ್ಕಿಲ್ಲ; ೧೯೧೮ರಲ್ಲಿ ಜರ್ಮನಿ ಸೋತುದು ಅನ್ಯಜನಾಂಗಗಳು (ಯಹೂದೀಯರು) ಅದರಲ್ಲಿ ಬಂದು ಸೇರಿ ಘಾತುಕತನವನ್ನು ತೋರಿಸಿದ್ದಕ್ಕೆ; ಆದುದರಿಂದ

ಈಗ ನಾವು ನಮ್ಮ ಜನಾಂಗವನ್ನು ಪವಿತ್ರಗೊಳಿಸೋಣ' ಎಂದು ರಕ್ತಶುದ್ಧಿಗಾಗಿ ಔಡಲೆಣ್ಣೆ ಕೊಡುವಂತೆ (ನಿಜವಾಗಿಯೆ ಶಿಕ್ಷೆ ಎಂದು ಯಹುದೀಯರಿಗೆ ಔಡಲೆಣ್ಣೆ ಕುಡಿಸಿದ್ದುಂಟು) ಬೇಡಾದವರನ್ನು ಕಡಿದೊಗೆವುತ್ತ ಹಿಟ್ಲರನು ಹುಂಕರಿಸುತ್ತಿರುವನು. ಕಮಾಲನ ರೀತಿಯೆ ಬೇರೆ. 'ತುರ್ಕಸ್ತಾನವು ತುರ್ಕಸ್ತಾನವೆ ಆಗಿರಬೇಕು. ಅದಕ್ಕೆ ಅನ್ಯರ ಗೊಡವೆ ಬೇಡ, ಸಾಮ್ರಾಜಸಂಪಾದನೆಯ ತೊಡಕು ಬೇಡ. ನಮ್ಮಲ್ಲಿ ಶಕ್ತಿಯನ್ನು ತಂದುಕೊಂಡು ನಾವು ಬಾಳಿದರೆ ಸಾಕು. ಸಾಮ್ರಾಜ್ಯ ಸಂಪಾದನೆಯು ಯುದ್ಧದ ಮಾರ್ಗ; ಯುದ್ಧದಿಂದ ಧನನಾಶ-ಜನನಾಶ ಎರಡೂ ಒದಗುವುವು. ಆದಕಾಗಿ ನಮಗೆ ಅದು ಬೇಡ' ಎನುತ್ತ ಕಮಾಲನು ತನ್ನ ಮನೆಯ ಮುಂದೆ ಮಾದರಿಯ ಒಕ್ಕಲತನವನ್ನು ನಡೆಸಿ ಕಾಲ ಕಳೆಯುತ್ತಾನೆ. ಕಮಾಲನಿಗೆ ದೇಶಾಭಿಮಾನವೆ ಸಾಧ್ಯವಾಗಿದೆ; ಹಿಟ್ಲರ-ಮುಸೋಲಿನಿಯವರಿಗೆ ದೇಶಾಭಿಮಾನವು ಸಾಧನವೆನಿಸಿದೆ. ದೇಶಾಭಿಮಾನವನ್ನೆ ಸಾಧಿಸಿದರೆ ಕಮಾಲನಿಗೆ ತೃಪ್ತಿ ಇದೆ; ದೇಶಾಭಿಮಾನದಿಂದ ಬೇರೆ ಆಕಾಂಕ್ಷೆಗಳನ್ನು ಸಾಧಿಸಿಕೊಳ್ಳಬೇಕಾಗಿದೆ ಹಿಟ್ಲರ್-ಮುಸೋಲಿನಿಯವರಿಗೆ. ಒಂದು ನಿಷ್ಕಾಮ ದೇಶಾಭಿಮಾನ, ಇನ್ನೊಂದು ದುಷ್ಟಕಾಮದ ದೇಶಾಭಿಮಾನ.

ಕೊನೆಯದಾಗಿ ಹೇಳುವ ಮಾತೆಂದರೆ ಕಮಾಲನ ನಿಷ್ಕಾಮ ಸ್ವಭಾವ; ವೀರನಾಗಿದ್ದಾನೆ, ವಿಜಯಿಯಾಗಿದ್ದಾನೆ, ಸೈನ್ಯದ ಸರ್ವಾಧಿಕಾರಿಯಾಗಿದ್ದಾನೆ, ದೇಶದಲ್ಲಿ ಲೋಕಪ್ರಿಯನಾಗಿದ್ದಾನೆ; ಇಂದು ಕಮಾಲನಿಗೆ ಬೇಡಿದ ವೈಭವವನ್ನು ಬೇಡ ಎನ್ನುವವರಿಲ್ಲ; ದುಡಿಯದಿದ್ದರೆ ದೂಷಿಸುವವರಿಲ್ಲ. ಆದರೆ ಅವನಿಗೆ ವೈಭವವು ಬೇಕಿಲ್ಲ. ಬಟ್ಟೆ-ತೊಟ್ಟಿಗಳ ಆಡಂಬರವಿಲ್ಲ, ಸೇವಕ-ಸಹಾಯಕರ ಸಡಗರವಿಲ್ಲ, ಮಿಷ್ಟಾನ್ನದ ಮೋಹವಿಲ್ಲ, ಮೆತ್ತನ್ನ ಹಾಸಿಗೆಗೆ ಮೈ ಸೋತಿಲ್ಲ. ಎಂದಿನಂತೆ ದೇಶಕ್ಕಾಗಿ ತನ್ನಷ್ಟಕ್ಕೆ ತಾನು ಮೈಮುರಿದು ಕಷ್ಟಬಡುವನು. ಚಿಕ್ಕಂದಿನಲ್ಲಿಯೆ ಕಮಾಲನಲ್ಲಿ ಈ ನಿಷ್ಕಾಮಸ್ವಭಾವವು ಬಿಂಬಿಸಿರಬೇಕು. ಕಮಾಲನು-ಮಿಕ್ಕ ಬಾಲಕರಂತೆ-ತಂದೆಯ ಸ್ವಭಾವವನ್ನು

ಸಹಜವಾಗಿಯೆ ವೈಗೂಡಿಸಿಕೊಂಡಿರಬಹುದು. ಅಲಿ-ರಿಝಾನಿಗೆ ತನ್ನ ಸೇವಾವೃತ್ತಿಯಲ್ಲಿ ಅನ್ಯಾಯದಿಂದ ಧನಸಂಪಾದನೆಯನ್ನು ಮಾಡುವುದು ಅಶಕ್ಯವಾಗಿರಲಿಲ್ಲ; ಹಾಗೆ ಮಾಡಿದರೂ ಅಂದಿನ ಸಮಾಜವು ಅವನನ್ನು ದೂಷಿಸುತ್ತಿದ್ದಿಲ್ಲ. ಸುಲ್ತಾನನ ಸೇವಕರರಿಗೆ ಅನ್ಯಾಯದಿಂದಲೂ ಅತ್ಯಾಚಾರದಿಂದಲೂ ಧನಸಂಪಾದನೆಯನ್ನು ಮಾಡುವುದು ಪರಂಪರಾಗತ ಧರ್ಮವಾಗಿದ್ದಿತು. ಆದರೂ ಅಲಿ ರಿಝಾನು ಸುಲ್ತಾನನಿಂದ ತನಗೆ ಸಲ್ಲತಕ್ಕ ಸಂಬಳದಿಂದಲೆ ಸಂಸಾರ ನಡೆಸಿದನು. ಯಾಕೆ? ನ್ಯಾಯವಾಗಿ ತನಗೆ ಸಾಕಷ್ಟು ದೊರಕುವಾಗ ಅತ್ಯಾಶೆ ಏಕೆ? ಅನ್ಯಾಯದ ಮಾರ್ಗವೇಕೆ? ತಂದೆಯ ಇದೇ ವೃತ್ತಿಯೆ ಮಗುವಿನ ಮನಸಿನಲ್ಲಿ ಮೂಡಿ ಇಂದಿಗೂ ಕಮಾಲನು ನಿಷ್ಕಾಮವೃತ್ತಿಯ ದೇಶಸೇವಕನಾಗಿದ್ದಾನೆ.

* * * *

ಈಗ ಕಮಾಲಪಾಶಾ ಇವರಿಗೆ ೫೭ ವಯಸ್ಸು. ಒಂದು ದೃಷ್ಟಿಯಿಂದ ಅವರನ್ನೂ ತರುಣರೆಂದೇ ಹೇಳಬಹುದು; ಆದರೆ ಅವರು ಸಹಿಸಿದ ಕಷ್ಟಗಳನ್ನೂ ಸಾಧಿಸಿದ ಕಾರ್ಯಗಳನ್ನೂ ಲಕ್ಷ್ಯದಲ್ಲಿಟ್ಟರೆ ಅವರ ಈ ಐವತ್ತೇಳೇ ವರ್ಷಗಳ ಕತೆಯು ಯುಗಮಾನದಷ್ಟುದ್ದವಾಗಿ ತೋರುವುದು. ಕಮಾಲರ ವಯಸ್ಸನ್ನು ವರ್ಷಗಳಿಂದ ಅಳೆಯುವಂತಿಲ್ಲ; ಅಥವಾ ಕಮಾಲರಿಗೆ ವಯಸ್ಸೇ ಇಲ್ಲವೆಂದು ಹೇಳಬಹುದು. ವೈಯಕ್ತಿಕವಾಗಿ ಅವರು ತಮ್ಮ ಜೀವನವನ್ನಾಗಲಿ ಅಸ್ತಿತ್ವವನ್ನಾಗಲಿ ಭಾವಿಸಿಕೊಂಡಿಲ್ಲವೆಂದು ಆಗಾಗ ಹೇಳಿದ್ದೇವೆ, ತೋರಿಸಿದ್ದೇವೆ. ಕಮಾಲರೆಂದರೆ ತುರ್ಕಸ್ಥಾನ; ತುರ್ಕಸ್ಥಾನದ ವಯಸ್ಸೇ ಕಮಾಲರ ವಯಸ್ಸು. ನೂರಾರು ವರ್ಷಗಳಿಂದ ಬೆನ್ನು ಬಾಗಿದ ತುರ್ಕಸ್ಥಾನವು ಈಗ ಸೆಟೆದು ನಿಂತಿದೆ; ಹಣೆತುಂಬ ಆಯಾಸದ ಗೆರೆಗಳಿಂದ ಅಂದಗೇಡಿಯಾದ ತುರ್ಕಸ್ಥಾನವು ಈಗ ಮುಖ ತುಂಬ ನಗೆಯಿಂದ ಕೂಡಿದೆ; ನೂರಾರು ವರ್ಷಗಳಿಂದ ಕಾಲ್ಮುರಿದು ಪ್ರಗತಿ ಹೊಂದದೆ ನಿಂತಿದ್ದ ತುರ್ಕಸ್ಥಾನವು ಇಂದು ತೊಡೆ

ಚಪ್ಪರಿಸುತ್ತ ಓಡುತ್ತಲಿದೆ; ಜ್ಞಾನದ ದೀಪವು ದೇಶದ ತುಂಬ ಪ್ರಕಾಶವನ್ನು ಹರಡಿದೆ; ವ್ಯವಸಾಯ–ಯಂತ್ರಗಳ ಸಂಗೀತನಿನಾದವು ದೇಶದ ತುಂಬ ಪ್ರತಿಧ್ವನಿಸುತ್ತಲಿದೆ. ಮುಪ್ಪಿನಿಂದ ಮೂಲೆ ಹಿಡಿದು ಬಿದ್ದುಕೊಂಡ ತುರ್ಕಸ್ಥಾನವು ತಾರುಣ್ಯದಿಂದ ತುಳುಕಿ ಬಳುಕುತ್ತಲಿದೆ. ಸತ್ತ ದೇಶಕ್ಕೆ ನೆತ್ತರವನ್ನಿತ್ತು ಚೈತನ್ಯವನ್ನು ತುಂಬಿದ **ನಿಷ್ಕಾಮ ವೀರ ಕಮಾಲ**. ಕಮಾಲನಲ್ಲಿ ಮತ್ತು ಅವನ ದೇಶದಲ್ಲಿ ಒಂದೇ ನೆತ್ತರವು ಹರಿದಾಡುತ್ತಲಿದೆ. ತುರ್ಕಸ್ಥಾನವು ತಾರುಣ್ಯದಿಂದ ಬೆಳಗುವವರೆಗೆ ಕಮಾಲನೂ ತರುಣನೆ.

# ಕೆಲವು ಮಹತ್ತ್ವದ ಸಂಗತಿಗಳ ಪಂಚಾಂಗ

೧೮೮೧ ಸಲೋನಿಕಾದಲ್ಲಿ ಕಮಾಲನ ಜನ್ಮ

೧೯೦೩ ಕಮಾಲನು ಯುದ್ಧ ಶಿಕ್ಷಣವನ್ನು ಪಡೆಯಲು ಹೋದುದ

೧೯೦೫ ಕಮಾಲನು ಕಾನಸ್ಟಾಂಟಿನೋಪಲಿನಲ್ಲಿ ಸೈನ್ಯಾಧಿಕಾರಿ ವಿದ್ಯಾ
ಲಯವನ್ನು ಸೇರಿದ್ದು

೧೯೦೮ ಕಮಾಲನು ಸೈನ್ಯಾಧಿಕಾರಿಯಾದುದು

೧೯೧೬ ಕಮಾಲನು ಕಾಕೇಸಸದಲ್ಲಿ ಸೈನ್ಯಾಧಿಕಾರಿಯಾದುದು

೧೯೧೭ ವಾಹಿದೆದ್ದೀನನ ಪರಿವಾರದಲ್ಲಿ ಜರ್ಮನಿಗೆ ಹೋದುದು

೧೯೧೮ ಬಂಡುಗಳನ್ನು ನಡೆಬಡಿಯಲು ಕಮಾಲನು ಹೋದುದು.

೧೯೧೯ ಶಿವಸದಲ್ಲಿ ಸಮ್ಮೇಳನ (ಸಪ್ಟೆಂಬರ ೧೩)

೧೯೨೦ ಪಾರ್ಲಮೆಂಟ ಅಧಿವೇಶನ, **ರಾಷ್ಟ್ರೀಯ ಬೇಡಿಕೆ**
(ಜಾನ್ಯುಅರಿ ೨೮

೧೯೨೦ ಅಂಗೋರಾದಲ್ಲಿ ಮಹಾರಾಷ್ಟ್ರೀಯ ಸಭೆಯ ಅಧಿವೇಶ
(ಎಪ್ರಿಲ್ ೨೩

೧೯೨೦ ಗ್ರೀಕ ಸೈನ್ಯದ ದಾಳಿ (ಜೂನ ೨೨)

೧೯೨೧ ಕಮಾಲನು ಸೈನ್ಯದ ಸರ್ವಾಧಿಕಾರಿ (ಅಗಸ್ಟ ೫)

೧೯೨೨ ಗ್ರೀಕರ ಪರಾಭವ (ಅಗಸ್ಟ ೨೬)

೧೯೨೨ ಸುಲ್ತಾನಿಕೆಯನ್ನು ತೆಗೆದದ್ದು (ನವೆಂಬರ ೧)

೧೯೨೩ ಅಂಗೋರಾ ತುರ್ಕಸ್ತಾನದ ರಾಜಧಾನಿಯಾದದ್ದು
(ಅಕ್ಟೋಬರ ೧೩

೧೯೨೩ ತುರ್ಕಸ್ತಾನವು ಪ್ರಜಾಸತ್ತಾತ್ಮಕವಾಗಿ ಕಮಾಲನು ಅಧ್ಯಕ್ಷ
ನಾಗಿ ಆರಿಸಲ್ಪಟ್ಟದ್ದು (ಅಕ್ಟೋಬರ ೨೮)

೧೯೨೪ ಖಲೀಫನನ್ನು ಹೊರಹೊರಡಿಸಿದ್ದು (ಮಾರ್ಚ ೩)

# ಮಿಂಚಿನಬಳ್ಳಿಯ ಸಹಾಯಕರು

ಸಹಾಯಕರು :—

| | | |
|---|---|---|
| ಶ್ರೀಮಾನ್ | ಎನ್. ಕೆ. ದೀಕ್ಷಿತರು | ೧೨–೦–೦ |
| ,, | ಶಂ. ಬಾ. ಜೋಶಿ | ೧೦–೦–೦ |
| ,, | ಶ್ರೀನಿವಾಸಾಚಾರ್ಯ ಸರಪಳಿ | ೧೨–೦–೦ |
| ಶ್ರೀಮತಿ | ಉಮಾಬಾಯಿ ಕುಂದಾಪೂರ (ಕರ್ನಾಟಕ ಜಿನಿಂಗ ಫ್ಯಾಕ್ಟರಿ) | ೧೦–೦–೦ |

ಹಿತಚಿಂತಕರು :—

| | | |
|---|---|---|
| ಶ್ರೀಮಾನ್ | ಶಂಕರ ಪಾಂಡುರಂಗ ಲಿಮಯೆ | ೫–೮–೦ |
| ,, | ವ್ಹಿ. ಎನ್. ಅಡವಿ | ೫–೨–೦ |
| ,, | ಪ್ರೊ. ಮಾಳವಾಡ | ೫–೦–೦ |
| ,, | ಅಶ್ವತ್ಥರಾವ ಮಹಿಷಿ | ೫–೦–೦ |
| ,, | ಸ್ವಾಮಿರಾವ ವಿಜಾಪೂರ | ೫–೦–೦ |

ಮಿಂಚಿನ ಬಳ್ಳಿಯ ಏನೆಯ ಕುಡಿ

ಕನ್ನಡ ನಾಡಿನ

# ಮಿಂಚಿದ ಮಹಿಳೆಯರು

ಲೇಖಕರು :

**ದೇಸಾಯಿ ಪಾಂಡುರಂಗರಾಯರು** ಎಂ. ಎ.

ಜುಲೈ ೧ಕ್ಕೆ ಪ್ರಕಟವಾಗುವದು.